ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಪುಷ್ಪರತ್ನಸಂಖ್ಯಾ ೫

# ಶ್ರೀದೇವೀಭಾಗವತಂ

## ಮಹಾಪುರಾಣಂ

(ಸಂಸ್ಕೃತ ಮೂಲ ಕನ್ನಡದಲ್ಲಿ ಅರ್ಥಾನುವಾದವಿವರಣೆಗಳೊಡನೆ.)

ಮೊದಲನೆಯ ಸ್ಕಂಧವು



ಅನುವಾದಕ

ಎಡತೊರೆ ಚಂದ್ರಶೇಖರಶಾಸ್ತ್ರೀ, ಎಂ.ಎ.,

ಸಾಹಿತ್ಯವಿದ್ವಾನ್



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

೧೯೪೩

# ಮುನ್ನುಡಿ

---

॥ ಶ್ರೀಗಣೇಶಶಾರದಾಗುರುಭ್ಯೋ ನಮಃ ॥

" ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।" ಭಾರತಾರ್ಯರ ಸಂಸ್ಕೃತಿಯು ಧರ್ಮದ ಅರಿವು ಆಚರಣೆಗಳಿಂದ ಉಂಟಾಗಿ ಬೆಳೆದುಬಂದಿದೆ. ಆದುದರಿಂದ ಈ ಸಂಸ್ಕೃತಿಯು ಸಂಸ್ಕೃತಭಾಷೆಯಲ್ಲಿಯೂ ನಮ್ಮ ದಿನಗಟ್ಟಲೆಯ ಆಚರಣೆಯಲ್ಲೂ ರೂಪುಗೊಂಡಿರುತ್ತದೆ. ಈ ಭಾಷಾಸಂಸ್ಕೃತಿಗಳು ಪರಸ್ಪರವಾಗಿ ಮೇಲಾಗಿ ಹೊಂದಿಕೊಂಡಿರುವುದು ಇತರಾಸಾಧಾರಣವಾದ ಒಂದು ಹೆಚ್ಚುಗಾರಿಕೆಯಾಗಿದೆ. ವೇದಗಳಲ್ಲಿ ಧರ್ಮದ ಸ್ವರೂಪವನ್ನು ಸಂಗ್ರಹವಾಗಿ ಸೂಚಿಸಿದೆ. ಕೆಲವು ದೃಷ್ಟಾಂತಗಳನ್ನೂ ಸಂಕ್ಷೇಪವಾಗಿ ಹೇಳಿದೆ. ಅಲ್ಲದೆ ಪ್ರತಿಯೊಬ್ಬರ ಕರ್ತವ್ಯಕರ್ಮಗಳೇ ಧರ್ಮದ ವಿಶೇಷರೂಪವೆಂದೂ, ವಿಶ್ವವಿಶಾಲವಾದ ಸಾಮಾನ್ಯ ಧರ್ಮವೇ ಈ ಪ್ರಪಂಚವನ್ನು ಕಾಪಾಡಬಲ್ಲುದೆಂದೂ, ಅದನ್ನು ಕಡೆಗಣಿಸಿದರೆ ಕಡೆಗೆ ಸರ್ವನಾಶದುಃಖವು ತಪ್ಪದೆಂದೂ, ಧರ್ಮವೂ ವೇದಾಂತವೂ ಸಾಧನಸಾಧ್ಯಗಳಾಗಿವೆ ಎಂದೂ ಹೇಳಿದೆ. ಧರ್ಮಾಚರಣೆಯಿಂದ ಚಿತ್ತಶುದ್ಧಿಯೂ, ಅಜ್ಞಾನನಿವೃತ್ತಿಯೂ, ಜ್ಞಾನಪ್ರಾಪ್ತಿಯೂ ತಪ್ಪದೆ ದೊರೆಯುತ್ತವೆ. " ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ " " ಸತ್ಯಂ ವದ ಧರ್ಮಂ ಚರ " " ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।" " ಏಕಂ ಸದ್ವಿಪ್ರಾ ಬಹುಧಾ ವದಂತಿ " ಎಂದು ಮುಂತಾದ ಶ್ರುತಿಗಳೂ " ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ ।" " ಧಾರಣಾದ್ಧರ್ಮ ಇತ್ಯಾಹುಃ ಧರ್ಮೋ ಧಾರಯತಿ ಪ್ರಜಾಃ ।" ಎಂದು ಮುಂತಾದ ಸ್ಮೃತಿ ಮತ್ತು ಪುರಾಣವಾಕ್ಯಗಳೂ ಈ ಅಂಶವನ್ನೇ ಸಾರಿಹೇಳುತ್ತಿವೆ.

ಅಲ್ಲದೆ ವೇದದಿಂದ ಬರುವ ಈ ತಿಳಿವಳಿಕೆಯನ್ನು ಪುರಾಣಗಳಲ್ಲೂ ಇತಿಹಾಸಗಳಲ್ಲೂ ವರ್ಣಿಸಿರುವ ವಿವರಗಳಿಂದಲೂ ಉದಾಹರಣೆಗಳಿಂದಲೂ ವಿಶ್ವವಿಶಾಲವಾಗುವಂತೆ ಮಾಡಿಕೊಳ್ಳುತ್ತಾ ಈ ಪ್ರಪಂಚದ ಭವಿಷ್ಯದ ಯೋಗಕ್ಷೇಮಗಳನ್ನು ಸಾಧಿಸಬೇಕಾದುದು ವಿವೇಕಿಗಳಾದ ವಿದ್ಯಾವಂತರ ಧಾರ್ಮಿಕಕರ್ತವ್ಯವಾಗಿದೆ. ಇದರ ತಿಳಿವಳಿಕೆಯಿಂದ ಮನಸ್ಸು ವಿಶಾಲವಾಗಿ, ಇದರ ಆಚರಣೆಯಿಂದ ಹೃದಯವು ವಿಸ್ತಾರವಾಗಿ, ಈ ಪ್ರಪಂಚಕ್ಕೆ ಕಲ್ಯಾಣವಾಗಬೇಕಾಗಿದೆ.

ಇಂತಹ ಒಳ್ಳೆಯ ಫಲವು ದೊರೆಯಬೇಕಾದರೆ ಜನರಲ್ಲಿ ಧರ್ಮದ, ವಿಶ್ವಧರ್ಮದ, ಅರಿವು ಆಚರಣೆಗಳು ಹೆಚ್ಚಾಗಿ ರೂಢಿಯಾಗಬೇಕು. ಅಲ್ಲದೆ " ಋಣಾನಿ ತ್ರೀಣ್ಯಾಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ ।" ಎಂಬ ಧರ್ಮವನ್ನೂ ಎಲ್ಲರಿಗೂ ವಿಧಿಸಿದೆ. ಈ ಋಣಗಳಲ್ಲಿ ಒಂದಾದ ಋಷಿಋಣವನ್ನು ಗ್ರಂಥರಚನೆಯಿಂದಲೂ, ಪಾಠಪ್ರವಚನದಿಂದಲೂ, ತೀರಿಸುವಂತೆ, ಗ್ರಂಥಪ್ರಚಾರಣದಿಂದಲೂ ಮೇಲಾದ ರೀತಿಯಲ್ಲೇ ತೀರಿಸಲು ಅನುಕೂಲವಾಗುತ್ತದೆ. ಹೆಚ್ಚಾಗಿ ಹಣವನ್ನು ವೆಚ್ಚಮಾಡಿ ನೆರವೇರಿಸಬೇಕಾಗಿರುವ ಈ ಕಾರ್ಯವು ಮುಂದಾಲೋಚನೆಯುಳ್ಳ ಧಾರ್ಮಿಕರಾದ ಶ್ರೀಮಂತರನ್ನು ಅವಲಂಬಿಸಿದೆ. ಕೀರ್ತಿಶೇಷರೂ ಪೂಜ್ಯರೂ ಆಗಿರುವ ಆಳಿದ ಮಹಾಸ್ವಾಮಿಗಳವರ ಮಂಗಳಕರಗಳಾದ ಮಾದರಿಗಳನ್ನು ಅನುಸರಿಸಿ ರಾಜ್ಯಭಾರದ ಇತರ ಮಹಾಕಾರ್ಯಗಳನ್ನು ನೆರವೇರಿಸುತ್ತಿರುವಂತೆ, ಈ ಮಹಾಕಾರ್ಯವನ್ನೂ ನೆರವೇರಿಸುವ ಉದ್ದೇಶದಿಂದ ನಮ್ಮನ್ನಾಳುತ್ತಿರುವ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು** ಉದಾರಬುದ್ಧಿಯಿಂದ ಇಂತಹ ಸದ್ಗ್ರಂಥಗಳ ಅರಿವು ಕನ್ನಡಿಗರಿಗೆಲ್ಲರಿಗೂ ದೊರೆಯಲೆಂದು ಈ ದೇವೀಭಾಗವತಮಹಾಪುರಾಣದ ಕನ್ನಡ ಅನುವಾದವನ್ನು ಬರೆಯಿಸಿ ಮುದ್ರಣ ಮಾಡಿಸಿ ಪ್ರಚಾರಮಾಡಲು ಅಪ್ಪಣೆಮಾಡಿರುವುದು ಎಲ್ಲ ಕನ್ನಡಿಗರಿಗೂ ಹೆಮ್ಮೆಯ ವಿಷಯವಾಗಿದೆ. ಈ ಘನವಾದ ಉದ್ದೇಶವು ಸಂತತವಾಗಿ ಮತ್ತು ಸಫಲವಾಗಿ ನೆರವೇರುತ್ತಿರುವಂತಾಗಲೆಂದು ಸರ್ವಶಕ್ತಿಸ್ವರೂಪಳಾದ ದೇವಿಯನ್ನು ಪ್ರಾರ್ಥಿಸುತ್ತೇನೆ.

ಚಿತ್ರಭಾನುಸಂವತ್ಸರದ
ಆಶ್ವಿನ ಕೃಷ್ಣಪಂಚಮೀ

**ಎಡತೊರೆ ದೇವಯ್ಯದೀಕ್ಷಿತರ ಮಗ**
**ಚಂದ್ರಶೇಖರಶಾಸ್ತ್ರೀ.**

# ಶ್ರೀದೇವೀಭಾಗವತದ ಪ್ರಥಮಸ್ಕಂಧದ
# ವಿಷಯಸೂಚಿಕೆ

| ಅಧ್ಯಾಯ | ವಿಷಯ | ಪುಟಸಂಖ್ಯಾ |
|---|---|---|

|| ಶ್ರೀಗಣೇಶಶಾರದಾಗುರುಭ್ಯೋ ನಮಃ ||

# ಶ್ರೀಮದ್ದೇವೀಭಾಗವತಮಹಾಪುರಾಣಂ

## ಪ್ರಥಮಸ್ಕಂಧೇ

### || ಪ್ರಥಮೋಽಧ್ಯಾಯಃ ||

**ಸರ್ವಚೈತನ್ಯರೂಪಾಂ ತಾಮಾದ್ಯಾಂ ವಿದ್ಯಾಂ ಚ ಧೀಮಹಿ ।**
**ಬುದ್ಧಿಂ ಯಾ ನಃ ಪ್ರಚೋದಯಾತ್ ||೧||**

ಆಕಾರಣಕೃಪಾನಿಧಿಂ ಸಗುಣನಿರ್ಗುಣಾಕಾರಿಣೀಂ
ನತಾರ್ತಿಹರಣಕ್ಷಮಾಂ ಪ್ರಕೃತಿಮಾದಿಶಕ್ತಿಂ ಪರಾಂ ।
ಗುಣತ್ರಯಮಯೀಂ ದಯಾರಸಸುಧಾಂ ಜಗನ್ಮಾತರಂ
ಮಹೇಶ್ವರಮನಃಪ್ರಿಯಾಂ ಮಹಿಷಮರ್ದಿನೀಮಾಶ್ರಯೇ ॥

ಎಲ್ಲ ಪ್ರಾಣಿಗಳಲ್ಲೂ ವಿಶೇಷವಾಗಿ ತೋರುತ್ತಿರುವ ತಿಳಿವಳಿಕೆ ಮತ್ತು ತಿಳಿಯುವ ಶಕ್ತಿ ಇವುಗಳೇ ಸ್ವರೂಪವಾಗಿ ಉಳ್ಳ, ಎಲ್ಲಕ್ಕೂ ಮೊದಲಿನವಳಾದ, ಅನಾದಿಯಾಗಿರುವ, ಜ್ಞಾನಸ್ವರೂಪಳಾದ, ಚಿತ್‌ಶಕ್ತಿಸ್ವರೂಪಳಾದ, ಶ್ರುತಿಸ್ಮೃತಿ ಪುರಾಣೇತಿಹಾಸಕಾವ್ಯಗಳಲ್ಲಿ ಪ್ರಸಿದ್ಧಳಾಗಿರುವ ಆ ದೇವಿಯನ್ನು ಧ್ಯಾನಮಾಡುತ್ತೇವೆ. ಆ ದೇವಿಯು ನಮ್ಮ ಬುದ್ಧಿಯನ್ನು ಯಾವಾಗಲೂ ಆ ತಾಯಿಯ ಸಗುಣಮೂರ್ತಿಯ ಅರ್ಚನೆ, ನಿಜಸ್ವರೂಪದ ಧ್ಯಾನ, ತತ್ತ್ವವಿಚಾರ, ಮುಂತಾದ ಧರ್ಮಾಚರಣೆಯಲ್ಲಿ ಆಸಕ್ತವಾಗಿರುವಂತೆ ಪ್ರೇರಿಸುತ್ತಿರಲಿ. ಇದು ಮಂಗಳಪದ್ಯವು.

|| ಶೌನಕ ಉವಾಚ ||

**ಸೂತ ಸೂತ ಮಹಾಭಾಗ ಧನ್ಯೋಽಸಿ ಪುರುಷರ್ಷಭ ।**
**ಯದಧೀತಾಸ್ತ್ವಯಾ ಸಮ್ಯಕ್ ಪುರಾಣಸಂಹಿತಾಃ ಶುಭಾಃ ||೨||**

ಶೌನಕಋಷಿಯು ಹೇಳಿದನು—ಓ ಪುರುಷರಲ್ಲಿ ಶ್ರೇಷ್ಠನಾದ, ಮಹಾತೇಜಸ್ವಿಯೂ ಜ್ಞಾನಿಯೂ ಆಗಿರುವ ಸೂತಮಹರ್ಷಿಯೇ, ನೀನು ಧನ್ಯನು.

ಎಂದರೆ ಸಫಲವಾದ ಜನ್ಮವುಳ್ಳವನು, ಕೃತಕೃತ್ಯನೂ ಆಗಿರುವೆ. ಏಕೆಂದರೆ ಐಹಿಕ ಮತ್ತು ಆಮುಷ್ಮಿಕಗಳಾದ ಎಲ್ಲ ಬಗೆಯ ಕಲ್ಯಾಣಗಳನ್ನೂ ದೊರಕಿಸಿಕೊಡುವ, ವೇದದಂತೆ ಪವಿತ್ರಗಳಾದ ಎಲ್ಲ ಪುರಾಣಗಳನ್ನೂ ನೀನು ಚನ್ನಾಗಿ ಅಧ್ಯಯನ ಮಾಡಿರುವೆ, ಬಾದರಾಯಣವ್ಯಾಸನಿಂದ ಕೇಳಿ ತಿಳಿದುಕೊಂಡಿರುವೆ.

**ಅಷ್ಟಾದಶಪುರಾಣಾನಿ ಕೃಷ್ಣೇನ ಮುನಿನಾಽನಘ ।**
**ಕಥಿತಾನಿ ಸುದಿವ್ಯಾನಿ ಪಠಿತಾನಿ ತ್ವಯಾಽನಘ ॥೩॥**

ಮತ್ಸ್ಯ, ಮಾರ್ಕಂಡೇಯ, ಭವಿಷ್ಯ, ಭಾಗವತ, ಬ್ರಹ್ಮ, ಬ್ರಹ್ಮಾಂಡ, ಬ್ರಹ್ಮವೈವರ್ತ, ವಾಮನ, ವಾಯು, ವಿಷ್ಣು, ವಾರಾಹ, ಅಗ್ನಿ, ನಾರದ, ಪದ್ಮ, ಲಿಂಗ, ಗರುಡ, ಕೂರ್ಮ, ಸ್ಕಾಂದ ಎಂಬ ಹೆಸರುಗಳಿಂದ ಪ್ರಸಿದ್ಧವಾಗಿರುವ ಹದಿನೆಂಟು ಮಹಾಪುರಾಣಗಳನ್ನು ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾಗಿರುವ ವ್ಯಾಸಮಹರ್ಷಿಯು ಹೇಳಿದನು. ಓ ದೋಷರಹಿತನಾಗಿರುವ ಸೂತಮಹರ್ಷಿಯೇ, ನೀನು ಆ ಉತ್ತಮವಾದ ಪುರಾಣಗಳನ್ನು ಕೇಳಿ ಓದಿ ತಿಳಿದುಕೊಂಡಿರುತ್ತೀಯೆ.

**ಪಂಚಲಕ್ಷಣಯುಕ್ತಾನಿ ಸರಹಸ್ಯಾನಿ ಮಾನದ ।**
**ತ್ವಯಾ ಜ್ಞಾತಾನಿ ಸರ್ವಾಣಿ ವ್ಯಾಸಾತ್ಸತ್ಯವತೀಸುತಾತ್ ॥೪॥**

ಅಹಂಕಾರವನ್ನು ನಾಶಮಾಡುವ, ಗೌರವಪುರಸ್ಕಾರಗಳನ್ನು ಉಂಟು ಮಾಡುವ. ಸೂತಮಹರ್ಷಿಯೇ, ಸತ್ಯವತೀದೇವಿಯ ಮಗನಾದ ವ್ಯಾಸನಿಂದ ನೀನು ಮುಂದೆ 'ಸರ್ಗಶ್ಚ ಪ್ರತಿಸರ್ಗಶ್ಚ' ಎಂದು ಮುಂತಾಗಿ ವಿವರಿಸಿರುವ ಐದುಬಗೆಯ ಲಕ್ಷಣಗಳುಳ್ಳ, ಗೂಢಾರ್ಥತಾತ್ಪರ್ಯವಿಶೇಷಗಳನ್ನು ಒಳಗೊಂಡಿರುವ ಎಲ್ಲ ಪುರಾಣಗಳ ತತ್ತ್ವಗಳನ್ನೂ ಕೇಳಿ ತಿಳಿದುಕೊಂಡಿರುವೆ.

**ಅಸ್ಮಾಕಂ ಪುಣ್ಯಯೋಗೇನ ಪ್ರಾಪ್ತಸ್ತ್ವಂ ಕ್ಷೇತ್ರಮುತ್ತಮಂ ।**
**ದಿವ್ಯಂ ವಿಶ್ವಸನಂ ಪುಣ್ಯಂ ಕಲಿದೋಷವಿವರ್ಜಿತಂ ॥೫॥**

ಓ ಸೂತನೇ, ನಮ್ಮ ಪೂರ್ವಜನ್ಮದ ಪುಣ್ಯವಿಶೇಷಗಳ ಪ್ರಭಾವದಿಂದ ನೀನು ಈ ವಿಶ್ವಸನವೆಂಬ ಕ್ಷೇತ್ರಕ್ಕೆ ಬಂದಿರುವೆ. ಈ ಕ್ಷೇತ್ರವು ಕಲಿದೋಷಗಳಿಂದ ಬಿಡಲ್ಪಟ್ಟಿದೆ, ಪುಣ್ಯಕರವಾದುದು, ಶ್ರೇಷ್ಠವಾದುದು ಮತ್ತು ದೇವಯೋಗ್ಯವಾದುದು.

**ಸಮಾಜೋಽಯಂ ಮುನೀನಾಂ ಹಿ ಶ್ರೋತುಕಾಮೋಽಸ್ತಿ ಪುಣ್ಯದಾಂ ।**
**ಪುರಾಣಸಂಹಿತಾಂ ಸೂತ ಬ್ರೂಹಿ ತ್ವಂ ನಸ್ಸಮಾಹಿತಃ ॥೬॥**

ಇಲ್ಲಿ ಕೂಡಿರುವ ಈ ಋಷಿಗಳ ಸಭೆಯು ಪುಣ್ಯಕರವಾದ ಪುರಾಣಗಳ ಒಟ್ಟುಗೂಡಿಸಿರುವ ಮುಖ್ಯವಿಷಯಗಳ ಪವಿತ್ರವಾದ ತತ್ತ್ವಗಳನ್ನು ಕೇಳಬೇಕೆಂದು ಕುತೂಹಲವುಳ್ಳುದಾಗಿದೆ. ಆದುದರಿಂದ ನೀನು ಸಮಾಧಾನವುಳ್ಳ ಮನಸ್ಸುಳ್ಳವನಾಗಿ ಅಂತಹ ಪುರಾಣಸಂಹಿತೆಯನ್ನು ದಯಮಾಡಿ ನಮಗೆ ಹೇಳು.

**ದೀರ್ಘಾಯುರ್ಭವ ಸರ್ವಜ್ಞ ತಾಪತ್ರಯವಿವರ್ಜಿತ ।**
**ಕಥಯಾದ್ಯ ಮಹಾಭಾಗ ಪುರಾಣಂ ಬ್ರಹ್ಮಸಂಮಿತಂ ॥೭॥**

ಎಲ್ಲವನ್ನೂ ತಿಳಿದಿರುವ, ಅತಿಶಯವಾದ ತಿಳಿವಳಿಕೆಯ ತೇಜಸ್ಸಿನಿಂದ ಕೂಡಿರುವ, ಆಧ್ಯಾತ್ಮಿಕ ಮುಂತಾದ ಮೂರುಬಗೆಯ ಸಂಕಟಗಳಿಂದ ಬಿಡಲ್ಪಟ್ಟಿರುವ, ಓ ಸೂತಮಹರ್ಷಿಯೇ, ನೀನು ದೀರ್ಘವಾದ ಆಯುಸ್ಸುಳ್ಳವನಾಗು ಮತ್ತು ಪವಿತ್ರತೆಯಲ್ಲಿ ವೇದಕ್ಕೆ ಸಮಾನವಾದ ಪುರಾಣವನ್ನು ನಮಗೆ ವಿವರಿಸಿ ಹೇಳು.

**ಶ್ರೋತ್ರೇಂದ್ರಿಯಯುತಾಸ್ಸೂತ ನರಾಃ ಸ್ವಾದುವಿಚಕ್ಷಣಾಃ ।**
**ನ ಶೃಣ್ವಂತಿ ಪುರಾಣಾನಿ ವಂಚಿತಾ ವಿಧಿನಾ ಹಿ ತೇ ॥೮॥**

ಓ ಸೂತಮಹರ್ಷಿಯೇ, ಯಾವ ಮಾನವರು ಕಿವಿ ಮುಂತಾದ ಇಂದ್ರಿಯಗಳ ಪಾಟವವನ್ನು ಹೊಂದಿದವರಾಗಿದ್ದರೂ, ಒಳ್ಳೆಯ ವಿಷಯಗಳನ್ನು ತಿಳಿದು ಅಭಿನಂದಿಸಬಲ್ಲವರಾಗಿದ್ದರೂ, ಪುರಾಣಗಳನ್ನು ಕೇಳಲು ಒಲಿಯುವುದಿಲ್ಲವೋ ಅಂಥವರು ನಿರ್ಭಾಗ್ಯರೇ ಸರಿ, ದುರ್ದೈವದಿಂದ ಮೋಸಗೊಳಿಸಲ್ಪಟ್ಟಿರುವವರೂ ಆಗಿದ್ದಾರೆ.

**ಯಥಾ ಜಿಹ್ವೇಂದ್ರಿಯಾಹ್ಲಾದಃ ಷಡ್ರಸೈಃ ಸಂಪ್ರಪದ್ಯತೇ ।**
**ತಥಾ ಶ್ರೋತ್ರೇಂದ್ರಿಯಾಹ್ಲಾದೋ ವಚೋಭಿಃ ಸುಧಿಯಾಂ ಸ್ಮೃತಃ ॥೯॥**

ಸಿಹಿ ಮುಂತಾದ ಆರುಬಗೆಯ ರಸಗಳಿಂದ ರಸನೇಂದ್ರಿಯ (ನಾಲಿಗೆಗೆ) ಕ್ಕೆ ಹೇಗೆ ಸಂತೋಷವುಂಟಾಗುತ್ತದೆಯೋ, ಹಾಗೆಯೇ ಒಳ್ಳೆಯ ತಿಳಿವಳಿಕೆಯುಳ್ಳ ಜ್ಞಾನಿಗಳು ಉಪದೇಶಿಸುವ ವಚನಗಳಿಂದ ಶ್ರೋತ್ರೇಂದ್ರಿಯಕ್ಕೆ (ಕಿವಿಗೆ) ಸಂತೋಷವುಂಟಾಗುವುದು ಎಂದು ಕೇಳಿದೇನೆ.

**ಅಶ್ರೋತ್ರಾಃ ಫಣಿನಃ ಕಾಮಂ ಮುಹ್ಯಂತಿ ಹಿ ನಭೋಗುಣೈಃ ।**
**ಸಕರ್ಣಾ ಯೇ ನ ಶೃಣ್ವಂತಿ ತೇಽಪ್ಯಕರ್ಣಾಃ ಕಥಂ ನ ಚ ॥೧೦॥**

ಪ್ರತ್ಯೇಕವಾಗಿ ಕಿವಿಗಳಿಲ್ಲದಿದ್ದರೂ ಹಾವುಗಳು ಆಕಾಶದ ಗುಣವಾದ ಶಬ್ದದ ಮಾಧುರ್ಯವನ್ನು ಕೇಳಿ ಸಂತೋಷದಿಂದ ನಲಿಯುತ್ತವೆ. ಹೀಗಿದ್ದರೂ ಕಿವಿಗಳುಳ್ಳವರಾದರೂ ಮಾನವರು ಪುರಾಣವಾಕ್ಯಗಳನ್ನು ಕೇಳಿ ಸಂತೋಷಪಡದೆ ಇರುವುದಾದರೆ, ಅಂಥವರನ್ನು ಕಿವಿ ಇಲ್ಲದವರೆಂದೇ ಹೇಳುವುದರಲ್ಲಿ ಅಡ್ಡಿ ಏನಿದೆ ?

**ಅತಃ ಸರ್ವೇ ದ್ವಿಜಾಸ್ಸೌಮ್ಯ ಶ್ರೋತುಕಾಮಾಸ್ಸಮಾಹಿತಾಃ ।**
**ವರ್ತಂತೇ ನೈಮಿಷಾರಣ್ಯೇ ಕ್ಷೇತ್ರೇ ಕಲಿಭಯಾರ್ದಿತಾಃ ॥೧೧॥**

ಮನಸ್ಸಿಗೆ ಆಪ್ಯಾಯವನ್ನುಂಟುಮಾಡುವ ಸ್ವರೂಪವುಳ್ಳ ಸೂತಮುನಿಯೇ, ಆದುದರಿಂದ ಈ ನೈಮಿಷಾರಣ್ಯದ ವಿಶ್ವಸನಕ್ಷೇತ್ರದಲ್ಲಿ ಎಲ್ಲ ದ್ವಿಜರೂ ಸೇರಿದ್ದಾರೆ. ಅವರು ಕಲಿಗಾಲದ ಪಾಪದ ಸಂಬಂಧದಿಂದ ಹೆದರಿದವರಾಗಿ ಸಮಾಧಾನದಿಂದ ಕೂಡಿದ ಮನಸ್ಸಿನಿಂದ ಈ ಪುರಾಣವನ್ನು ಕೇಳಲು ಬಯಸುವವರಾಗಿದಾರೆ.

**ಯೇನ ಕೇನಾಪ್ಯುಪಾಯೇನ ಕಾಲಾತಿವಾಹನಂ ಸ್ಮೃತಂ ।**
**ವ್ಯಸನೈರಿಹ ಮೂರ್ಖಾಣಾಂ ಬುಧಾನಾಂ ಶಾಸ್ತ್ರಚಿಂತನೈಃ ॥೧೨॥**

ಯಾವುದಾದರೂ ಒಂದು ಒಳ್ಳೆಯ ರೀತಿಯಿಂದ ಕಾಲವನ್ನು ಕಳೆಯಬೇಕೆಂದು ಶಾಸ್ತ್ರದಲ್ಲಿ ಹೇಳಿದೆ. ಮೂರ್ಖರಾದವರು ಇಂದ್ರಿಯಲಂಪಟರಾಗಿ ವಿಷಯಸುಖ ಗಳನ್ನು ಅನುಭವಿಸುವುದರಲ್ಲಿ ಕಾಲವನ್ನು ವ್ಯರ್ಥಮಾಡಿಕೊಳ್ಳುತ್ತಾರೆ. ತಿಳಿವಳಿಕೆ ಯುಳ್ಳ ವಿವೇಕಿಗಳು ಶಾಸ್ತ್ರಗಳಲ್ಲಿ ವಿವರಿಸಿರುವ ತತ್ತ್ವಾರ್ಥಗಳನ್ನು ವಿಚಾರಿಸಿ ತಿಳಿದುಕೊಳ್ಳುವುದರಲ್ಲಿ ಕಾಲವನ್ನು ಉಪಯೋಗಿಸಿಕೊಳ್ಳುತ್ತಾರೆ.

**ಶಾಸ್ತ್ರಾಣ್ಯಪಿ ವಿಚಿತ್ರಾಣಿ ಜಲ್ಪವಾದಯುತಾನಿ ಹಿ ।**
**[ತ್ರಿವಿಧಾನಿ ಪುರಾಣಾನಿ ಶಾಸ್ತ್ರಾಣಿ ವಿವಿಧಾನಿ ತು ।**
**ವಿತಂಡಾಚ್ಛಲಯುಕ್ತಾನಿ ಗರ್ವಾಮರ್ಷಕರಾಣಿ ವೈ]**
**ನಾನಾರ್ಥವಾದಯುಕ್ತಾನಿ ಹೇತುಮಂತಿ ಬೃಹಂತಿ ಚ ॥೧೩॥**

ತತ್ತ್ವಾರ್ಥವನ್ನು ತಿಳಿಯಲು ವಿವರಿಸುವ ನಾನಾರ್ಥವುಳ್ಳ ವಾಕ್ಯಕ್ಕೆ ವಾದ ವೆಂದೂ, ವಾದಿಪ್ರತಿವಾದಿಗಳಿಬ್ಬರೂ ತಮ್ಮ ಎದುರಾಳಿಯನ್ನು ಜಯಿಸಬೇಕೆಂಬ ಇಚ್ಛೆಯಿಂದ ಹೇಳುವ ವಾಕ್ಯಗಳಿಗೆ ಜಲ್ಪವೆಂದೂ, ತಮ್ಮ ತಮ್ಮ ಶಾಸ್ತ್ರಸಿದ್ಧಾಂತ

ವನ್ನು ವಿವರಿಸದೆ ಎದುರಾಳಿಗಳ ಸಿದ್ಧಾಂತವನ್ನು ಮಾತ್ರ ಖಂಡಿಸುವ, ದೂಷಿಸುವ ವಾಕ್ಯಗಳಿಗೆ ವಿತಂಡಾ ಎಂದೂ, ಅರ್ಥಾಂತರಗಳನ್ನು ಕಲ್ಪಿಸಿ ಸೋಲಿನ ಅಂಶಗಳನ್ನು ಸೂಚಿಸುವ ವಾಕ್ಯಗಳಿಗೆ ಛಲವೆಂದೂ, ಶಾಸ್ತ್ರಗಳು ಹೇಳುವ ವಿಧಿನಿಷೇಧಗಳಲ್ಲಿ ಜನರಿಗೆ ಪ್ರವೃತ್ತಿನಿವೃತ್ತಿಗಳು ಉಂಟಾಗುವುದಕ್ಕೆ ಸಹಾಯಮಾಡುವ ಕಥೆಗಳಿಗೆ ಅರ್ಥವಾದಗಳೆಂದೂ ಹೆಸರು. ಶಾಸ್ತ್ರಗಳಲ್ಲಿ ಎಂದರೆ, ಪುರಾಣ ಇತಿಹಾಸ ಧರ್ಮ ಶಾಸ್ತ್ರ ದರ್ಶನಗಳು ಇವುಗಳಲ್ಲಿ ಜಲ್ಪ, ವಾದ, ವಿತಂಡಾ, ಛಲ, ಅರ್ಥವಾದ ಮುಂತಾದುವು ಹೇರಳವಾಗಿವೆ. ಅಲ್ಲಲ್ಲಿ ಕಾರಣವಾದಗಳೂ ಬರುತ್ತವೆ. ಒಟ್ಟಿನಲ್ಲಿ ಇವುಗಳಿಂದ ಆ ಗ್ರಂಥಗಳು ಬಹುದೊಡ್ಡವಾಗಿವೆ. ಅವು ಒಂದೊಂದು ವೇಳೆ ಅಹಂಕಾರಕೋಪಗಳನ್ನೂ ಉಂಟುಮಾಡುವಂತಹವೂ ಆಗಿವೆ. ಹೀಗೆ ಪುರಾಣಗಳಲ್ಲಿ ಮೂರುಬಗೆಯನ್ನು ಕಾಣಬಹುದು.

**ಸಾತ್ವಿಕಂ ತತ್ರ ವೇದಾಂತಂ ಮೀಮಾಂಸಾ ರಾಜಸಂ ಮತಂ ।**
**ತಾಮಸಂ ನ್ಯಾಯಶಾಸ್ತ್ರಂ ಚ ಹೇತುವಾದಾಭಿಯಂತ್ರಿತಂ ॥೧೪॥**

ಆ ಶಾಸ್ತ್ರಗಳಲ್ಲಿ ವೇದಾಂತಶಾಸ್ತ್ರವು ಸಾತ್ವಿಕಸ್ವಭಾವವನ್ನುಂಟುಮಾಡುತ್ತದೆ. ಮೀಮಾಂಸಾಶಾಸ್ತ್ರವ್ಯಾಸಂಗದಿಂದ ರಾಜಸಸ್ವಭಾವವು ಬಲಗೊಳ್ಳುತ್ತದೆ. ತರ್ಕ ಶಾಸ್ತ್ರದ ಅಭ್ಯಾಸದಿಂದ ಜನರಲ್ಲಿ ತಾಮಸಸ್ವಭಾವವು ಹೆಚ್ಚುತ್ತದೆ. ಏಕೆಂದರೆ ಅದರಲ್ಲಿ ನಂಬಿಕೆಯನ್ನೂ ಶ್ರದ್ಧೆಭಕ್ತಿಗಳನ್ನೂ ಸಡಿಲಿಸುವ ಕಾರಣಗಳ ಅಪೇಕ್ಷೆಯು ಹೆಚ್ಚಾಗಿ ಮುಂದಾಗಿರುತ್ತದೆ. ಅಲ್ಲದೆ ಪರಬ್ರಹ್ಮ ಮುಂತಾದ ತತ್ತ್ವಗಳ ವಿವರಣೆಗೆ ಅದರಲ್ಲಿ ಪ್ರಾಮುಖ್ಯವನ್ನೂ ಕೊಟ್ಟಿರುವುದಿಲ್ಲವು.

**ತಥೈವ ಚ ಪುರಾಣಾನಿ ತ್ರಿಗುಣಾನಿ ಕಥಾನಕೈಃ ।**
**ಕಥಿತಾನಿ ತ್ವಯಾ ಸೌಮ್ಯ ಪಂಚಲಕ್ಷಣವಂತಿ ಚ ॥೧೫॥**

ಓ ಸೌಮ್ಯನಾದ ಸೂತಮಹರ್ಷಿಯೇ, ಅದರಂತೆಯೇ ಪುರಾಣಗಳಲ್ಲೂ ಕಥೆಯ ಸ್ವಭಾವವನ್ನನುಸರಿಸಿ ಮೂರುಬಗೆ ಇದೆ ಎಂದೂ, ಐದು ಲಕ್ಷಣಗಳಿಂದ ಅವು ಕೂಡಿವೆ ಎಂದೂ ನೀನು ಹೇಳಿರುವೆ.

**ತತ್ರ ಭಾಗವತಂ ಪುಣ್ಯಂ ಪಂಚಮಂ ವೇದಸಂಮತಂ ।**
**ಕಥಿತಂ ಯತ್ತ್ವಯಾ ಪೂರ್ವಂ ಸರ್ವಲಕ್ಷಣಸಂಯುತಂ ॥೧೬॥**

ಆ ಪುರಾಣಗಳಲ್ಲಿ ಭಾಗವತಪುರಾಣವು ಐದನೆಯ ವೇದಕ್ಕೆ ಸಮಾನವಾದು ದೆಂದು ವಿದ್ವಾಂಸರ ಅಭಿಪ್ರಾಯವೆಂದೂ, ಎಲ್ಲ ಲಕ್ಷಣಗಳಿಂದ ಕೂಡಿದುದಾಗಿದೆ ಎಂದೂ ನೀನೇ ಹೇಳಿರುವೆ.

**ಉದ್ದೇಶಮಾತ್ರೇಣ ತದಾ ಕೀರ್ತಿತಂ ಪರಮಾದ್ಭುತಂ ।**
**ಮುಕ್ತಿಪ್ರದಂ ಮುಮುಕ್ಷೂಣಾಂ ಕಾಮದಂ ಧರ್ಮದಂ ತಥಾ ॥೧೭॥**

ಮೋಕ್ಷವನ್ನು ಇಚ್ಛಿಸುವವರಿಗೆ ಮುಕ್ತಿಯನ್ನೂ, ಹಾಗೆಯೇ ಇತರರಿಗೆ ಧರ್ಮ ಕಾಮ ಮುಂತಾದ ಪುರುಷಾರ್ಥಗಳ ತಿಳಿವಳಿಕೆಯನ್ನೂ ಕೊಡುವ, ಆಶ್ಚರ್ಯ ಕರವಾದ ಆ ಭಾಗವತವನ್ನು ಸಂಗ್ರಹವಾಗಿ ಮಾತ್ರ ನೀನು ಸೂಚಿಸಿದೆ.

**ವಿಸ್ತರೇಣ ತದಾಖ್ಯಾಹಿ ಪುರಾಣೋತ್ತಮಮಾದರಾತ್ ।**
**ಶ್ರೋತುಕಾಮಾ ದ್ವಿಜಾಸ್ಸರ್ವೇ ದಿವ್ಯಂ ಭಾಗವತಂ ಶುಭಂ ॥೧೮॥**

ಮಂಗಳಕರವಾದ ಉತ್ತಮವಾದ ಆ ಭಾಗವತಪುರಾಣವನ್ನು ಕೇಳಲು ಇಚ್ಛೆಯುಳ್ಳವರಾಗಿ ಎಲ್ಲ ದ್ವಿಜರೂ ಸೇರಿರುತ್ತಾರೆ. ಆದುದರಿಂದ ಓ ಸೂತನೇ, ಆ ಶ್ರೇಷ್ಠವಾದ ಪುರಾಣವನ್ನು ಆದರದೊಡನೆ ತಿಳಿಸು,

**ತ್ವಂ ತು ಜಾನಾಸಿ ಧರ್ಮಜ್ಞ ಪೌರಾಣೀಂ ಸಂಹಿತಾಂ ಕಿಲ ।**
**ಕೃಷ್ಣೋಕ್ತಾಂ ಗುರುಭಕ್ತತ್ವಾತ್ ಸಮ್ಯಕ್ಸತ್ತ್ವಗುಣಾಶ್ರಯಃ ॥೧೯॥**

ಎಲ್ಲ ಬಗೆಯ ಧರ್ಮವನ್ನೂ ತಿಳಿದಿರುವ ಓ ಸೂತನೇ, ಸತ್ತ್ವಗುಣಕ್ಕೆ ಆಧಾರದಂತಿರುವ ನೀನು ಗುರುವಿನಲ್ಲಿ ಭಕ್ತಿಯುಳ್ಳವನಾದುದರಿಂದ ಕೃಷ್ಣದ್ವೈಪಾ ಯನನೆಂದು ಪ್ರಸಿದ್ಧನಾದ ವ್ಯಾಸಮಹರ್ಷಿಯಿಂದ ವಿವರಿಸಲ್ಪಟ್ಟ ಆ ಪುರಾಣ ಸಂಹಿತೆಯನ್ನು ಚೆನ್ನಾಗಿ ತಿಳಿದಿರುವೆ.

**ಶ್ರುತಾನ್ಯನ್ಯಾನಿ ಸರ್ವಜ್ಞ ತ್ವನ್ಮುಖಾನ್ನಿಸ್ಸೃತಾನಿ ಚ ।**
**ನೈವ ತೃಪ್ತಿಂ ವ್ರಜಾಮೋಽದ್ಯ ಸುಧಾಪಾನೇಽಮರಾ ಯಥಾ ॥೨೦॥**

ನಿನ್ನ ಮುಖದಿಂದಲೇ ಹೊರಟ ಇತರ ಪುರಾಣಗಳನ್ನು ನಾವು ಕೇಳಿದೇವೆ. ಅಮೃತವನ್ನು ಪಾನಮಾಡುವುದರಲ್ಲಿ ದೇವತೆಗಳು ಹೇಗೋ ಹಾಗೆ ನಿನ್ನಿಂದ ಪುರಾಣಗಳನ್ನು ಕೇಳುವುದರಲ್ಲಿ ನಮಗೆ ತೃಪ್ತಿಯು, ಎಂದರೆ ಇಷ್ಟು ಸಾಕು, ಇನ್ನು ಹೆಚ್ಚಾಗಿ ಬೇಡ, ಎಂಬ ಭಾವವು ಉಂಟಾಗಿರುವುದಿಲ್ಲವು.

**ಧಿಕ್ಸುಧಾಂ ಪಿಬತಾಂ ಸೂತ ಮುಕ್ತಿರ್ನೈವ ಕದಾಚನ ।**
**ಪಿಬನ್ ಭಾಗವತಂ ಸದ್ಯೋ ನರೋ ಮುಚ್ಯೇತ ಸಂಕಟಾತ್ ॥೨೦॥**

ಅಲ್ಲದೆ ಓ ಸೂತನೇ, ಅಮೃತವನ್ನು ಪಾನಮಾಡುವ ದೇವತೆಗಳ ಮಾತಿರಲಿ, ಅವರ ಜೀವನವೂ ಮೇಲಾದುದಲ್ಲವು. ಏಕೆಂದರೆ, ಅವರಿಗೆ ಯಾವಾಗಲೂ ಮುಕ್ತಿ ಯುಂಟಾಗುವುದೇ ಇಲ್ಲವು. ಆದರೆ ಮಾನವನು ಈ ಭಾಗವತವೆಂಬ ಅಮೃತವನ್ನು ಪಾನಮಾಡಿದರೆ ಆ ಕೂಡಲೇ ಸಂಸಾರದುಃಖದಿಂದ ಬಿಡುಗಡೆಯನ್ನು ಹೊಂದುತ್ತಾನೆ.

**ಸುಧಾಪಾನನಿಮಿತ್ತಂ ಯತ್ ಕೃತಾ ಯಜ್ಞಾಸ್ಸಹಸ್ರಶಃ ।**
**ನ ಶಾಂತಿಮಧಿಗಚ್ಛಾಮಃ ಸೂತ ಸರ್ವಾತ್ಮನಾ ವಯಂ ॥೨೨॥**

ಸ್ವರ್ಗ ಮುಂತಾದ ಲೋಕಗಳನ್ನು ಪಡೆದು ಅಮೃತವನ್ನು ಪಾನಮಾಡ ಬೇಕೆಂಬ ಉದ್ದೇಶದಿಂದ ಅನೇಕ ಯಜ್ಞಗಳನ್ನು ನಾವು ಆಚರಿಸಿದೆವು. ಅದರಂತೆ ಆ ಫಲವನ್ನೂ ಅನುಭವಿಸಿದೆವು. ಆದರೆ ಅದರಿಂದ ನಾವು ಯಾವವಿಧದಲ್ಲೂ ಮನಶ್ಶಾಂತಿಯನ್ನು ಮಾತ್ರ ಪಡೆಯದೆ ಇದೇವೆ.

**ಮಖಾನಾಂ ಹಿ ಫಲಂ ಸ್ವರ್ಗಃ ಸ್ವರ್ಗಾತ್ಪ್ರಚ್ಯವನಂ ಪುನಃ ।**
**ಏವಂ ಸಂಸಾರಚಕ್ರೇಽಸ್ಮಿನ್ ಭ್ರಮಣಂ ಚ ನಿರಂತರಂ ॥೨೩॥**

ಜ್ಯೋತಿಷ್ಟೋಮ ಮುಂತಾದ ಯಜ್ಞಗಳಿಗೆ ಸ್ವರ್ಗಲೋಕಪ್ರಾಪ್ತಿಯು ಫಲವಾಗಿದೆ. ಅಲ್ಲಿ ಸುಖವನ್ನು ಆ ಕರ್ಮದಿಂದ ಸಂಪಾದಿಸಿದ್ದ ಪುಣ್ಯಕ್ಕೆ ತಕ್ಕಷ್ಟು ಕಾಲಮಾತ್ರ ಅನುಭವಿಸಿದ ಮೇಲೆ ಆ ಸ್ವರ್ಗವು ತಪ್ಪಿಹೋಗುತ್ತದೆ. ಅಲ್ಲಿಂದ ಪುನಃ ಭೂಲೋಕಕ್ಕೆ ಹಿಂತಿರುಗಿ ಬರಬೇಕು. ಪುನಃ ಪುನಃ ಕರ್ಮಗಳನ್ನು ಮಾಡಿದರೂ ಹೀಗೆಯೇ. ಆದುದರಿಂದ ಈ ಸಂಸಾರಚಕ್ರದಲ್ಲಿ ಹೀಗೆ ಸುತ್ತಿ ಬಳಲುತ್ತಿರುವುದು ಎಡಬಿಡದೆ ಇರುತ್ತದೆ.

**ವಿನಾ ಜ್ಞಾನೇನ ಸರ್ವಜ್ಞ ನೈವ ಮುಕ್ತಿಃ ಕದಾಚನ ।**
**ಭ್ರಮತಾಂ ಕಾಲಚಕ್ರೇಽತ್ರ ನರಾಣಾಂ ತ್ರಿಗುಣಾತ್ಮಕೇ ॥೨೪॥**

ಆದುದರಿಂದ ಸತ್ತ್ವರಜಸ್ತಮಸ್ ಎಂಬ ಮೂರು ಗುಣಗಳ ಪರಿಣಾಮ ರೂಪವಾದ ಈ ಕಾಲಚಕ್ರದಲ್ಲಿ ಸುತ್ತುತ್ತಿರುವ ಮಾನವರಿಗೆ ತತ್ತ್ವಜ್ಞಾನದಿಂದ ಹೊರತು ಮತ್ತೆ ಯಾವುದರಿಂದಲೂ ಮೋಕ್ಷವು ಎಂದಿಗೂ ದೊರೆಯುವುದಿಲ್ಲವು.

**ಅತಃ ಸರ್ವರಸೋಪೇತಂ ಪುಣ್ಯಂ ಭಾಗವತಂ ವದ ।**
**ಪಾವನಂ ಮುಕ್ತಿದಂ ಗುಹ್ಯಂ ಮುಮುಕ್ಷೂಣಾಂ ಸದಾ ಪ್ರಿಯಂ ॥೨೫॥**

ಆದುದರಿಂದ ನಾನಾಬಗೆಯ ರಸಗಳಿಂದ ಎಂದರೆ, ಮಹಾಮಹಿಮನಾದ ದೇವರಲ್ಲೂ, ಹಿತಕಾರಿಯಾದ ಗುರುವಿನಲ್ಲೂ ಭಕ್ತಿ, ದೇವರು, ಜೀವರು, ಪ್ರಪಂಚ, ಪರಬ್ರಹ್ಮ, ಇವುಗಳ ಆಶ್ಚರ್ಯಕರವಾದ ತತ್ತ್ವಜ್ಞಾನ, ಇದಕ್ಕೆ ಬೇಕಾಗುವ ವೈರಾಗ್ಯ, ನಿಷ್ಕಾಮಕರ್ಮಾಚರಣೆ, ಚಿತ್ತಶುದ್ಧಿ, ಜ್ಞಾನಪ್ರಾಪ್ತಿ, ನಿತ್ಯಸುಖಾನುಭವ ಮುಂತಾದ ನಾನಾಬಗೆಯ ರಸಗಳಿಂದ ಕೂಡಿರುವ, ಪುಣ್ಯಕರವಾದ, ಚಿತ್ತಶುದ್ಧಿಯನ್ನುಂಟುಮಾಡುವ, ಮೋಕ್ಷಾನಂದವನ್ನು ಅನುಗ್ರಹಿಸುವ, ಎಲ್ಲರಿಗೂ ಸುಲಭವಾಗಿ ಗೋಚರವಾಗದೆ ರಹಸ್ಯವಾಗಿರುವ, ಮೋಕ್ಷವನ್ನು ಅಪೇಕ್ಷಿಸುವವರಿಗೆ ಯಾವಾಗಲೂ ಹಿತಕಾರಿಯಾದ ಭಾಗವತಪುರಾಣವನ್ನು ನಮಗೆ ತಿಳಿಯಹೇಳು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಅಷ್ಟಾದಶಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮಸ್ಕಂಧೇ ಶೌನಕಪ್ರಶ್ನೋ ನಾಮ**
**॥ ಪ್ರಥಮೋಽಧ್ಯಾಯಃ ॥**

ಈ ಪ್ರಕಾರವಾಗಿ ಹದಿನೆಂಟುಸಾವಿರ ಪದ್ಯಗಳುಳ್ಳ, ವೇದದಂತೆ ಪವಿತ್ರವಾದ, ಒಟ್ಟುಗೂಡಿಸಿರುವ ಹದಿನೆಂಟು ಮಹಾಪುರಾಣಗಳಲ್ಲಿ ಒಂದಾಗಿರುವ, ದೇವೀ ಮಹಿಮೆಯನ್ನು ಸರ್ವೋತ್ಕೃಷ್ಟವೆಂದು ವರ್ಣಿಸಿರುವ, ಭಾಗವತ ಕಥೆಯಲ್ಲಿ ಮೊದಲನೆಯ ಸ್ಕಂಧದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

|| ದ್ವಿತೀಯೋಽಧ್ಯಾಯಃ ||

### ಎರಡನೆಯ ಅಧ್ಯಾಯವು

|| ಶ್ರೀಸೂತ ಉವಾಚ ||

**ಧನ್ಯೋಽಹಮತಿಭಾಗ್ಯೋಽಹಂ ಪಾವಿತೋಽಹಂ ಮಹಾತ್ಮಭಿಃ ।**
**ಯತ್ಪೃಷ್ಟಂ ಸುಮಹತ್ಪುಣ್ಯಂ ಪುರಾಣಂ ವೇದವಿಶ್ರುತಂ ॥೧॥**

ಪ್ರಪಂಚಜನಿಪಾಲನಪ್ರಳಯರೂಪಲೀಲಾಪರಾಂ
ಉಪಾಧಿಗುಣರೂಪಿಣೀಮಜಹರೀಶರೂಪಾನ್ವಿತಾಂ ।
ಸರಸ್ವತಿರಮಾಮುಮಾಂ ಸ್ಫುರದನಂತಸಚ್ಚಿತ್ಸುಖಾಂ
ಭಜಾಮಿ ಭುವನೇಶ್ವರೀಂ ಪ್ರಕೃತಿಶಕ್ತಿದೇವೀಂ ಪರಾಂ ॥

ಓ ಶೌನಕಾದಿಮಹರ್ಷಿಗಳೇ, ನಾನೇ ಧನ್ಯನು, ಪುಣ್ಯಶಾಲಿಯು. ನಿಮ್ಮಿಂದ ಪರಿಶುದ್ಧನಾಗಿದೇನೆ. ಏಕೆಂದರೆ, ತುಂಬ ಪುಣ್ಯಕರವಾದ ವೇದಗಳಲ್ಲಿ ಪ್ರಸಿದ್ಧವಾಗಿರುವ ಪುರಾಣವನ್ನು ಹೇಳಬೇಕೆಂದು ನೀವು ಕೇಳಿರುವಿರಿ. ಇಂತಹ ಪುರಾಣವನ್ನು ಹೇಳುವುದರಿಂದ ನಾನು ಕೃತಕೃತ್ಯನಾಗುತ್ತೇನೆ.

**ತದಹಂ ಸಂಪ್ರವಕ್ಷ್ಯಾಮಿ ಸರ್ವಶ್ರುತ್ಯರ್ಥಸಂಮತಂ ।**
**ರಹಸ್ಯಂ ಸರ್ವಶಾಸ್ತ್ರಾಣಾಂ ಆಗಮಾನಾಮನುತ್ತಮಂ ॥೨॥**

ಎಲ್ಲ ವೇದಗಳ ಮುಖ್ಯಾರ್ಥಕ್ಕೆ ಅನುಸಾರವಾಗಿರುವ, ಎಲ್ಲ ಶಾಸ್ತ್ರಗಳ ರಹಸ್ಯಾರ್ಥವನ್ನು ಒಳಗೊಂಡಿರುವ, ಆಗಮಗಳಲ್ಲಿ ಶ್ರೇಷ್ಠವಾದ, ಆ ದೇವೀಭಾಗವತ ಮಹಾಪುರಾಣವನ್ನು ನಿಮಗೆ ನಾನು ಹೇಳುತ್ತೇನೆ.

**ನತ್ವಾ ತತ್ಪದಪಂಕಜಂ ಸುಲಲಿತಂ ಮುಕ್ತಿಪ್ರದಂ ಯೋಗಿನಾಂ ।**
**ಬ್ರಹ್ಮಾದ್ಯೈರಪಿ ಸೇವಿತಂ ಸ್ತುತಿಪರೈರ್ಧ್ಯೇಯಂ ಮುನೀಂದ್ರೈಸ್ಸದಾ॥**
**ವಕ್ಷ್ಯಾಮ್ಯದ್ಯ ಸವಿಸ್ತರಂ ಬಹುರಸಂ ಶ್ರೀಮತ್ಪುರಾಣೋತ್ತಮಂ ।**
**ಭಕ್ತ್ಯಾ ಸರ್ವರಸಾಲಯಂ ಭಗವತೀನಾಮ್ನಾ ಪ್ರಸಿದ್ಧಂ ದ್ವಿಜಾಃ॥೩॥**

ಓ ಶೌನಕಾದಿಋಷಿಗಳಿರಾ, ನಾನು ಕಮಲದ ಹಾಗಿರುವ ಆ ದೇವಿಯ ಪಾದಗಳಿಗೆ ನಮಸ್ಕರಿಸಿ, ಫಲಕಾಮನೆ ಇಲ್ಲದೆ ತಮ್ಮ ತಮ್ಮ ಧರ್ಮಗಳನ್ನು ಆಚರಿಸುತ್ತಾ ಚಿತ್ತಶುದ್ಧಿಯನ್ನು ಪಡೆದು ಜ್ಞಾನಿಗಳಾದ ಯೋಗಿಗಳಿಗೆ ಮೋಕ್ಷವನ್ನು ಕೊಡುವ, ಗುಣವರ್ಣನೆಯಲ್ಲಿ ಆಸಕ್ತರಾದ ಬ್ರಹ್ಮನೇ ಮುಂತಾದವರಿಂದ ಅವಲಂಬಿಸಲ್ಪಟ್ಟಿರುವ, ಶ್ರೇಷ್ಠವಾದ ಮುನಿಗಳು ಯಾವಾಗಲೂ ಧ್ಯಾನಮಾಡುತ್ತಿರುವ, ಮಹಾಮಹಿಮಶಾಲಿನಿಯಾದ ದೇವಿಯ ಹೆಸರಿನಿಂದ ಪ್ರಸಿದ್ಧವಾಗಿರುವ ಭಕ್ತಿ, ಆಶ್ಚರ್ಯ ಮುಂತಾದ ನಾನಾ ರಸಗಳಿಂದ ತುಂಬಿರುವ, ಉಜ್ಜ್ವಲವಾಗಿರುವ, ಮನೋಹರವಾಗಿರುವ, ಆ ದೇವೀಭಾಗವತವೆಂಬ ಶ್ರೇಷ್ಠವಾದ ಪುರಾಣವನ್ನು ನಿಮಗೆ ಹೇಳುವೆನು.

**ಯಾ ವಿದ್ಯೇತ್ಯಭಿಧೀಯತೇ ಶ್ರುತಿಪಥೇ ಶಕ್ತಿಃ ಸದಾಽಽದ್ಯಾಪರಾ**
**ಸರ್ವಜ್ಞಾ ಭವಬಂಧಚ್ಛಿತ್ತಿ(ನಾಶ)ನಿಪುಣಾ ಸರ್ವಾಶಯೇ ಸಂಸ್ಥಿತಾ ।**
**ದುರ್ಜ್ಞೇಯಾ ಸುದುರಾತ್ಮಭಿಶ್ಚ ಮುನಿಭಿರ್ಧ್ಯಾನಾಸ್ಪದಂ ಪ್ರಾಪಿತಾ**
**ಪ್ರತ್ಯಕ್ಷಾ ಭವತೀಹ ಸಾ ಭಗವತೀ ಬುದ್ಧಿಪ್ರದಾ ಸ್ಯಾತ್ಸದಾ ॥೪॥**

ವೇದಗಳಿಂದ ಯಾರನ್ನು ಆದಿಶಕ್ತಿ ಎಂದೂ ಪರಾವಿದ್ಯೆ ಎಂದೂ ಕೇಳುತ್ತೇವೋ ಯಾರು ಎಲ್ಲವನ್ನೂ ತಿಳಿದವಳೂ ಈ ಸಂಸಾರದ ಸಂಕೋಲೆಯ ದುಃಖವನ್ನು ನಿವಾರಿಸಬಲ್ಲವಳೂ ಆಗಿ, ಎಲ್ಲರ ಹೃದಯಗಳಲ್ಲೂ ಅಂತರ್ಯಾಮಿರೂಪಳಾಗಿರುತ್ತಾಳೋ, ಕೆಟ್ಟಜನರು ಯಾರನ್ನು ತಿಳಿಯಲಾರರೋ, ಮುನಿಗಳು ಯಾರನ್ನು ಧ್ಯಾನಮಾಡುತ್ತಿರುತ್ತಾರೋ, ಅಂಥಾ ಷಡ್ಗುಣೈಶ್ವರ್ಯಸಂಪನ್ನಳಾದ ದೇವಿಯನ್ನು ಧ್ಯಾನಮಾಡಿದರೆ ನಮಗೂ ಗೋಚರಳಾಗುತ್ತಾಳೆ. ಅಲ್ಲದೆ ಅವಳು ನಮಗೆ ಯಾವಾಗಲೂ ಒಳ್ಳೆಯಬುದ್ಧಿಯನ್ನು ಅನುಗ್ರಹಿಸುತ್ತಿರಲಿ ॥

**ಸೃಷ್ಟ್ವಾಽಖಿಲಂ ಜಗದಿದಂ ಸದಸತ್ಸ್ವರೂಪಂ**
**ಶಕ್ತ್ಯಾ ಸ್ವಯಾ ತ್ರಿಗುಣಯಾ ಪರಿಪಾತಿ ತತ್ಸಂ ।**

ಸಂಹೃತ್ಯ ಕಲ್ಪಸಮಯೆ ರಮತೇ ತಥೈಕಾ
ತಾಂ ಸರ್ವವಿಶ್ವಜನನೀಂ ಮನಸಾ ಸ್ಮರಾಮಿ ॥೫॥

ಈ ಪ್ರಪಂಚವೆಲ್ಲವೂ ವ್ಯಾವಹಾರಿಕ ದೃಷ್ಟಿಯಲ್ಲಿ ನಾಮರೂಪಗಳುಳ್ಳದ್ದಾಗಿ ಸುಖದುಃಖಗಳಿಗೆ ಕಾರಣವಾಗಿರುವಂತೆ ಅಜ್ಞಾನಿಗಳಿಗೆ ಸದ್ರೂಪವಾಗಿ ತೋರುತ್ತಿರುತ್ತದೆ. ಆದರೆ ಪಾರಮಾರ್ಥಿಕದೃಷ್ಟಿಯಲ್ಲಿ ಪರತತ್ತ್ವವನ್ನು ಸಾಕ್ಷಾತ್ಕರಿಸಿಕೊಂಡಿರುವ ಜ್ಞಾನಿಗಳಿಗೆ ಹಾಗೆ ತೋರದೆ ಅದು ಇದ್ದರೂ ಇಲ್ಲದಂತಾಗಿ ಅಸದ್ರೂಪವಾಗುತ್ತದೆ. ಆದುದರಿಂದ ಸದಸದ್ರೂಪವಾದ ಈ ಪ್ರಪಂಚವೆಲ್ಲವನ್ನೂ ಯಾವ ದೇವಿಯು ಸತ್ತ್ವರಜಸ್ತಮಸ್ ಎಂಬ ಮೂರು ಗುಣಗಳೇ ಸ್ವರೂಪವಾಗಿ ಉಳ್ಳ ತನ್ನ ಶಕ್ತಿಯಿಂದ ಸೃಷ್ಟಿಮಾಡಿ ಕಾಪಾಡುತ್ತಿರುತ್ತಾಳೋ, ಅಲ್ಲದೆ ಪ್ರಳಯಕಾಲದಲ್ಲಿ ಆ ಜಗತ್ತನ್ನು ಉಪಸಂಹರಿಸಿ ತಾನೊಬ್ಬಳೇ ಅದ್ವಿತೀಯಳಾಗಿ ಈ ರೀತಿಯಲ್ಲಿ ಕ್ರೀಡಿಸುತ್ತಿರುತ್ತಾಳೋ, ಅಂಥಾ ಈ ಎಲ್ಲ ಪ್ರಪಂಚಗಳಿಗೂ ತಾಯಿಯಾಗಿರುವ ಆ ದೇವಿಯನ್ನು ಮನಸ್ಸಿನಲ್ಲಿ ಧ್ಯಾನಿಸುತ್ತೇನೆ.

ಬ್ರಹ್ಮಾ ಸೃಜತ್ಯಖಿಲಮೇತದಿತಿ ಪ್ರಸಿದ್ಧಂ
ಪೌರಾಣಿಕೈಶ್ಚ ಕಥಿತಂ ಖಲು ವೇದವಿದ್ಭಿಃ ।
ವಿಷ್ಣೋಸ್ತು ನಾಭಿಕಮಲೇ ಕಿಲ ತಸ್ಯ ಜನ್ಮ
ತೈರುಕ್ತಮೇವ ಸೃಜತೇ ನಹಿ ಸ ಸ್ವತಂತ್ರಃ ॥೬॥

ಚತುರ್ಮುಖಬ್ರಹ್ಮನು ಈ ಪ್ರಪಂಚವನ್ನು ಸೃಷ್ಟಿಸುತ್ತಾನೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಪುರಾಣಗಳನ್ನು ತಿಳಿದಿರುವವರಿಂದಲೂ, ವೇದಾರ್ಥವನ್ನು ಬಲ್ಲವರಿಂದಲೂ ಹಾಗೆಯೇ ಹೇಳಲ್ಪಟ್ಟಿದೆ. ಆದರೆ ಆ ಬ್ರಹ್ಮನು ವಿಷ್ಣುವಿನ ಕಮಲದಂತಿರುವ ಹೊಕ್ಕುಳಿನಿಂದ ಹುಟ್ಟಿದನೆಂದೂ ಆ ವೇದಪುರಾಣಗಳು ಹೇಳುತ್ತಿವೆ. ಆದುದರಿಂದ ಆ ಬ್ರಹ್ಮನು ಸ್ವತಂತ್ರನಾಗಿ ಎಲ್ಲವನ್ನೂ ಸೃಷ್ಟಿಸಿದವನಲ್ಲವೆಂದು ಗೊತ್ತಾಗುತ್ತದೆ.

ವಿಷ್ಣುಸ್ತು ಶೇಷಶಯನೇ ಸ್ವಪಿತೀತಿ ಕಾಲೇ
ತನ್ನಾಭಿಪದ್ಮಮುಕುಲೇ ಖಲು ತಸ್ಯ ಜನ್ಮ ।
ಆಧಾರತಾಂ ಕಿಲ ಗತೋಽತ್ರ ಸಹಸ್ರಮೌಲಿಃ
ಸಂಬೋಧ್ಯತಾಂ ಸ ಭಗವಾನ್ ಹಿ ಕಥಂ ಮುರಾರಿಃ ॥೭॥

ಆ ವಿಷ್ಣುವಿನ ಕಮಲದ ಮೊಗ್ಗಿನಂತಿರುವ ಹೊಕ್ಕುಳಿನಿಂದ ಬ್ರಹ್ಮನು ಉಂಟಾದನೆಂದು ಪ್ರಸಿದ್ಧವಾಗಿದೆಯಷ್ಟೆ. ಆ ವಿಷ್ಣುವಾದರೋ ಪ್ರಳಯಕಾಲದಲ್ಲಿ ಆದಿಶೇಷನೆಂಬ ಸರ್ಪರಾಜನನ್ನು ಹಾಸಿಗೆಯಾಗಿ ಮಾಡಿಕೊಂಡು ಅಲ್ಲಿ ಮಲಗಿರುತ್ತಾನೆ. ಈ ಸಂದರ್ಭದಲ್ಲಿ ಸಾವಿರಹೆಡೆಗಳುಳ್ಳ ಆದಿಶೇಷನು ಆ ವಿಷ್ಣುವಿಗೂ ಆಧಾರವಾದಂತಾಯಿತಲ್ಲವೇ. ಆದುದರಿಂದ ಮುರನೆಂಬ ರಾಕ್ಷಸನನ್ನು ನಿಗ್ರಹಿಸಿದ ಮಹಾಮಹಿಮಶಾಲಿಯಾದ ವಿಷ್ಣುವೂ ಪರಾವಲಂಬನೆಯನ್ನು ಹೊಂದಿದಂತಾಯಿತು. ಆದುದರಿಂದ ಅಂತಹ ವಿಷ್ಣುವನ್ನೂ ಸ್ವತಂತ್ರವಾಗಿ ಜಗತ್ತನ್ನು ಸೃಷ್ಟಿಮಾಡಬಲ್ಲವನೆಂದು ಹೇಗೆ ತಾನೇ ಸಂಬೋಧಿಸಲಾದೀತು? ಆ ವಿಷ್ಣುವೂ ಸ್ವತಂತ್ರನಲ್ಲವು, ಪರಾಧೀನನೆಂದೇ ಗೊತ್ತಾಗುತ್ತದೆ, ಎಂದು ತಾತ್ಪರ್ಯವು. ಇವೆಲ್ಲಕ್ಕೂ ಆಧಾರವಾಗಿರುವ ಸಮುದ್ರವನ್ನೂ ಈ ಜಗತ್ತಿನ ಸೃಷ್ಟಿಕರ್ತೃವೆನ್ನಲಾಗದು. ಏಕೆಂದರೆ,

**ಏಕಾರ್ಣವಸ್ಯ ಸಲಿಲಂ ರಸರೂಪಮೇವ**
**ಪಾತ್ರಂ ವಿನಾ ನಹಿ ರಸಸ್ಥಿತಿರಸ್ತಿ ಕಚ್ಚಿತ್ ।**
**ಯಾ ಸರ್ವಭೂತವಿಷಯೇ ಕಿಲ ಶಕ್ತಿರೂಪಾ**
**ತಾಂ ಸರ್ವಭೂತಜನನೀಂ ಶರಣಂ ಗತೋಽಸ್ಮಿ ॥೮॥**

ಆ ಒಂದು ಮಹಾಸಾಗರದ ನೀರೂ ದ್ರವಪದಾರ್ಥವಾಗಿಯೇ ಇದೆ, ಎಂದರೆ ಹರಿದುಹೋಗುವ ಸ್ವಭಾವವುಳ್ಳದು. ಆ ನೀರು ನಿಲ್ಲಬೇಕಾದರೆ ಪಾತ್ರದ ಆಧಾರವು ಬೇಕು. ಮಧ್ಯದಲ್ಲಿ ಹಳ್ಳವಾಗಿರುವ ಆಧಾರದ ಸಹಾಯವಿಲ್ಲದೆ ನೀರು ನಿಲ್ಲಲಾರದು. ಆದುದರಿಂದ ಆ ಜಲವನ್ನೂ ಒಳಗೊಂಡಿರುವ ಪೃಥ್ವೀ, ಜಲ, ತೇಜಸ್ಸು, ವಾಯು, ಆಕಾಶಗಳೆಂಬ ಎಲ್ಲ ಭೂತಗಳಲ್ಲಿರುವ ಶಕ್ತಿಸ್ವರೂಪಳಾಗಿ ಯಾವ ದೇವಿಯು ಇದ್ದಾಳೋ, ಅಂತಹ ಈ ಎಲ್ಲ ಪಂಚಮಹಾಭೂತಗಳಿಗೂ ತಾಯಿಯಾಗಿರುವ ಆ ದೇವಿಯನ್ನು ನಾನು ರಕ್ಷಕಳನ್ನಾಗಿ ಅವಲಂಬಿಸಿದೇನೆ.

**ಯೋಗನಿದ್ರಾಮೀಲಿತಾಕ್ಷಂ ವಿಷ್ಣುಂ ದೃಷ್ಟ್ವಾಂಬುಜೇ ಸ್ಥಿತಃ ।**
**ಅಜಸ್ತುಷ್ಟಾವ ಯಾಂ ದೇವೀಂ ತಾಮಹಂ ಶರಣಂ ವ್ರಜೇ ॥೯॥**

ಯೋಗಮಾಯೆ ಅಥವಾ ವಿಷ್ಣುಮಾಯೆ ಎಂದು ಪ್ರಸಿದ್ಧವಾಗಿರುವ ಯೋಗದಿಂದ ಮುಚ್ಚಿಕೊಂಡಿರುವ ಕಣ್ಣುಗಳುಳ್ಳವನಾಗಿರುವ ವಿಷ್ಣುವನ್ನು ಕಂಡು, ಅವನ ನಾಭಿಕಮಲದಲ್ಲಿರುವ ಬ್ರಹ್ಮನು ಯಾವ ದೇವಿಯನ್ನು ಎಂದರೆ ಮೂಲಪ್ರಕೃತಿ

ರೂಪಳೂ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾಗಿರುವ ಆದಿಶಕ್ತಿಸ್ವರೂಪಳಾದ, ತಾನೇ ಇತರ ಸಹಾಯವಿಲ್ಲದೆ ಸ್ಫುರಿಸುವ ಸ್ವಭಾವವುಳ್ಳ ದೇವಿಯನ್ನು ಸ್ತೋತ್ರಮಾಡಿ ಒಲಿಸಿಕೊಂಡನೋ, ಆ ಜಗನ್ಮಾತೆಯಾದ ದೇವಿಯನ್ನು ರಕ್ಷಕಳನ್ನಾಗಿ ಪಡೆಯುತ್ತೇನೆ.

**ತಾಂ ಧ್ಯಾತ್ವಾ ಸಗುಣಾಂ ಮಾಯಾಂ ಮುಕ್ತಿದಾಂ ನಿರ್ಗುಣಾಂ ತಥಾ।**
**ವಕ್ಷ್ಯೇ ಪುರಾಣಮಖಿಲಂ ಶೃಣುಧ್ವಂ ಮುನಯಸ್ತ್ವಿಹ ॥೧೦॥**

ಓ ಮನನಶೀಲರಾದ ಮಹರ್ಷಿಗಳೇ, ಪರತತ್ತ್ವದ ಸ್ವರೂಪವನ್ನು ಮನಗಾಣದ ಅಜ್ಞಾನಿಗಳಾಗಿ ಸಾಂಸಾರಿಕರಾಗಿರುವ ನಮ್ಮಂತಹವರ ದೃಷ್ಟಿಯಲ್ಲಿ ವ್ಯಾವಹಾರಿಕಸ್ಥಿತಿಯಲ್ಲಿ ಸಗುಣಳಾಗಿ ಎಂದರೆ ಸತ್ತ್ವ, ರಜಸ್, ತಮಸ್ ಎಂಬ ಮೂರು ಗುಣಗಳ ಪರಿಣಾಮರೂಪವಾದ ಈ ಜಗತ್ಸಂಸಾರರೂಪಳಾಗಿ ತೋರುತ್ತಿರುವ, ಪರತತ್ತ್ವದ ಅಜ್ಞಾನರೂಪಳಾಗಿರುವ, ಹಾಗೆಯೇ ವಾಸ್ತವಸ್ವರೂಪದಲ್ಲಿ, ಪಾರಮಾರ್ಥಿಕದೃಷ್ಟಿಯಲ್ಲಿ ಸರ್ವಾಧಿಷ್ಠಾನವಾದ ನಿತ್ಯನಿರ್ಗುಣ ಚೇತನಸ್ವರೂಪಳಾಗಿರುವ, ಭಕ್ತರೂ ಜ್ಞಾನಿಗಳೂ ಆಗಿರುವ ಆಶ್ರಿತರಿಗೆ ಈ ಸಂಸಾರದ ಸಂಕೋಲೆಯ ದುಃಖದಿಂದ ಬಿಡುಗಡೆಯಾಗಿ ಸಚ್ಚಿದಾನಂದರೂಪವಾಗಿರುವಿಕೆ ಎಂಬ ಮುಕ್ತಿಯನ್ನೂ ಅನುಗ್ರಹಿಸುವ, ಆ ಜಗನ್ಮಾತೆಯನ್ನು ಧ್ಯಾನಮಾಡಿ ಆ ಭಾಗವತಮಹಾಪುರಾಣವನ್ನೂ ಸಮಗ್ರವಾಗಿ ಈಗ ನಿಮಗೆ ವಿವರಿಸಿ ಹೇಳುವೆನು ಕೇಳಿರಿ.

**ಪುರಾಣಮುತ್ತಮಂ ಪುಣ್ಯಂ ಶ್ರೀಮದ್ಭಾಗವತಾಭಿಧಂ ।**
**ಅಷ್ಟಾದಶಸಹಸ್ರಾಣಿ ಶ್ಲೋಕಾಸ್ತತ್ರ ತು ಸಂಸ್ಕೃತಾಃ ॥೧೧॥**

ಆದುದರಿಂದ ಶ್ರೀಮದ್ದೇವೀಭಾಗವತವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಈ ಮಹಾಪುರಾಣವು ಇತರ ಎಲ್ಲಾ ಪುರಾಣಗಳಿಗಿಂತ ಉತ್ತಮವೂ ಹೆಚ್ಚು ಪುಣ್ಯಕರವೂ ಆಗಿರುತ್ತದೆ. ಇದರಲ್ಲಿ ಹದಿನೆಂಟುಸಾವಿರ ಶ್ಲೋಕಗಳು ಇವೆ. ಇದನ್ನು ಸಂಸ್ಕೃತಭಾಷೆಯಲ್ಲಿ ಉತ್ತಮವಾದ ಶೈಲಿಯಲ್ಲಿ ರಚಿಸಲಾಗಿದೆ.

**ಸ್ಕಂಧಾ ದ್ವಾದಶ ಏವಾತ್ರ ಕೃಷ್ಣೇನ ವಿಹಿತಾಃ ಶುಭಾಃ ।**
**ತ್ರಿಶತಂ ಪೂರ್ಣಮಧ್ಯಾಯಾ ಅಷ್ಟಾದಶಯುತಾಃ ಸ್ಮೃತಾಃ ॥೧೨॥**

ಇದರಲ್ಲಿ ಹನ್ನೆರಡು ಸ್ಕಂಧಗಳೂ, ಮುನ್ನೂರಹದಿನೆಂಟು ಅಧ್ಯಾಯಗಳೂ ಇರುವಂತೆ ವಿಭಾಗಿಸಿ ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾದ ವ್ಯಾಸಮಹರ್ಷಿಯಿಂದ ವಿಂಗಡಿಸಿ ಗೊತ್ತುಮಾಡಿದೆ.

**ವಿಂಶತಿಃ ಪ್ರಥಮೇ ತತ್ರ ದ್ವಿತೀಯೇ ದ್ವಾದಶೈವ ತು ।**
**ತ್ರಿಂಶಚ್ಚೈವ ತೃತೀಯೇ ತು ಚತುರ್ಥೇ ಪಂಚವಿಂಶತಿಃ ॥೧೩॥**

ಈ ಭಾಗವತದಲ್ಲಿ ಮೊದಲನೆಯ ಸ್ಕಂಧದಲ್ಲಿ ಇಪ್ಪತ್ತು ಅಧ್ಯಾಯಗಳೂ, ಎರಡನೆಯ ಸ್ಕಂಧದಲ್ಲಿ ಹನ್ನೆರಡು ಅಧ್ಯಾಯಗಳೂ, ಮೂರನೆಯ ಸ್ಕಂಧದಲ್ಲಿ ಮೂವತ್ತು ಅಧ್ಯಾಯಗಳೂ, ನಾಲ್ಕನೆಯದರಲ್ಲಿ ಇಪ್ಪತ್ತೈದು ಅಧ್ಯಾಯಗಳೂ ಇವೆ.

**ಪಂಚತ್ರಿಂಶತ್ತಥಾಧ್ಯಾಯಾಃ ಪಂಚಮೇ ಪರಿಕೀರ್ತಿತಾಃ ।**
**ಏಕತ್ರಿಂಶತ್ತಥಾ ಷಷ್ಠೇ ಚತ್ವಾರಿಂಶಚ್ಚ ಸಪ್ತಮೇ ॥೧೪॥**

ಐದನೆಯ ಸ್ಕಂಧದಲ್ಲಿ ಮೂವತ್ತೈದು ಅಧ್ಯಾಯಗಳೂ, ಆರನೆಯಸ್ಕಂಧದಲ್ಲಿ ಮೂವತ್ತೊಂದು ಅಧ್ಯಾಯಗಳೂ, ಏಳನೆಯ ಸ್ಕಂಧದಲ್ಲಿ ನಲವತ್ತು ಅಧ್ಯಾಯಗಳೂ ಇವೆ ಎಂದು ಪರಿಗಣಿಸಿ ಹೇಳಿದೆ.

**ಅಷ್ಟಮೇ ತತ್ತ್ವಸಂಖ್ಯಾಕ್ಚ ಪಂಚಾಶನ್ನವಮೇ ತಥಾ ।**
**ತ್ರಯೋದಶ ತು ಸಂಪ್ರೋಕ್ತಾಃ ದಶಮೇ ಮುನಿನಾ ಕಿಲ ॥೧೫॥**

ಎಂಟನೆಯ ಸ್ಕಂಧದಲ್ಲಿ ಇಪ್ಪತ್ತುನಾಲ್ಕು ಅಧ್ಯಾಯಗಳೂ, ಒಂಭತ್ತನೆಯ ಸ್ಕಂಧದಲ್ಲಿ ಐವತ್ತು ಅಧ್ಯಾಯಗಳೂ, ಹತ್ತನೆಯ ಸ್ಕಂಧದಲ್ಲಿ ಹದಿಮೂರು ಅಧ್ಯಾಯಗಳೂ ಇವೆ ಎಂದು ವ್ಯಾಸಮುನಿಯೇ ಹೇಳಿದಾನೆ.

**ತಥಾ ಚೈಕಾದಶೇ ಸ್ಕಂಧೇ ಚತುರ್ವಿಂಶತಿರೀರಿತಾಃ ।**
**ಚತುರ್ದಶೈವ ಚಾಧ್ಯಾಯಾ ದ್ವಾದಶೇ ಮುನಿಸತ್ತಮಾಃ ॥೧೬॥**

ಓ ಶೌನಕಾದಿಋಷಿಶ್ರೇಷ್ಠರೇ, ಹಾಗೆಯೇ ಹನ್ನೊಂದನೆಯ ಸ್ಕಂಧದಲ್ಲಿ ಇಪ್ಪತ್ತುನಾಲ್ಕು ಅಧ್ಯಾಯಗಳೂ, ಹನ್ನೆರಡನೆಯ ಸ್ಕಂಧದಲ್ಲಿ ಹದಿನಾಲ್ಕು ಅಧ್ಯಾಯಗಳೂ ಇವೆ ಎಂದು ವ್ಯಾಸಮಹರ್ಷಿಯು ಗೊತ್ತಾಗಿ ಹೇಳಿರುತ್ತಾನೆ.

**ಏವಂ ಸಂಖ್ಯಾ ಸಮಾಖ್ಯಾತಾ ಪುರಾಣೇಽಸ್ಮಿನ್ಮಹಾತ್ಮನಾ ।**
**ಅಷ್ಟಾದಶಸಹಸ್ರೀಯಾ ಸಂಖ್ಯಾ ಚ ಪರಿಕೀರ್ತಿತಾ ॥೧೭॥**

ಈ ಮಹಾಪುರಾಣದಲ್ಲಿರುವ ಸ್ಕಂಧಗಳಲ್ಲಿನ ಅಧ್ಯಾಯಗಳ ಸಂಖ್ಯೆಯು ಈ ಪ್ರಕಾರವಾಗಿ ವಿಶಾಲವಾದ ಹೃದಯವುಳ್ಳ ವ್ಯಾಸಮಹರ್ಷಿಯಿಂದ ಹೇಳಲ್ಪಟ್ಟಿದೆ.

ಎಲ್ಲ ಸ್ಕಂಧಗಳಲ್ಲಿನ ಒಟ್ಟು ಶ್ಲೋಕಗಳ ಸಂಖ್ಯೆಯು ಹದಿನೆಂಟು ಸಾವಿರವೆಂದು ಮೊದಲೇ ಹೇಳಿದ್ದಾಗಿದೆ.

**ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ।**
**ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಂ ॥೧೮॥**

ಪುರಾಣಗಳಿಗೆ ಸಾಮಾನ್ಯವಾದ ಲಕ್ಷಣವನ್ನು ಹೇಳುತ್ತಾರೆ. ಮೂಲ ಸೃಷ್ಟಿಯೂ, ವೈಕಾರಿಕಸೃಷ್ಟಿಯೂ, ಬ್ರಹ್ಮನು ತಾನೇ ಮಾಡುವ ಮುಖ್ಯಸೃಷ್ಟಿಯೂ, ಅವನ ಮಾನಸಪುತ್ರರ ಮುಖಾಂತರವಾಗಿ ಆಗುವ ಅನುಸೃಷ್ಟಿಯೂ, ಹಾಗೆಯೇ ಪ್ರಳಯವೂ, ರಾಜರು ಮೊದಲಾದ ದೊಡ್ಡವರ ವಂಶಾವಳಿಯೂ, ಮನ್ವಂತರಾದಿ ಕಾಲಪರಿಮಾಣಗಳೂ, ದೊಡ್ಡವಂಶದಲ್ಲಿ ಹುಟ್ಟಿದವರ ಮಹಾಪುರುಷರ ಜೀವನ ಚರಿತೆಯೂ, ಮಹಾಕಾರ್ಯಗಳೂ, ಈ ಐದುಬಗೆಯ ವಿಷಯಗಳನ್ನು ವಿವರಿಸಿರುವ ಗ್ರಂಥಕ್ಕೆ ಪುರಾಣವೆಂದೂ, ಮಹಾಪುರಾಣವೆಂದೂ ರೂಢಿ ಇರುತ್ತದೆ. ಈ ಲಕ್ಷಣವು ಈ ದೇವೀಭಾಗವತದಲ್ಲಿ ಸಮಗ್ರವಾಗಿದೆ.

**ನಿರ್ಗುಣಾ ಯಾ ಸದಾ ನಿತ್ಯಾ ವ್ಯಾಪಿಕಾ ವಿಕೃತಾ ಶಿವಾ ।**
**ಯೋಗಗಮ್ಯಾಽಖಿಲಾಧಾರಾ ತುರೀಯಾ ಯಾ ಚ ಸಂಸ್ಥಿತಾ ॥೧೯॥**

ಸರ್ವತೇಜೋಮಯಳೂ ಸರ್ವಶಕ್ತಿಸ್ವರೂಪಳೂ ಆಗಿರುವ ಮೂಲಪ್ರಕೃತಿ ಅಥವಾ ಆದಿಶಕ್ತಿಯು ಪರಬ್ರಹ್ಮತತ್ವದ ಚಿಚ್ಛಕ್ತಿರೂಪಳಾಗಿರುತ್ತಾಳೆ. ಅವಳು ವಾಸ್ತವವಾಗಿ ಸತ್ತ್ವರಜಸ್ತಮೋರೂಪಗಳಾದ ಮೂರು ಗುಣಗಳನ್ನು ಮೀರಿರುವುದರಿಂದ ನಿರ್ಗುಣಳೂ, ಯಾವಾಗಲೂ ನಾಶಬಾಧೆಗಳಿಲ್ಲದೆ ನಿತ್ಯಳೂ, ಸರ್ವತ್ರ ವ್ಯಾಪಿಸಿರುವವಳೂ, ವಿಕಾರಗಳನ್ನು ದಾಟಿದ ವಿಕಾರವಿಲ್ಲದವಳೂ, ಮಂಗಳಕರಳೂ, ಕಲ್ಯಾಣರೂಪಳೂ, ಚಿತ್ತದ ವೃತ್ತಿಗಳನ್ನು ನಿರೋಧಿಸುವಿಕೆ, ಅಥವಾ ಮನಸ್ಸಿನ ಏಕಾಗ್ರತೆ ಮುಂತಾದ ಯೋಗಗಳಿಂದ ಮಾತ್ರವೇ ತಿಳಿಯಲು ಸಾಧ್ಯಳಾಗಿರುವವಳೂ, ಎಲ್ಲ ಪ್ರಪಂಚಕ್ಕೂ ಅಧಿಷ್ಠಾನರೂಪವಾದ ಆಶ್ರಯಸ್ವರೂಪಳೂ, ಅನಿತ್ಯವಾದ ಮೂರು ಅವಸ್ಥೆಗಳನ್ನೂ ಮೀರಿದ ನಿತ್ಯವಾದ ನಾಲ್ಕನೆಯ ಅವಸ್ಥಾರೂಪಳೂ ಆಗಿರುವ ಯಾವ ದೇವೀಶಕ್ತಿಯು ಉಂಟೋ,

**ತಸ್ಯಾಸ್ತು ಸಾತ್ತ್ವಿಕೀ ಶಕ್ತೀ ರಾಜಸೀ ತಾಮಸೀ ತಥಾ ।**
**ಮಹಾಲಕ್ಷ್ಮೀಃ ಸರಸ್ವತೀ ಮಹಾಕಾಳೀತಿ ತಾಃ ಸ್ತ್ರಿಯಃ ॥೨೦॥**

ಆ ಪರಾಶಕ್ತಿಯ ಮೂರು ಗುಣಗಳಲ್ಲಿ ಒಂದಾದ ಸತ್ತ್ವಗುಣದ ಪ್ರಾಧಾನ್ಯದಿಂದ ಧರಿಸಿದ ಸ್ತ್ರೀರೂಪದಲ್ಲಿ ಆ ದೇವಿಯು ಮಹಾಲಕ್ಷ್ಮೀ ಎಂದೂ, ರಜೋಗುಣದ ಪ್ರಾಧಾನ್ಯದಿಂದ ಸ್ವೀಕರಿಸಿದ ಸ್ತ್ರೀರೂಪದಲ್ಲಿ ಮಹಾಸರಸ್ವತೀ ಎಂದೂ, ತಮೋಗುಣದ ಪ್ರಾಧಾನ್ಯದಿಂದ ಅಂಗೀಕರಿಸಿದ ಸ್ತ್ರೀರೂಪದಲ್ಲಿ ಮಹಾಕಾಳೀ ಎಂದೂ ಆ ದೇವಿಯೇ ಮೂರು ರೂಪಗಳುಳ್ಳವಳಾಗಿ ಕಾರ್ಯವಶದಿಂದ ತೋರುತ್ತಾಳೆ.

**ತಾಸಾಂ ತಿಸೃಣಾಂ ಶಕ್ತೀನಾಂ ದೇಹಾಂಗೀಕಾರಲಕ್ಷಣಃ ।**
**ಸೃಷ್ಟ್ಯರ್ಥಂ ಚ ಸಮಾಖ್ಯಾತಃ ಸರ್ಗಃ ಶಾಸ್ತ್ರವಿಶಾರದೈಃ ॥೨೧॥**

ಈ ಒಟ್ಟು ಪ್ರಪಂಚದ ಸೃಷ್ಟಿಕಾರ್ಯವನ್ನು ನೆರವೇರಿಸುವುದಕ್ಕೋಸ್ಕರ ಆ ಮೂರು ಶಕ್ತಿಗಳೂ ಶರೀರವನ್ನು ಸ್ವೀಕಾರಮಾಡುವುದಕ್ಕೆ ಸರ್ಗ ಅಥವಾ ಮೂಲ ಸೃಷ್ಟಿ, ಮುಖ್ಯಸೃಷ್ಟಿ, ಮೊದಲಸೃಷ್ಟಿ ಎಂದು ಶಾಸ್ತ್ರಗಳಲ್ಲಿನ ಪ್ರಕ್ರಿಯಾ ಮತ್ತು ಪ್ರಮೇಯಗಳನ್ನು ಬಲ್ಲ ವಿದ್ವಾಂಸರು ಹೇಳುತ್ತಾರೆ.

**ಹರಿದ್ರುಹಿಣರುದ್ರಾಣಾಂ ಸಮುತ್ಪತ್ತಿಸ್ತತಃ ಸ್ಮೃತಾ ।**
**ಪಾಲನೋತ್ಪತ್ತಿನಾಶಾರ್ಥಂ ಪ್ರತಿಸರ್ಗಃ ಸ್ಮೃತೋ ಹಿ ಸಃ ॥೨೨॥**

ಆಮೇಲೆ ಈ ವ್ಯಷ್ಟಿಪ್ರಪಂಚದಲ್ಲಿ ರಕ್ಷಣೆ, ಹುಟ್ಟು, ಸಾವು ಇವುಗಳನ್ನು ನೆರವೇರಿಸುವುದಕ್ಕೋಸ್ಕರ ಆ ಶಕ್ತಿಗಳಿಂದ ವಿಷ್ಣುವೂ, ಬ್ರಹ್ಮನೂ, ರುದ್ರನೂ ಅವತರಿಸುತ್ತಾರೆ. ಈ ಸೃಷ್ಟಿಗೆ ಪ್ರತಿಸರ್ಗವೆಂದೂ, ಅನುಸೃಷ್ಟಿ ಎಂದೂ ವ್ಯವಹಾರವು ರೂಢಿಯಲ್ಲಿದೆ.

**ಸೋಮಸೂರ್ಯೋದ್ಭವಾನಾಂ ಚ ರಾಜ್ಞಾಂ ವಂಶಪ್ರಕೀರ್ತನಂ ।**
**ಹಿರಣ್ಯಕಶಿಪ್ವಾದೀನಾಂ ವಂಶಾಸ್ತೇ ಪರಿಕೀರ್ತಿತಾಃ ॥೨೩॥**

ಚಂದ್ರ ಸೂರ್ಯ ಇವರಿಂದ ಮೊದಲಾದ ವಂಶಗಳಲ್ಲಿ ಹುಟ್ಟಿದ ರಾಜರ ವಂಶಗಳನ್ನೂ ಹಿರಣ್ಯಕಶಿಪು ಮುಂತಾದವರು ಹುಟ್ಟಿದ ವಂಶಗಳನ್ನೂ ವಿವರಿಸುವ ವಂಶಾವಳಿಯ ವರ್ಣನೆಗೆ ವಂಶವೆಂದು ಹೆಸರು ರೂಢಿಯಲ್ಲಿದೆ. ಚಂದ್ರನಿಂದ ಪುರೂರವನವರಿಗಿನ ರಾಜರ ಮತ್ತು ಸೂರ್ಯನಿಂದ ಮೊದಲುಮಾಡಿ ಹರಿಶ್ಚಂದ್ರನ ವರಿಗಿನ ರಾಜರ ವಂಶಾವಳಿಗಳನ್ನು ಮುಂದೆ ಮೊದಲನೆಯ ಮತ್ತು ಏಳನೆಯ ಸ್ಕಂಧಗಳಲ್ಲಿ ಹೇಳುತ್ತಾರೆ.

**ಸ್ವಾಯಂಭುವಮುಖಾನಾಂ ಚ ಮನೂನಾಂ ಪರಿವರ್ಣನಂ ।**
**ಕಾಲಸಂಖ್ಯಾ ತಥಾ ತೇಷಾಂ ತತ್ರನ್ಮನ್ವಂತರಾಣಿ ಚ ॥೨೪॥**

ಸ್ವಾಯಂಭುವ, ಸ್ವಾರೋಚಿಷ, ಮುಂತಾದ ಹದಿನಾಲ್ಕು ಮನುಗಳ ವರ್ಣನೆಯನ್ನು ಮುಂದೆ ಹತ್ತನೆಯ ಸ್ಕಂಧದಲ್ಲೂ ಹೇಳಿದೆ. ಒಬ್ಬ ಮನುವಿನ ಅಧಿಕಾರಕಾಲದ ಪರಿಮಾಣ (306720000)ಕ್ಕೆ ಒಂದು ಮನ್ವಂತರವೆಂದು ವ್ಯವಹಾರವಿದೆ. ಇತರ ಮನುಗಳು ಕ್ರಮವಾಗಿ ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ ಎಂದು ಹೇಳಿದೆ.

**ತೇಷಾಂ ವಂಶಾನುಕಥನಂ ವಂಶಾನುಚರಿತಂ ಸ್ಮೃತಂ ।**
**ಪಂಚಲಕ್ಷಣಯುಕ್ತಾನಿ ಭವಂತಿ ಮುನಿಸತ್ತಮಾಃ ॥೨೫॥**

ಅವರ ವಂಶಗಳನ್ನೂ, ಅವರು ಸಾಧಿಸಿದ ಮಹಾಕಾರ್ಯಗಳನ್ನೂ ವರ್ಣಿಸಿರುವುದಕ್ಕೆ ವಂಶಾನುಚರಿತವೆಂಬ ಹೆಸರು ರೂಢಿಯಲ್ಲಿದೆ. ಓ ಋಷಿಶ್ರೇಷ್ಠರೇ, ಎಲ್ಲ ಮುಖ್ಯವಾದ ಪುರಾಣಗಳಲ್ಲೂ ಈ ಐದು ಲಕ್ಷಣಗಳು ತಪ್ಪದೆ ಇರುತ್ತವೆ.

**ಸಪಾದಲಕ್ಷಂ ಚ ತಥಾ ಭಾರತಂ ಮುನಿನಾ ಕೃತಂ ।**
**ಇತಿಹಾಸ ಇತಿ ಪ್ರೋಕ್ತಂ ಪಂಚಮಂ ವೇದಸಂಮತಂ ॥೨೬॥**

ಹಾಗೆಯೇ ಒಂದುಲಕ್ಷ ಇಪ್ಪತ್ತೈದುಸಾವಿರ ಗ್ರಂಥಗಳಿಂದ ಕೂಡಿರುವ ಭಾರತವನ್ನು ವ್ಯಾಸಮುನಿಯು ರಚಿಸಿದನು. ಇದಕ್ಕೆ ಇತಿಹಾಸವೆಂದು ಹೆಸರು ರೂಢಿಯಲ್ಲಿದೆ. ಇದು ಐದನೆಯ ವೇದವೆಂದು ಎಲ್ಲರೂ ಒಪ್ಪಿದಾರೆ. ಭಾರತದಲ್ಲೂ ಈ ಲಕ್ಷಣಗಳಿವೆ.

॥ ಶೌನಕ ಉವಾಚ ॥

**ಕಾನಿ ತಾನಿ ಪುರಾಣಾನಿ ಬ್ರೂಹಿ ಸೂತ ಸವಿಸ್ತರಂ ।**
**ಕತಿ ಸಂಖ್ಯಾನಿ ಸರ್ವಜ್ಞ ಶ್ರೋತುಕಾಮಾ ವಯಂತ್ವಿಹ ॥೨೭॥**

ಶೌನಕ ಋಷಿಯು ಹೇಳಿದನು—ಎಲ್ಲವನ್ನೂ ಬಲ್ಲ ಓ ಸೂತಮಹರ್ಷಿಯೇ, ಅಂತಹ ಪುರಾಣಗಳು ಯಾವವು? ಮತ್ತು ಎಷ್ಟಿವೆ? ಎಂಬುದೆಲ್ಲವನ್ನೂ ಕೇಳಬಯಸುತ್ತೇವೆ. ವಿಸ್ತಾರವಾಗಿ ಎಲ್ಲವನ್ನೂ ವಿವರಿಸಿ ತಿಳಿಸು.

**ಕಲಿಕಾಲವಿಭೀತಾಃ ಸ್ಮಃ ನೈಮಿಶಾರಣ್ಯವಾಸಿನಃ ।**
**ಬ್ರಹ್ಮಣಾತ್ರ ಸಮಾದಿಷ್ಟಾಃ ಚಕ್ರಂ ದತ್ವಾ ಮನೋಮಯಂ ॥೨೮॥**

ಈ ಕಲಿಕಾಲದ ದೋಷಗಳ ಸಂಪರ್ಕದಿಂದ ಹೆದರಿದವರಾದ ನಾವು ಈ ನೈಮಿಶಾರಣ್ಯವೆಂಬ ಉತ್ತಮಕ್ಷೇತ್ರದಲ್ಲಿ ವಾಸಮಾಡಿಕೊಂಡಿರುತ್ತೇವೆ. ಏಕೆಂದರೆ ಬ್ರಹ್ಮನು ನಮ್ಮನ್ನು ಪಾಪಸಂಬಂಧದಿಂದ ಕಾಪಾಡುವುದಕ್ಕೋಸ್ಕರ ಮನೋರೂಪವಾದ ಒಂದು ಚಕ್ರವನ್ನು ನಮಗೆ ಅನುಗ್ರಹಿಸಿ ಹೀಗೆ ಅಪ್ಪಣೆಮಾಡಿದನು.

**ಕಥಿತಂ ತೇನ ನಸ್ಸರ್ವಾನ್ ಗಚ್ಛಂತ್ವೇತಸ್ಯ ಪೃಷ್ಠತಃ ।**
**ನೇಮಿಸ್ಸ ಶೀರ್ಯತೆ ಯತ್ರ ಸ ದೇಶಃ ಪಾವನಃ ಸ್ಮೃತಃ ॥೨೯॥**

ಆ ಬ್ರಹ್ಮನು ನಮ್ಮನ್ನು ಕುರಿತು ಓ ಶೌನಕಾದಿ ಋಷಿಗಳೇ, ನೀವು ಈ ಚಕ್ರವನ್ನು ಉರುಳಿಸಿಕೊಂಡು ಅದನ್ನು ಹಿಂಬಾಲಿಸುತ್ತಾ ಮುಂದುವರಿಯುತ್ತಿರಿ. ಯಾವ ದೇಶದಲ್ಲಿ ಈ ಚಕ್ರದ ಪಟ್ಟಿಯು ಕಡಿದುಹೋಗುವುದೋ ಆ ದೇಶವು ಪರಿಶುದ್ಧವಾದುದೆಂದೂ, ಅಲ್ಲಿ ವಾಸಮಾಡುವವರನ್ನು ದೋಷಸಂಪರ್ಕವಾಗದಂತೆ ಪರಿಶುದ್ಧರನ್ನಾಗಿ ಮಾಡುವಂತಹದೆಂದೂ ತಿಳಿದು, ಪುನಃ ಕೃತಯುಗವು ಮರಳಿ ಬರುವವರೆಗೂ ಅಲ್ಲಿ ವಾಸಮಾಡಿರಿ. ಎಂದು ಹೇಳಿದನು.

**ಕಲೇಸ್ತತ್ರ ಪ್ರವೇಶೋ ನ ಕದಾಚಿತ್ಸಂಭವಿಷ್ಯತಿ ।**
**ತಾವತ್ತಿಷ್ಠಂತು ತತ್ರೈವ ಯಾವತ್ಸತ್ಯಯುಗಂ ಪುನಃ ॥೩೦॥**

ಅಲ್ಲದೆ, ಈ ರೀತಿಯಲ್ಲಿ ಗೊತ್ತುಮಾಡಿಕೊಂಡ ಆ ದೇಶದಲ್ಲಿ ಕಲಿಯ ಪ್ರವೇಶವೇ ಯಾವಾಗಲೂ ಉಂಟಾಗುವುದಿಲ್ಲವು. ಆದುದರಿಂದ ನೀವು ಆ ಕ್ಷೇತ್ರದಲ್ಲಿಯೇ ಪುನಃ ಕೃತಯುಗವು ಮರಳಿ ಬರುವವರೆಗೂ ವಾಸಮಾಡುತ್ತಾ ಇರಿ.

**ತಚ್ಛ್ರುತ್ವಾ ವಚನಂ ತಸ್ಯ ಗೃಹೀತ್ವಾ ತತ್ಕಥಾನಕಂ ।**
**ಚಾಲಯನ್ನಿರ್ಗತಸ್ತೂರ್ಣಂ ಸರ್ವದೇಶದಿದೃಕ್ಷಯಾ ॥೩೧॥**

ಹೀಗೆಂದು ಹೇಳಿದ ಬ್ರಹ್ಮನ ಆ ಮಾತನ್ನು ಕೇಳಿ ನಾವೆಲ್ಲರೂ ಆ ಕಥೆಯ ಅರ್ಥವನ್ನು ತಿಳಿದುಕೊಂಡು ಎಲ್ಲ ದೇಶಗಳನ್ನೂ ನೋಡಬೇಕೆಂಬ ಅಪೇಕ್ಷೆಯಿಂದ ಆ ಚಕ್ರವನ್ನು ತಿರುಗಿಸುತ್ತಾ ಹೊರಟೆವು.

**ಪ್ರೇತ್ಯಾತ್ರ ಚಾಲಯಂಶ್ಚಕ್ರಂ ನೇಮಿಶ್ಶೀರ್ಣೋಽತ್ರ ಪಶ್ಯತಃ ।**
**ತೇನೇದಂ ನೈಮಿಶಂ ಪ್ರೋಕ್ತಂ ಕ್ಷೇತ್ರಂ ಪರಮಪಾವನಂ ॥೩೨॥**

ಹೀಗೆ ನಾವು ಆ ಚಕ್ರವನ್ನು ತಿರುಗಿಸುತ್ತಾ ದೇಶದಿಂದ ದೇಶಕ್ಕೆ ಬರುತ್ತಿರಲು ಇಲ್ಲಿಗೂ ಬಂದು ಚಕ್ರವನ್ನು ತಿರುಗಿಸಲು ನಾವು ನೋಡುತ್ತಿದ್ದ ಹಾಗೆಯೇ ಆ ಚಕ್ರದ ನೇಮಿಯು (ಪಟ್ಟೆಯು) ಶೀಳಿಹೋಯಿತು. ಆದುದರಿಂದ ಈ ದೇಶಕ್ಕೆ ನೈಮಿಶವೆಂಬ ಹೆಸರು ಪ್ರಸಿದ್ಧಿಗೆ ಬಂದಿತು. ನೈಮಿಶಕ್ಷೇತ್ರವು ತುಂಬ ಪರಿಶುದ್ಧವಾದುದು. ಇಲ್ಲಿರುವವರೂ ಶುದ್ಧರಾಗಿರುತ್ತಾರೆ.

**ಕಲಿಪ್ರವೇಶೋ ನೈವಾತ್ರ ತಸ್ಮಾತ್ಸ್ಥಾನಂ ಕೃತಂ ಮಯಾ ।**
**ಮುನಿಭಿಸ್ಸಿದ್ಧಸಂಘೈಶ್ಚ ಕಲಿಭೀತೈರ್ಮಹಾತ್ಮಭಿಃ ॥೩೩॥**

ಈ ಪ್ರದೇಶದಲ್ಲಿ ಕಲಿಯ ಪ್ರವೇಶವೇ ಆಗುವುದಿಲ್ಲವು. ಆದುದರಿಂದ ನಾನೂ ಈ ಕಲಿದೋಷಸಂಬಂಧದಿಂದ ಹೆದರಿದ್ದ ಈ ಮಹಾತ್ಮರಾದ ಋಷಿಗಳ ಸಮಾಜವೂ ಇಲ್ಲಿಯೇ ವಸತಿಯನ್ನು ಕಲ್ಪಿಸಿಕೊಂಡು ನೆಲಸಿರುತ್ತೇವೆ. ಅಲ್ಲದೆ,

**ಪಶುಹೀನಾಃ ಕೃತಾ ಯಜ್ಞಾಃ ಪುರೋಡಾಶಾದಿಭಿಃ ಕಿಲ ।**
**ಕಾಲಾತಿವಾಹನಂ ಕಾರ್ಯಂ ಯಾವತ್ಸತ್ಯಯುಗಾಗಮಃ ॥೩೪॥**

ಇಲ್ಲಿ ನಮ್ಮ ದಿನಗಟ್ಟಲೆಯ ಜೀವನಕ್ರಮವನ್ನೂ ಸಾತ್ತ್ವಿಕರೀತಿಯಲ್ಲಿಯೇ ಸಾಗಿಸುತ್ತಾ ಬಂದಿದ್ದೇವೆ; ಹೇಗೆಂದರೆ ಯಾವ ಯಜ್ಞಯಾಗಗಳನ್ನೂ ಪಶುಹಿಂಸೆ ಇಲ್ಲದೆ ಕೇವಲ ಪುರೋಡಾಶ ಮುಂತಾದ ಹವಿಸ್ಸುಗಳಿಂದಲೇ ನೆರವೇರಿಸಲು ಸಾಧ್ಯವೋ ಅಂತಹವುಗಳನ್ನೇ ಆಚರಿಸುತ್ತಿದ್ದೇವೆ. ನಮಗೆ ಇರುವ ವಿರಾಮಕಾಲವನ್ನು ಪುನಃ ಕೃತಯುಗವು ಮರಳಿ ಬರುವವರೆಗೂ ಕಳೆಯಬೇಕಾಗಿದೆ.

**ಭಾಗ್ಯಯೋಗೇನ ಸಂಪ್ರಾಪ್ತಃ ಸೂತ ತ್ವಂ ಚಾತ್ರ ಸರ್ವಥಾ ।**
**ಕಥಯಾದ್ಯ ಪುರಾಣಂ ಹಿ ಪಾವನಂ ಬ್ರಹ್ಮಸಂಮಿತಂ ॥೩೫॥**

ಓ ಸೂತನೇ, ಹೇಗಾದರೂ ನೀನು ನಮ್ಮೆಲ್ಲರ ಪುಣ್ಯಸಂಬಂಧದಿಂದ ಇಲ್ಲಿಗೆ ಬಂದಿರುವೆ. ವೇದಕ್ಕೆ ಸಮಾನವಾಗಿ ಪರಿಶುದ್ಧವಾದ ಆ ಪುರಾಣವನ್ನು ಈಗ ನಮಗೆ ಹೇಳು.

**ಸೂತ ಶುಶ್ರೂಷವಃ ಸರ್ವೇ ವಕ್ತಾ ತ್ವಂ ಮತಿಮಾನಥ ।**
**ನಿರ್ವ್ಯಾಪಾರಾ ವಯಂ ಸೂನನ್ಯೇಕಚಿತ್ತಾಸ್ತಥೈವ ಚ ॥೩೬॥**

ಓ ಸೂತಮಹರ್ಷಿಯೇ, ನಾವೆಲ್ಲರೂ ಪುರಾಣವನ್ನು ಕೇಳಲು ಆಸೆಯುಳ್ಳವರಾಗಿದೇವೆ. ಮತ್ತು ಪುರಾಣವನ್ನು ವಿವರಿಸಿ ಹೇಳುವ ನೀನೂ ಬುದ್ಧಿಕೌಶಲವುಳ್ಳವನಾಗಿದೀಯೆ. ಕೇಳುವ ನಾವೆಲ್ಲರೂ ಬೇರೆ ಯಾವ ಕೆಲಸವೂ ಇಲ್ಲದವರಾಗಿ ಏಕಾಗ್ರವಾದ ಮನಸ್ಸುಳ್ಳವರಾಗಿದೇವೆ. ಹೀಗೆ ಎಲ್ಲವೂ ಅನುಕೂಲವಾಗಿದೆ.

**ತ್ವಂ ಸೂತ ಭವ ದೀರ್ಘಾಯುಃ ತಾಪತ್ರಯವಿವರ್ಜಿತಃ ।**
**ಕಥಯಾದ್ಯ ಪುರಾಣಂ ಹಿ ಪುಣ್ಯಂ ಭಾಗವತಂ ಶಿವಂ ॥೩೭॥**

ಓ ಸೂತಮಹರ್ಷಿಯೇ, ನೀನು ಹೆಚ್ಚಾದ ಆಯುಸ್ಸುಳ್ಳವನಾಗು ಮತ್ತು ಮೂರು ಬಗೆಯ ತಾಪ (ಅಂದರೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ) ಗಳಿಲ್ಲದವನಾಗಿ, ಶಾಂತಿ ನೆಮ್ಮದಿಗಳುಳ್ಳವನಾಗಿ, ಪುಣ್ಯಕರವೂ ಮಂಗಳಕರವೂ ಆಗಿರುವ ದೇವೀಭಾಗವತವೆಂದು ಪ್ರಸಿದ್ಧವಾಗಿರುವ ಪುರಾಣವನ್ನು ನಮಗೆ ಈಗ ಹೇಳು.

**ಯತ್ರ ಧರ್ಮಾರ್ಥಕಾಮಾನಾಂ ವರ್ಣನಂ ವಿಧಿಪೂರ್ವಕಂ ।**
**ವಿದ್ಯಾಪ್ರಾಪ್ಯತಯಾ ಮೋಕ್ಷಃ ಕಥಿತೋ ಮುನಿನಾ ಕಿಲ ॥೩೮॥**

ಯಾವ ಆ ಪುರಾಣದಲ್ಲಿ ಧರ್ಮ, ಅರ್ಥ, ಕಾಮ ಎಂಬ ಪುರುಷಾರ್ಥಗಳ ಸ್ವರೂಪವನ್ನೂ ಶಾಸ್ತ್ರಗಳ ಪ್ರಮಾಣಗಳನ್ನೂ ಅನುಸರಿಸಿ ವರ್ಣಿಸಿದೆಯೋ ಮತ್ತು ಪರಮಪುರುಷಾರ್ಥವಾದ ಮೋಕ್ಷದ ಸ್ಥಿತಿಯನ್ನು ಜ್ಞಾನದಿಂದ ಪಡೆಯಲಾಗುತ್ತೆದೆಂಬ ಅಂಶವನ್ನು ವ್ಯಾಸಮಹರ್ಷಿಯು ವಿವರಿಸುತ್ತಾನೋ ಅಂತಹ ಪುರಾಣವನ್ನು ನಮಗೆ ತಿಳಿಯಹೇಳು.

**ದ್ವೈಪಾಯನೇನ ಮುನಿನಾ ಕಥಿತಂ ಯಚ್ಚ ಪಾವನಂ ।**
**ನ ತೃಪ್ಯಾಮೋ ವಯಂ ಸೂತ ಕಥಾಂ ಶ್ರುತ್ವಾ ಮನೋರಮಾಂ ॥೩೯॥**

ಓ ಸೂತಮಹರ್ಷಿಯೇ, ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾಗಿರುವ ವ್ಯಾಸಮಹರ್ಷಿಯು ಹೇಳಿರುವ, ಚಿತ್ತಶುದ್ಧಿಯನ್ನುಂಟುಮಾಡುವ, ಮನೋಹರವಾದ ಕಥೆಯನ್ನು ಕೇಳುವುದರಲ್ಲಿ ತೃಪ್ತಿ ಎಂದರೆ ಇಷ್ಟು ಸಾಕು, ಇನ್ನು ಬೇಡ ಎಂಬ ಭಾವವು ಉಂಟಾಗುವುದಿಲ್ಲ. ಇನ್ನೂ ಕೇಳಬೇಕೆನಿಸುತ್ತದೆ.

**ಸಕಲಗುಣಗಣಾನಾಮೇಕಪಾತ್ರಂ ಪವಿತ್ರಂ**
**ಅಖಿಲಭುವನಮಾತುರ್ನಾಟ್ಯವದ್ಯದ್ವಿಚಿತ್ರಂ ।**
**ನಿಖಿಲಮಲಗಣಾನಾಂ ನಾಶಕೃತ್ಕಾಮಕಂದಂ**
**ಪ್ರಕಟಯ ಭಗವತ್ಯಾ ನಾಮಯುಕ್ತಂ ಪುರಾಣಂ ॥೪೦॥**

ಎಲ್ಲ ಒಳ್ಳೆಯ ಗುಣಗಳಿಗೆ ಮುಖ್ಯಸ್ಥಾನವಾಗಿರುವ, ಪರಿಶುದ್ಧವಾದ, ಎಲ್ಲ ಪ್ರಪಂಚಕ್ಕೂ ತಾಯಿಯಾದ ದೇವಿಯು ನೆರವೇರಿಸಿದ ಕಾರ್ಯಗಳನ್ನು ತಿಳಿಸುವ ಆಶ್ಚರ್ಯಕರವಾದ, ಕೇಳುವವರಲ್ಲಿರಬಹುದಾದ ಎಲ್ಲ ಬಗೆಯ ಪಾಪಗಳ ಗುಂಪನ್ನೇ ನಾಶಮಾಡಬಲ್ಲ, ಜನರ ಕೋರಿಕೆಗಳನ್ನು ಈಡೇರಿಸಿಕೊಡುವ ಮಹಾಮಹಿಮಶಾಲಿಯಾದ ದೇವಿಯ ನಾಮಾಂಕಿತದಿಂದ ಕೂಡಿರುವ, ದೇವೀಭಾಗವತಪುರಾಣವನ್ನು ಲೋಕದಲ್ಲಿ ಪ್ರಸಿದ್ಧಿಗೆ ಬರುವಂತೆ ವಿವರಿಸಿ ಹೇಳು ಎಂದು ಸೂತನನ್ನು ಶೌನಕ ಮುಂತಾದವರು ಕೇಳಿದರು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ದ್ವಿತೀಯೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಮೊದಲನೆಯ
ಸ್ಕಂಧದಲ್ಲಿ ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀರಸ್ತು ॥

|| ಶ್ರೀಃ ||

# ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ತೃತೀಯೋಽಧ್ಯಾಯಃ ||

### ಮೂರನೆಯ ಅಧ್ಯಾಯವು

|| ಸೂತ ಉವಾಚ ||

**ಶೃಣ್ವಂತು ಸಂಪ್ರವಕ್ಷ್ಯಾಮಿ ಪುರಾಣಾನಿ ಮುನೀಶ್ವರಾಃ ।**
**ಯಥಾಶ್ರುತಾನಿ ತತ್ತ್ವೇನ ವ್ಯಾಸಾತ್ಸತ್ಯವತೀಸುತಾತ್ ॥೧॥**

ಸೂತಮುನಿಯು ಹೇಳುತ್ತಾನೆ—ಎಲೈ ಋಷಿಶ್ರೇಷ್ಠರೇ, ಹದಿನೆಂಟು ಪುರಾಣಗಳು ಯಾವಯಾವುವು ಎಂಬುದನ್ನು ಸತ್ಯವತೀಪುತ್ರನಾದ ವ್ಯಾಸಋಷಿಯಿಂದ ನಾನು ಕೇಳಿರುವ ಹಾಗೆಯೇ ನಿಮಗೆ ಹೇಳುತ್ತೇನೆ ಕೇಳಿರಿ.

**ಮದ್ವಯಂ ಭದ್ವಯಂ ಚೈವ ಬ್ರತ್ರಯಂ ವಚತುಷ್ಟಯಂ ।**
**ಅನಾಪಲಿಂಗಕೂಸ್ಕಾನಿ ಪುರಾಣಾನಿ ಪೃಥಕ್ ಪೃಥಕ್ ॥೨॥**

ಮಕಾರವೇ ಆದಿಯಾಗಿರುವ ಹೆಸರುಳ್ಳ ಮತ್ಸ್ಯ, ಮಾರ್ಕಂಡೇಯ ಎಂಬ ಪುರಾಣಗಳು ಎರಡು, ಭಕಾರವೇ ಆದಿಯಾಗಿರುವ ಹೆಸರುಳ್ಳ ಭಾಗವತ ಭವಿಷ್ಯತ್ ಎಂಬ ಪುರಾಣಗಳು ಎರಡು, ಬ್ರಕಾರವೇ ಆದಿಯಾಗಿರುವ ಹೆಸರುಳ್ಳ ಬ್ರಾಹ್ಮ, ಬ್ರಹ್ಮವೈವರ್ತ, ಬ್ರಹ್ಮಾಂಡ ಎಂಬ ಪುರಾಣಗಳು ಮೂರು, ವಕಾರಾದಿಯಾದ ಹೆಸರುಳ್ಳ ವಿಷ್ಣು, ವರಾಹ, ವಾಮನ, ವಾಯು ಎಂಬ ಪುರಾಣಗಳು ನಾಲ್ಕು, ಅಕಾರ, ನಕಾರ, ಪಕಾರ, ಲಿಂಕಾರ, ಗಕಾರ, ಕೂಕಾರ, ಸ್ಕಾಕಾರ ಇವುಗಳೇ ಆದಿಯಾಗಿರುವ ಹೆಸರುಳ್ಳ ಅಗ್ನಿ, ನಾರದ, ಪದ್ಮ, ಲಿಂಗ, ಗರುಡ, ಕೂರ್ಮ, ಸ್ಕಾಂದ ಎಂಬವು ಒಂದೊಂದು, ಈರೀತಿ ಹದಿನೆಂಟು ಪುರಾಣಗಳು.

**ಚತುರ್ದಶಸಹಸ್ರಂ ಚ ಮಾತ್ಸ್ಯಮಾದ್ಯಂ ಪ್ರಕೀರ್ತಿತಂ ।**

ಹದಿನಾಲ್ಕು ಸಾವಿರ ಶ್ಲೋಕಗಳುಳ್ಳ ಮತ್ಸ್ಯಪುರಾಣವು ಮೊದಲನೆಯದು.

**ತಥಾ ಗ್ರಹಸಹಸ್ರಂ ತು ಮಾರ್ಕಂಡೇಯಂ ಮಹಾದ್ಭುತಂ ॥೩॥**

ಒಂಭತ್ತುಸಾವಿರ ಶ್ಲೋಕಗಳುಳ್ಳ ಮಹಾದ್ಭುತವಾದ ಮಾರ್ಕಂಡೇಯ ಪುರಾಣವು ಎರಡನೆಯದು.

**ಚತುರ್ದಸಹಸ್ರಾಣಿ ತಥಾ ಪಂಚಶತಾನಿ ಚ ।**
**ಭವಿಷ್ಯಂ ಪರಿಸಂಖ್ಯಾತಂ ಮುನಿಭಿಸ್ತತ್ತ್ವದರ್ಶಿಭಿಃ ॥೪॥**

ಹದಿನಾಲ್ಕುಸಾವಿರದ ಐದುನೂರು ಶ್ಲೋಕಗಳುಳ್ಳ ಭವಿಷ್ಯತ್ಪುರಾಣವು ಮೂರನೆಯದೆಂದು ತತ್ತ್ವವನ್ನು ತಿಳಿದ ಋಷಿಗಳು ಹೇಳುತ್ತಾರೆ.

**ಅಷ್ಟಾದಶಸಹಸ್ರಂ ವೈ ಪುಣ್ಯಂ ಭಾಗವತಂ ಕಿಲ ।**

ಪುಣ್ಯಜನಕವಾದ ಹದಿನೆಂಟುಸಹಸ್ರಗ್ರಂಥಗಳುಳ್ಳ ಭಾಗವತಪುರಾಣವು ನಾಲ್ಕನೆಯದು.

**ತಥಾ ಚಾಯುತಸಂಖ್ಯಾಕಂ ಪುರಾಣಂ ಬ್ರಾಹ್ಮಸಂಜ್ಞಕಂ ॥೫॥**

ಹತ್ತುಸಾವಿರ ಶ್ಲೋಕಗಳುಳ್ಳ ಬ್ರಹ್ಮಪುರಾಣವು ಐದನೆಯದು.

**ದ್ವಾದಶೈವ ಸಹಸ್ರಾಣಿ ಬ್ರಹ್ಮಾಂಡಂ ಚ ಶತಾಧಿಕಂ ।**

ಹನ್ನೆರಡುಸಾವಿರದ ಒಂದುನೂರು ಗ್ರಂಥಗಳುಳ್ಳ ಬ್ರಹ್ಮಾಂಡಪುರಾಣವು ಆರನೆಯದು.

**ತಥಾ ಚಾಷ್ಟಾದಶಸಹಸ್ರಂ ಬ್ರಹ್ಮವೈವರ್ತಮೇವ ಚ ॥೬॥**

ಹದಿನೆಂಟು ಸಹಸ್ರ ಗ್ರಂಥಗಳುಳ್ಳ ಬ್ರಹ್ಮವೈವರ್ತಪುರಾಣವು ಏಳನೆಯದು.

**ಅಯುತಂ ವಾಮನಾಖ್ಯಂ ಚ ವಾಯವ್ಯಂ ಷಟ್ ಶತಾನಿ ಚ ।**
**ಚತುರ್ವಿಂಶತಿಸಂಖ್ಯಾತಃ ಸಹಸ್ರಾಣಿ ತು ಶೌನಕ ॥೭॥**

ಹತ್ತುಸಾವಿರ ಗ್ರಂಥಗಳುಳ್ಳವಾಮನಪುರಾಣವು ಎಂಟನೆಯದು. ಇಪ್ಪತ್ತು ನಾಲ್ಕುಸಾವಿರದ ಆರುನೂರು ಗ್ರಂಥಗಳುಳ್ಳ ವಾಯುಪುರಾಣವು ಒಂಭತ್ತನೆಯದು.

**ತ್ರಯೋವಿಂಶತಿಸಾಹಸ್ರಂ ವೈಷ್ಣವಂ ಪರಮಾದ್ಭುತಂ ।**

ಇಪ್ಪತ್ತುಮೂರುಸಾವಿರ ಗ್ರಂಥಗಳುಳ್ಳ ಅತ್ಯಾಶ್ಚರ್ಯಕರವಾದ ವಿಷ್ಣು ಪುರಾಣವು ಹತ್ತನೆಯದು.

**ಚತುರ್ವಿಂಶತಿಸಾಹಸ್ರಂ ವಾರಾಹಂ ಪರಮಾದ್ಭುತಂ ॥೮॥**

ಇಪ್ಪತ್ತುನಾಲ್ಕುಸಾವಿರ ಶ್ಲೋಕಗಳುಳ್ಳ ತುಂಬ ಆಶ್ಚರ್ಯಕರವಾದ ವರಾಹ ಪುರಾಣವು ಹನ್ನೊಂದನೆಯದು.

**ಷೋಡಶೈವ ಸಹಸ್ರಾಣಿ ಪುರಾಣಂ ಚಾಗ್ನಿಸಂಜ್ಞಿತಂ ।**

ಹದಿನಾರುಸಹಸ್ರ ಗ್ರಂಥಗಳುಳ್ಳ ಅಗ್ನಿಪುರಾಣವು ಹನ್ನೆರಡನೆಯದು.

**ಪಂಚವಿಂಶತಿಸಾಹಸ್ರಂ ನಾರದಂ ಪರಮಂ ಮತಂ ॥೯॥**

ಇಪ್ಪತ್ತೈದುಸಾವಿರ ಗ್ರಂಥಗಳುಳ್ಳ ಉತ್ತಮವಾದ ನಾರದಪುರಾಣವು ಹದಿಮೂರನೆಯದು.

**ಪಂಚಪಂಚಾಶತ್ಸಹಸ್ರಂ ಪದ್ಮಾಖ್ಯಂ ವಿಪುಲಂ ಮತಂ ।**

ಐವತ್ತೈದುಸಹಸ್ರ ಗ್ರಂಥಗಳುಳ್ಳ ವಿಸ್ತಾರವಾದ ಪದ್ಮಪುರಾಣವು ಹದಿನಾಲ್ಕನೆಯದು.

**ಏಕಾದಶಸಹಸ್ರಾಣಿ ಲಿಂಗಾಖ್ಯಂ ಚಾತಿವಿಸ್ತೃತಂ ॥೧೦॥**

ಹನ್ನೊಂದುಸಹಸ್ರ ಗ್ರಂಥಗಳುಳ್ಳ ಅತಿ ವಿಸ್ತಾರವಾದ ಲಿಂಗಪುರಾಣವು ಹದಿನೈದನೆಯದು.

**ಏಕೋನವಿಂಶತ್ಸಾಹಸ್ರಂ ಗಾರುಡಂ ಹರಿಭಾಷಿತಂ ।**

ವಿಷ್ಣುವಿನಿಂದ ಗರುಡನಿಗೆ ಹೇಳಲ್ಪಟ್ಟ ಹತ್ತೊಂಭತ್ತುಸಾವಿರ ಶ್ಲೋಕಗಳುಳ್ಳ ಗರುಡಪುರಾಣವು ಹದಿನಾರನೆಯದು.

**ಸಪ್ತದಶಸಹಸ್ರಂ ಚ ಪುರಾಣಂ ಕೂರ್ಮಭಾಷಿತಂ ॥೧೧॥**

ಕೂರ್ಮರೂಪಿಯಾದ ವಿಷ್ಣುವಿನಿಂದ ಹೇಳಲ್ಪಟ್ಟ ಹದಿನೇಳು ಸಹಸ್ರ ಶ್ಲೋಕಗಳುಳ್ಳ ಕೂರ್ಮಪುರಾಣವು ಹದಿನೇಳನೆಯದು.

**ಏಕಾಶೀತಿಸಹಸ್ರಾಣಿ ಸ್ಕಂದಾಖ್ಯಂ ಪರಮಾದ್ಭುತಂ ।**

ಎಂಬತ್ತೊಂದು ಸಹಸ್ರ ಗ್ರಂಥಗಳುಳ್ಳ ಪರಮಾಶ್ಚರ್ಯಕರವಾದ ಸ್ಕಾಂದ ಪುರಾಣವು ಹದಿನೆಂಟನೆಯದು.

**ಪುರಾಣಾಖ್ಯಾ ಚ ಸಂಖ್ಯಾ ಚ ವಿಸ್ತರೇಣ ಮಯಾನಘಾಃ ॥೧೨॥**

ಎಲೈ ದೋಷವಿಲ್ಲದ ಋಷಿಗಳಿರಾ, ಪುರಾಣಗಳ ಹೆಸರನ್ನೂ ಅವುಗಳಲ್ಲಿರುವ ಶ್ಲೋಕಗಳ ಸಂಖ್ಯೆಯನ್ನೂ ವಿಸ್ತಾರವಾಗಿ ನಿಮಗೆ ಹೇಳಿರುತ್ತೇನೆ.

**ತಥೈವೋಪಪುರಾಣಾನಿ ಶೃಣ್ವಂತು ಋಷಿಸತ್ತಮಾಃ ।**
**ಸನತ್ಕುಮಾರಂ ಪ್ರಥಮಂ ನಾರಸಿಂಹಂ ತತಃ ಪರಂ ॥೧೩॥**

ಎಲೈ ಋಷಿಶ್ರೇಷ್ಠರೇ, ಈಗ ಉಪಪುರಾಣಗಳು ಯಾವುವೆಂಬುದನ್ನೂ ಹೇಳು ತ್ತೇನೆ ಕೇಳಿರಿ. ಸನತ್ಕುಮಾರಪುರಾಣವು ಮೊದಲನೆಯದು. ಅನಂತರ ನಾರಸಿಂಹ ಪುರಾಣವು.

**ನಾರದೀಯಂ ಶಿವಂ ಚೈವ ದೌರ್ವಾಸಸಮನುತ್ತಮಂ ।**
**ಕಾಪಿಲಂ ಮಾನವಂ ಚೈವ ತಥಾ ಚೌಶನಸಂ ಸ್ಮೃತಂ ॥೧೪॥**

**ವಾರುಣಂ ಕಾಲಿಕಾಖ್ಯಂ ಚ ಸಾಂಬಂ ನಂದಿಕೃತಂ ಶುಭಂ ।**
**ಸಾರಂ ಪಾರಾಶರಪ್ರೋಕ್ತಮಾದಿತ್ಯಂ ಚಾತಿವಿಸ್ತರಂ ॥೧೫॥**

**ಮಾಹೇಶ್ವರಂ ಭಾಗವತಂ ವಾಸಿಷ್ಠಂ ಚ ಸವಿಸ್ತರಂ ।**
**ಏತಾನ್ಯುಪಪುರಾಣಾನಿ ಕಥಿತಾನಿ ಮಹಾತ್ಮಭಿಃ ॥೧೬॥**

ಅನಂತರ ಅನುಕ್ರಮವಾಗಿ, ನಾರದೀಯಪುರಾಣ, ಶಿವಪುರಾಣ, ದೂರ್ವಾಸ ಪುರಾಣ, ಕಪಿಲಪುರಾಣ, ಮನುಪುರಾಣ, ಉಶನಪುರಾಣ, ವರುಣಪುರಾಣ, ಕಾಳಿಕಾ ಪುರಾಣ, ಸಾಂಬಪುರಾಣ, ನಂದಿಪುರಾಣ, ಸೌರಪುರಾಣ, ಪರಾಶರರಿಂದ ಉಕ್ತವಾದ

ಆದಿತ್ಯಪುರಾಣ, ಮಾಹೇಶ್ವರಪುರಾಣ, ಭಾಗವತಪುರಾಣ, ವಸಿಷ್ಠ ಪುರಾಣ ಇವುಗಳನ್ನು ಉಪಪುರಾಣಗಳೆಂಬುದಾಗಿ ಮಹಾತ್ಮರು ಹೇಳುತ್ತಾರೆ.

**ಅಷ್ಟಾದಶಪುರಾಣಾನಿ ಕೃತ್ವಾ ಸತ್ಯವತೀಸುತಃ ।**
**ಭಾರತಾಖ್ಯಾನಮತುಲಂ ಚಕ್ರೇ ತದುಪಬೃಂಹಿತಂ ॥೧೭॥**

ಸತ್ಯವತೀಪುತ್ರನಾದ ವ್ಯಾಸನು ಹದಿನೆಂಟುಪುರಾಣಗಳನ್ನು ರಚಿಸಿ ಅನಂತರದಲ್ಲಿ ಅವುಗಳ ಸಾರವನ್ನು ಸಂಗ್ರಹಮಾಡಿ ಮಹಾಭಾರತವನ್ನು ರಚಿಸಿದನು. ಇಲ್ಲಿ ವಿಶೇಷವೇನೆಂದರೆ, ಮಹಾಪುರಾಣಗಳಲ್ಲಿ ಭಾಗವತದ ಹೆಸರಿದೆ. ಉಪಪುರಾಣಗಳಲ್ಲಿಯೂ ಭಾಗವತದ ಹೆಸರಿದೆ. ಹೀಗಿರುವಲ್ಲಿ ದೇವೀಭಾಗವತವು ಉಪಪುರಾಣವೇ: ಅಥವಾ ಮಹಾಪುರಾಣವೇ ಎಂದು ಸಂದೇಹ ಬರಬಹುದು. ಆದರೆ ದೇವೀಭಾಗವತವನ್ನು ಮಹಾಪುರಾಣವೆಂದೇ ಹೇಳಬೇಕು. ಉಪಪುರಾಣಗಳ ಗುಂಪಿನಲ್ಲಿರುವ ಭಾಗವತವು ವಿಷ್ಣುಭಾಗವತವೆಂದು ತಿಳಿಯಬೇಕು. ಏಕೆಂದರೆ ವಿಷ್ಣುಭಾಗವತದಲ್ಲಿ ಮಹಾಭಾರತವನ್ನು ರಚಿಸಿದ ವ್ಯಾಸಋಷಿಯು ಅದರಿಂದ ತೃಪ್ತನಾಗದೆ ವಿಷ್ಣುಭಾಗವತವನ್ನು ರಚಿಸಿದನು ಎಂದು ವಿಷ್ಣುಭಾಗವತದಿಂದಲೇ ಗೊತ್ತಾಗುತ್ತದೆ. ಆದ್ದರಿಂದ ವಿಷ್ಣುಭಾಗವತವು ಮಹಾಭಾರತದನಂತರ ರಚಿತವಾದುದೆಂಬುದು ಸಿದ್ಧವಾಯಿತು. ಮಹಾಭಾರತವಾದರೋ ಹದಿನೆಂಟು ಪುರಾಣಗಳನ್ನು ರಚಿಸಿದ ಅನಂತರದಲ್ಲಿ ರಚಿತವೆಂಬುದು ಈ ಶ್ಲೋಕದಿಂದಲೇ ಗೊತ್ತಾಗುತ್ತದೆ. ಆದುದರಿಂದ ಅಷ್ಟಾದಶಮಹಾಪುರಾಣಾಂತರ್ಗತವಾದುದು ದೇವೀಭಾಗವತವೇ ಎಂದು ಹೇಳಬೇಕಾಗಿದೆ.

**ಮನ್ವಂತರೇಷು ಸರ್ವೇಷು ದ್ವಾಪರೇ ದ್ವಾಪರೇ ಯುಗೇ ।**
**ಪ್ರಾದುಃಕರೋತಿ ಧರ್ಮಾರ್ಥೀ ಪುರಾಣಾನಿ ಯಥಾವಿಧಿ ॥೧೮॥**

ಎಲ್ಲ ಮನ್ವಂತರಗಳಲ್ಲಿಯೂ ಬರುವ ಎಲ್ಲ ದ್ವಾಪರಯುಗಗಳಲ್ಲಿಯೂ ಧರ್ಮಾರ್ಥಿಯಾದ ವ್ಯಾಸಮುನಿಯು ಯಥಾವಿಧಿಯಾಗಿ ಹದಿನೆಂಟು ಪುರಾಣಗಳನ್ನು ಪ್ರಕಾಶಗೊಳಿಸುತ್ತಾನೆ. ಮನ್ವಂತರವೆಂದರೆ, ಕೃತ, ತ್ರೇತಾ, ದ್ವಾಪರ, ಕಲಿ ಎಂಬ ನಾಲ್ಕು ಯುಗಗಳು ಎಪ್ಪತ್ತೊಂದು ಸಲ ಮರಳಿದರೆ ಒಂದು ಮನ್ವಂತರ, ಇಂಥ ಮನ್ವಂತರಗಳು ಹದಿನಾಲ್ಕು. ಮನುಗಳು ಹದಿನಾಲ್ಕು ಜನಗಳಿರುವುದರಿಂದ ಮನ್ವಂತರಗಳು ಹದಿನಾಲ್ಕು. ಹೀಗೆ ಬರುವ ಪ್ರತಿಯೊಂದು ಮನ್ವಂತರದಲ್ಲಿಯೂ

ಮೊದಲನೆಯ ದ್ವಾಪರಯುಗದಲ್ಲಿ ವ್ಯಾಸಋಷಿಯು ಪುರಾಣಾದಿಗಳನ್ನು ಪ್ರಕಾಶಗೊಳಿಸುತ್ತಾನೆ.

**ದ್ವಾಪರೇ ದ್ವಾಪರೇ ವಿಷ್ಣುರ್ವ್ಯಾಸರೂಪೇಣ ಸರ್ವದಾ ।**
**ವೇದಮೇಕಂ ಸ ಬಹುಧಾ ಕುರುತೇ ಹಿತಕಾಮ್ಯಯಾ ॥೧೯॥**

ಪ್ರತಿಯೊಂದು ದ್ವಾಪರಯುಗದಲ್ಲಿಯೂ ವ್ಯಾಸರೂಪನಾದ ವಿಷ್ಣುವೇ ಲೋಕಕ್ಕೆ ಹಿತವನ್ನುಂಟುಮಾಡಲಪೇಕ್ಷೆಯಿಂದ ಒಟ್ಟಿಗೆ ಒಂದೇ ಆಗಿದ್ದ ವೇದವನ್ನು ಅನೇಕವಿಭಾಗಗಳಾಗಿ ವಿಂಗಡಿಸುತ್ತಾನೆ.

**ಅಲ್ಪಾಯುಷೋಽಲ್ಪಬುದ್ಧೀಂಶ್ಚ ವಿಪ್ರಾನ್ ಜ್ಞಾತ್ವಾ ಕಲಾವಥ ।**
**ಪುರಾಣಸಂಹಿತಾಂ ಪುಣ್ಯಾಂ ಕುರುತೇಽಸೌ ಯುಗೇಯುಗೇ ॥೨೦॥**

ಕಲಿಯುಗದಲ್ಲಿ ಬ್ರಾಹ್ಮಣರು ಅಲ್ಪಬುದ್ಧಿಯುಳ್ಳವರೂ, ಅಲ್ಪಾಯುಸ್ಸುಳ್ಳವರೂ ಆಗಿ ಹುಟ್ಟುತ್ತಾರಾದ್ದರಿಂದ ಅವರಿಗೆ ಸಂಪೂರ್ಣವಾಗಿ ವೇದಾಧ್ಯಯನವನ್ನೂ ಅದರ ಅರ್ಥವಿಚಾರವನ್ನೂ ಮಾಡಿ ಸಂಪೂರ್ಣವಾಗಿ ವಿಷಯಗಳನ್ನು ತಿಳಿಯಲು ಸಾಧ್ಯವಿಲ್ಲವೆಂಬುವುದನ್ನು ತಿಳಿದು ವ್ಯಾಸಋಷಿಯು ಪ್ರತಿಯೊಂದು ದ್ವಾಪರಯುಗದಲ್ಲಿಯೂ ಅವತಾರಮಾಡಿ ಪುರಾಣಗಳನ್ನು ಜನಗಳ ತಿಳುವಳಿಕೆಗಾಗಿ ರಚಿಸುತ್ತಾನೆ.

**ಸ್ತ್ರೀಶೂದ್ರದ್ವಿಜಬಂಧೂನಾಂ ನ ವೇದಶ್ರವಣಂ ಮತಂ ।**
**ತೇಷಾಮೇವ ಹಿತಾರ್ಥಾಯ ಪುರಾಣಾನಿ ಕೃತಾನಿ ಚ ॥೨೧॥**

ಹೆಂಗಸರಿಗೂ, ಶೂದ್ರರಿಗೂ ವೇದಾಧ್ಯಯನಮಾಡುವ ಅಧಿಕಾರವಿಲ್ಲವೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ವಿಶೇಷವಾಗಿ ಅವರ ಉದ್ಧಾರಕ್ಕಾಗಿಯೇ ಪುರಾಣಗಳು ಬರೆಯಲ್ಪಟ್ಟವು.

**ಮನ್ವಂತರೇ ಸಪ್ತಮೇಽತ್ರ ಶುಭೇ ವೈವಸ್ವತಾಭಿಧೇ ।**
**ಅಷ್ಟಾವಿಂಶತಿಮೇ ಪ್ರಾಪ್ತೇ ದ್ವಾಪರೇ ಮುನಿಸತ್ತಮಾಃ ॥೨೨॥**

**ವ್ಯಾಸಃ ಸತ್ಯವತೀಸೂನುಃ ಗುರುರ್ಮೇ ಧರ್ಮವಿತ್ತಮಃ ।**
**ಏಕೋನತ್ರಿಂಶತ್ಸಂಪ್ರಾಪ್ತೇ ದ್ರೌಣಿರ್ವ್ಯಾಸೋ ಭವಿಷ್ಯತಿ ॥೨೩॥**

ಎಲೈ ಋಷಿಶ್ರೇಷ್ಠರೇ, ಏಳನೆಯದಾದ ವೈವಸ್ವತಮನ್ವಂತರದಲ್ಲಿ ಇಪ್ಪತ್ತೆಂಟನೆಯ ದ್ವಾಪರಯುಗದಲ್ಲಿ ಸತ್ಯವತಿಯ ಮಗನಾದ ಧರ್ಮವನ್ನು ತಿಳಿದವರಲ್ಲಿ

ಉತ್ತಮನಾದ ನನ್ನ ಗುರುವಾದ ವ್ಯಾಸಮುನಿಯು ಅವತಾರಮಾಡುತ್ತಾನೆ. ಇಪ್ಪತ್ತೊಂಬತ್ತನೆಯ ದ್ವಾಪರಯುಗದಲ್ಲಿ ದ್ರೋಣರ ಮಗನಾದ ಅಶ್ವತ್ಥಾಮನು ವ್ಯಾಸನಾಗುವನು.

**ಅತೀತಾಸ್ತು ತಥಾ ವ್ಯಾಸಾಃ ಸಪ್ತವಿಂಶತಿರೇವ ಚ ।**
**ಪುರಾಣಸಂಹಿತಾಸ್ತೈಸ್ತು ಕಥಿತಾಸ್ತು ಯುಗೇಯುಗೇ ॥೨೪॥**

ಹೀಗೆ ಇಪ್ಪತ್ತೇಳು ಜನ ವ್ಯಾಸರು ಕಳೆದುಹೋಗಿದ್ದಾರೆ. ಅವರೆಲ್ಲರೂ ಪ್ರತಿ ಯುಗದಲ್ಲಿಯೂ ಪುರಾಣಗಳನ್ನು ಹೇಳಿದ್ದಾರೆ.

|| ಋಷಯ ಊಚುಃ ||

**ಬ್ರೂಹಿ ಸೂತ ಮಹಾಭಾಗ ವ್ಯಾಸಾಃ ಪೂರ್ವಯುಗೋದ್ಭವಾಃ ।**
**ವಕ್ತಾರಸ್ತು ಪುರಾಣಾನಾಂ ದ್ವಾಪರೇ ದ್ವಾಪರೇ ಯುಗೇ ॥೨೫॥**

ಪುಣ್ಯಶಾಲಿಯಾದ ಸೂತಋಷಿಯೇ, ಪೂರ್ವದಲ್ಲಿ ಕಳೆದುಹೋದ ಪ್ರತಿಯೊಂದು ದ್ವಾಪರಯುಗದಲ್ಲಿಯೂ ಪುರಾಣಗಳನ್ನು ಹೇಳಿದ ವ್ಯಾಸರು ಯಾರು ಯಾರು ಎಂಬುದನ್ನು ನಮಗೆ ಹೇಳು ಎಂಬುದಾಗಿ ಋಷಿಗಳು ಕೇಳಿದರು.

|| ಸೂತ ಉವಾಚ ||

**ದ್ವಾಪರೇ ಪ್ರಥಮೇ ವ್ಯಸ್ತಾಃ ಸ್ವಯಂ ವೇದಾಃ ಸ್ವಯಂಭುವಾ ।**
**ಪ್ರಜಾಪತಿರ್ದ್ವಿತೀಯೇ ತು ದ್ವಾಪರೇ ವ್ಯಾಸಕಾರ್ಯಕೃತ್ ॥೨೬॥**

ಸೂತನು ಹೇಳುತ್ತಾನೆ—ಮೊದಲನೆಯ ದ್ವಾಪರಯುಗದಲ್ಲಿ ಚತುರ್ಮುಖ ಬ್ರಹ್ಮನು ತಾನೇ ವೇದಗಳನ್ನು ವಿಂಗಡಿಸಿದನು. ಎರಡನೆಯ ದ್ವಾಪರಯುಗದಲ್ಲಿ ಪ್ರಜಾಪತಿಯು ವ್ಯಾಸನ ಕೆಲಸವನ್ನು ಅಂದರೆ ವೇದವಿಭಾಗವನ್ನು ಮಾಡುವವನಾದನು.

**ತೃತೀಯೇ ಚೋಶನಾ ವ್ಯಾಸಶ್ಚತುರ್ಥೇ ತು ಬೃಹಸ್ಪತಿಃ ।**
**ಪಂಚಮೇ ಸವಿತಾ ವ್ಯಾಸಃ ಷಷ್ಠೇ ಮೃತ್ಯುಸ್ತದಾಪರೇ ॥೨೭॥**

ಮೂರನೆಯ ದ್ವಾಪರಯುಗದಲ್ಲಿ ಉಶನಸನೂ, ನಾಲ್ಕನೆಯದರಲ್ಲಿ ಬೃಹಸ್ಪತಿಯೂ, ಐದನೆಯದರಲ್ಲಿ ಸೂರ್ಯನೂ, ಆರನೆಯದರಲ್ಲಿ ಮೃತ್ಯುವೂ,

ಮಘವಾ ಸಪ್ತಮೇ ಪ್ರಾಪ್ತೇ ವಸಿಷ್ಠಸ್ತ್ವಷ್ಟಮೋ ಸ್ಮೃತಃ ।
ಸಾರಸ್ವತಸ್ತು ನವಮೇ ತ್ರಿಧಾಮಾ ದಶಮೇ ತಥಾ ॥೨೮॥

ಏಕಾದಶೇಽಥ ತ್ರಿವೃಷೋ ಭರದ್ವಾಜಸ್ತತಃ ಪರಂ ।
ತ್ರಯೋದಶೇ ಚಾಂತರಿಕ್ಷೋ ಧರ್ಮಶ್ಚಾಪಿ ಚತುರ್ದಶೇ ॥೨೯॥

ಏಳನೆಯದರಲ್ಲಿ ಇಂದ್ರನೂ, ಎಂಟನೆಯ ಯುಗದಲ್ಲಿ ವಸಿಷ್ಠನೂ, ಒಂಭತ್ತನೆಯ ಯುಗದಲ್ಲಿ ಸಾರಸ್ವತನೂ, ಹತ್ತನೆಯ ಯುಗದಲ್ಲಿ ತ್ರಿಧಾಮ ಎಂಬುವನೂ, ಹನ್ನೊಂದನೆಯ ಯುಗದಲ್ಲಿ ತ್ರಿವೃಷ ಎಂಬುವನೂ, ಅನಂತರ ಹನ್ನೆರಡನೆಯ ಯುಗದಲ್ಲಿ ಭರದ್ವಾಜನೂ, ಹದಿಮೂರನೆಯ ಯುಗದಲ್ಲಿ ಅಂತರಿಕ್ಷ ಎಂಬುವನೂ, ಹದಿನಾಲ್ಕನೆಯ ಯುಗದಲ್ಲಿ ಧರ್ಮ ಎಂಬುವನೂ,

ತ್ರಯ್ಯಾರುಣಿಃ ಪಂಚದಶೇ ಷೋಡಶೇ ತು ಧನಂಜಯಃ ।
ಮೇಧಾತಿಥಿಃ ಸಪ್ತದಶೇ ವ್ರತೀ ಹ್ಯಷ್ಟಾದಶೇ ತಥಾ ॥೩೦॥

ಅತ್ರಿರೇಕೋನವಿಂಶೇಽಥ ಗೌತಮಸ್ತು ತತಃಪರಂ ।
ಉತ್ತಮಶ್ಚೈಕವಿಂಶೇಽಥ ಹರ್ಯಾತ್ಮಾ ಪರಿಕೀರ್ತಿತಃ ॥೩೧॥

ವೇನೋ ವಾಜಶ್ರವಾಶ್ಚೈವ ಸೋಮೋಽಮುಷ್ಯಾಯಣಸ್ತಥಾ ।
ತೃಣಬಿಂದುಸ್ತಥಾ ವ್ಯಾಸೋ ಭಾರ್ಗವಸ್ತು ತತಃ ಪರಂ ॥೩೨॥

ತತಃ ಶಕ್ತಿರ್ಜಾತುಕರ್ಣ್ಯಃ ಕೃಷ್ಣದ್ವೈಪಾಯನಸ್ತತಃ ।
ಅಷ್ಟಾವಿಂಶತಿಸಂಖ್ಯೇಯಂ ಕಥಿತಾ ಯಾ ಮಯಾ ಶ್ರುತಾ ॥೩೩॥

ಹದಿನೈದನೆಯ ಯುಗದಲ್ಲಿ ತ್ರಯ್ಯಾರುಣಿ ಎಂಬುವನೂ, ಹದಿನಾರನೆಯದರಲ್ಲಿ ಧನಂಜಯನೂ, ಹದಿನೇಳನೆಯದರಲ್ಲಿ ಮೇಧಾತಿಥಿಯೂ, ಹದಿನೆಂಟನೆಯದರಲ್ಲಿ ವ್ರತೀ ಎಂಬುವನೂ, ಹತ್ತೊಂಬತ್ತನೆಯದರಲ್ಲಿ ಅತ್ರಿಯೂ ಅನಂತರ ಇಪ್ಪತ್ತನೆಯದರಲ್ಲಿ ಗೌತಮನೂ, ಇಪ್ಪತ್ತೊಂದನೆಯದರಲ್ಲಿ ಭಗವಂತನ ಸ್ವರೂಪನಾದ ಉತ್ತಮನೆಂಬುವನೂ, ಅನಂತರ ವೇನವಾಜಶ್ರವರೂ, ಸೋಮಅಮುಷ್ಯಾಯಣರೂ, ತೃಣಬಿಂದುವೂ, ವ್ಯಾಸನೂ, ಭಾರ್ಗವನೂ, ಶಕ್ತಿಜಾತುಕರ್ಣ್ಯರೂ, ಅನಂತರ ಕೃಷ್ಣದ್ವೈಪಾಯನನೂ ಇವರುಗಳು ಅನುಕ್ರಮವಾಗಿ ಒಂದೊಂದು ಯುಗದಲ್ಲಿಯೂ

ವೇದವಿಭಾಗಕಾರ್ಯವನ್ನು ಮಾಡಿರುವುದರಿಂದ ಈ ಇಪ್ಪತ್ತೆಂಟು ಜನ ವ್ಯಾಸರನ್ನು ನಾನು ಕೇಳಿ ತಿಳಿದಿರುವ ಹಾಗೆ ಅವರ ಹೆಸರುಗಳನ್ನು ನಿಮಗೆ ಹೇಳಿರುತ್ತೇನೆ.

**ಕೃಷ್ಣದ್ವೈಪಾಯನಾತ್ಪ್ರೋಕ್ತಂ ಪುರಾಣಂ ಚ ಮಯಾ ಶ್ರುತಂ ।**
**ಶ್ರೀಮದ್ಭಾಗವತಂ ಪುಣ್ಯಂ ಸರ್ವದುಃಖೌಘನಾಶನಂ ॥೩೪॥**
**ಕಾಮದಂ ಮೋಕ್ಷದಂ ಚೈವ ವೇದಾರ್ಥಪರಿಬೃಂಹಿತಂ ।**
**ಸರ್ವಾಗಮರಸಾರಾಮಂ ಮುಮುಕ್ಷೂಣಾಂ ಸದಾ ಪ್ರಿಯಂ ॥೩೫॥**

ಅಲ್ಲದೆ, ವ್ಯಾಸನಿಂದ ಹೇಳಲ್ಪಟ್ಟಿರುವ ಭಾಗವತಪುರಾಣವೂ ನನ್ನಿಂದ ಕೇಳಲ್ಪಟ್ಟಿದೆ. ಆ ಭಾಗವತವು ಪುಣ್ಯವನ್ನುಂಟುಮಾಡುವಂಥದು. ಸಮಸ್ತ ಪಾಪಗಳನ್ನು ನಾಶಮಾಡುವುದು, ಇಷ್ಟಾರ್ಥವನ್ನು ಕೊಡುವುದು, ಮೋಕ್ಷವನ್ನುಂಟುಮಾಡುವುದು, ವೇದಾರ್ಥದಿಂದ ಕೂಡಿರುವುದು. ಎಲ್ಲ ವೇದಗಳ ರಸಕ್ಕೆ, ಮುಖ್ಯ ತಾತ್ಪರ್ಯಕ್ಕೆ ಆಶ್ರಯವಾದುದು. ಮೋಕ್ಷವನ್ನು ಅಪೇಕ್ಷಿಸುವವರಿಗೆ ಯಾವಾಗಲೂ ಪ್ರಿಯವಾದುದು.

**ವ್ಯಾಸೇನ ಕೃತ್ವಾತಿಶುಭಂ ಪುರಾಣಂ**
**ಶುಕಾಯ ಪುತ್ರಾಯ ಮಹಾತ್ಮನೇ ಯತ್ ।**
**ವೈರಾಗ್ಯಯುಕ್ತಾಯ ಚ ಪಾಠಿತಂ ವೈ**
**ವಿಜ್ಞಾಯ ಚೈವಾರಣಿಸಂಭವಾಯ ॥೩೬॥**

ವ್ಯಾಸಋಷಿಯು ಈ ಪುರಾಣವನ್ನು ರಚಿಸಿ ಇದು ಬಹಳ ಮಂಗಳಕರವಾದುದೆಂದು ತಿಳಿದು, ಮಹಾತ್ಮನೂ ಅರಣಿಯಲ್ಲಿ ಹುಟ್ಟಿದುದರಿಂದ ಅಯೋನಿಜನೂ, ವೈರಾಗ್ಯನಿಧಿಯೂ ಆದ ತನ್ನ ಮಗನಾದ ಶುಕಮಹರ್ಷಿಗೆ ಉಪದೇಶಮಾಡಿದನು. ಇದರಿಂದ ಈ ಪುರಾಣವು ಅಯೋನಿಜನೂ ವೈರಾಗ್ಯನಿಧಿಯೂ ಆದ ಪುತ್ರನಿಗೆ ಉಪದೇಶಮಾಡಲ್ಪಟ್ಟದ್ದರಿಂದ ಬಹಳ ಉತ್ತಮವಾದ ಪುರಾಣವೆಂದು ಹೇಳಿದ ಹಾಗಾಯಿತು.

**ಶ್ರುತಂ ಮಯಾ ತತ್ರ ತಥಾ ಗೃಹೀತಂ**
**ಯಥಾರ್ಥವದ್ವ್ಯಾಸಮುಖಾನ್ಮುನೀಂದ್ರಾಃ ।**
**ಪುರಾಣಗುಹ್ಯಂ ಸಕಲಂ ಸಮೇತಂ**
**ಗುರೋಃ ಪ್ರಸಾದಾತ್ಕರುಣಾನಿಧೇಶ್ಚ ॥೩೭॥**

ಹೀಗೆ ವ್ಯಾಸಋಷಿಯು ತನ್ನ ಪುತ್ರನಿಗೆ ಉಪದೇಶಮಾಡುವ ಸಮಯದಲ್ಲಿ ನಾನೂ ದಯಾಳುವಾದ ಗುರುವಿನ ಅನುಗ್ರಹದಿಂದ ಯಥಾರ್ಥವತ್ತಾಗಿ ಕೇಳಿ ಅದರಂತೆ ಗ್ರಹಣಮಾಡಿರುತ್ತೇನೆ.

**ಸುತೇನ ಪೃಷ್ಟಃ ಸಕಲಂ ಜಗಾದ**
**ದ್ವೈಪಾಯನಸ್ತತ್ರ ಪುರಾಣಗುಹ್ಯಂ ।**
**ಅಯೋನಿಜೇನಾದ್ಭುತಬುದ್ಧಿನಾ ವೈ**
**ಶ್ರುತಂ ಮಯಾ ತತ್ರ ಮಹಾಪ್ರಭಾವಂ** ॥೩೮॥

ಅಯೋನಿಜನೂ ಅದ್ಭುತ ಕುಶಲಬುದ್ಧಿಯುಳ್ಳವನೂ ತನ್ನ ಪುತ್ರನೂ ಆದ ಶುಕನಿಂದ ಪ್ರಾರ್ಥಿಸಲ್ಪಟ್ಟು ವ್ಯಾಸಮುನಿಯು ಈ ಭಾಗವತಪುರಾಣದಲ್ಲಿ ಎಲ್ಲ ಪುರಾಣಗಳ ಗುಟ್ಟನ್ನೂ ಹೇಳಿರುತ್ತಾನೆ. ಆದುದರಿಂದ ಈ ಪುರಾಣವು ಮಹಾ ಮಹಿಮೆಯುಳ್ಳದು.

**ಶ್ರೀಮದ್ಭಾಗವತಾಮರಾಂಘ್ರಿಪಫಲಾಸ್ವಾದಾದರಃ ಸತ್ತಮಾಃ**
**ಸಂಸಾರಾರ್ಣವದುರ್ವಿಗಾಹ್ಯ ಸಲಿಲಂ ಸಂತರ್ತುಕಾಮಃ ಶುಕಃ ।**
**ನಾನಾಖ್ಯಾನರಸಾಲಯಂ ಶ್ರುತಿಪುಟೈಃ ಪ್ರೇಮ್ಣಾಽಶೃಣೋದದ್ಭುತಂ**
**ತಚ್ಛ್ರುತ್ವಾ ನ ವಿಮುಚ್ಯತೇ ಕಲಿಭಯಾದೇವಂವಿಧಃ ಕಃ ಕ್ಷಿತೌ**
**(ಕೋ ಭುವಿ)** ॥೩೯॥

ಎಲೈ ಸತ್ಪುರುಷರಲ್ಲಿ ಉತ್ತಮರಾದ ಋಷಿಗಳಿರಾ, ಅತ್ಯಗಾಧವಾದ ಸಂಸಾರ ಸಮುದ್ರದ ನೀರನ್ನು ದಾಟಲು ಇಚ್ಛಿಸುವ, ಶ್ರೀಮದ್ಭಾಗವತವೆಂಬ ಕಲ್ಪವೃಕ್ಷದ ಹಣ್ಣಿನ ರಸವನ್ನು ಸವಿಯುವುದರಲ್ಲಿ ಪ್ರೀತಿಯುಳ್ಳ ಆ ಶುಕಮಹರ್ಷಿಯು ನಾನಾ ಬಗೆಯಾದ ಕಥೆಗಳಲ್ಲಿನ ರಸಗಳಿಗೆ ಆಶ್ರಯವಾದ ಆಶ್ಚರ್ಯಕರವಾದ ಈ ಭಾಗವತ ವನ್ನು ಬಹಳ ಪ್ರೀತ್ಯಾದರಗಳೊಡನೆ ತನ್ನ ಕಿವಿಯಿಂದ ಕೇಳಿದನು. ಈ ರೀತಿಯಾದ ಭಾಗವತವನ್ನು ಕೇಳಿ ಯಾರು ತಾನೇ ಈ ಭೂಮಿಯಲ್ಲಿ ಕಲಿದೋಷಗಳಿಂದುಂಟಾ ಗುವ ತೊಂದರೆಯಿಂದ ಬಿಡುಗಡೆ ಹೊಂದಲಾರರು? ಎಲ್ಲರೂ ಕಲಿಯ ತೊಂದರೆ ಯಿಂದ ಬಿಡುಗಡೆ ಹೊಂದುತ್ತಾರೆಂದು ತಾತ್ಪರ್ಯವು.

**ಪಾಪೀಯಾನಪಿ ವೇದಧರ್ಮರಹಿತಃ ಸ್ವಾಚಾರಹೀನಾಶಯೋ**
**ವ್ಯಾಜೇನಾಪಿ ಶೃಣೋತಿ ಯಃ ಪರಮಿದಂ ಶ್ರೀಮತ್ಪುರಾಣೋತ್ತಮಂ**

**ಭುಕ್ತ್ವಾ ಭೋಗಕಲಾಪಮತ್ರ ವಿಪುಲಂ ದೇಹಾವಸಾನೇಽಚಲಂ**
**ಯೋಗಿಪ್ರಾಪ್ಯಮವಾಪ್ನುಯಾದ್ಭಗವತೀನಾಮಾಂಕಿತಂ ಸುಂದರಂ ॥೪೦॥**

ಲೋಕದಲ್ಲಿ ಪಾಪಿಷ್ಠನೇ ಆಗಲಿ, ವೇದಗಳಲ್ಲಿ ಹೇಳಿರುವ ಧರ್ಮಗಳನ್ನು ಆಚರಿಸದಿರುವವನೇ ಆಗಲಿ, ತನ್ನ ವರ್ಣಾಶ್ರಮಧರ್ಮಗಳನ್ನು ಆಚರಿಸದಿರುವವನಾಗಲೀ, ದೇವಿಯ ನಾಮಗಳಿಂದ ಕೂಡಿರುವ ಈ ಸುಂದರವಾದ ದೇವೀಭಾಗವತವನ್ನು ಬೇರೆ ಯಾವ ನೆಪದಿಂದ ಕೇಳಿದರೂ ಅಂತಹ ಕೇಳಿದವನು ಇಹಲೋಕದಲ್ಲಿ ಎಲ್ಲ ಭೋಗಗಳನ್ನೂ ಅನುಭವಿಸಿ ದೇಹಾವಸಾನದಲ್ಲಿ ಯೋಗಿಗಳಿಂದ ಹೊಂದುವುದಕ್ಕೆ ಯೋಗ್ಯವಾದ ಉತ್ತಮವಾದ ನಿತ್ಯವಾದ ಸದ್ಗತಿಯನ್ನೂ ಹೊಂದುತ್ತಾನೆ.

**ಯಾ ನಿರ್ಗುಣಾ ಹರಿಹರಾದಿಭಿರಪ್ಯಲಭ್ಯಾ**
**ವಿದ್ಯಾ ಸತಾಂ ಪ್ರಿಯತಮಾಥ ಸಮಾಧಿಗಮ್ಯಾ ।**
**ಸಾ ತಸ್ಯ ಚಿತ್ತಕುಹರೇ ಪ್ರಕರೋತಿ ಭಾವಂ**
**ಯಃ ಸಂಶೃಣೋತಿ ಸತತಂ ತು ಸತೀಪುರಾಣಂ ॥೪೧॥**

ಯಾವ ದೇವಿಯು ಸತ್ತ್ವರಜಸ್ತಮಸ್‌ಗಳೆಂಬ ಗುಣಗಳಿಂದ ಬಿಡಲ್ಪಟ್ಟಿರುವಳಾಗಿದ್ದಾಳೆಯೋ, ಯಾವ ದೇವಿಯು ಜ್ಞಾನವೇ ಸ್ವರೂಪವಾಗಿ ಉಳ್ಳವಳೋ, ಸತ್ಪುರುಷರಿಗೆ ಅತ್ಯಂತ ಪ್ರೀತಿಪಾತ್ರಳಾಗಿದಾಳೋ, ಏಕಾಗ್ರವಾದ ಸಮಾಧಿಯಿಂದ ಮಾತ್ರ ಹೊಂದುವುದಕ್ಕೆ ಸಾಧ್ಯವಾದವಳೋ, ಹರಿಹರಾದಿಗಳಿಂದಲೂ ಇಂತಹ ಸಮಾಧಿಯಿಲ್ಲದೆ ಹೊಂದಲು ಅಸಾಧ್ಯಳೂ ಆಗಿದ್ದಾಳೆಯೋ ಅಂಥಾ ದೇವಿಯು ಈ ದೇವೀಭಾಗವತವನ್ನು ಯಾವಾಗಲೂ ಕೇಳುವವರ ಹೃದಯದಲ್ಲಿ ವಾಸಮಾಡುವವಳಾಗುತ್ತಾಳೆ.

**ಸಂಪ್ರಾಪ್ಯ ಮಾನುಷಭವಂ ಸಕಲಾಂಗಯುಕ್ತಂ**
**ಪೋತಂ ಭವಾರ್ಣವಜಲೋತ್ತರಣಾಯ ಕಾಮಂ ।**
**ಸಂಪ್ರಾಪ್ಯ ವಾಚಕಮಹೋ ನ ಶೃಣೋತಿ ಮೂಢಃ**
**ಸೋ ವಂಚಿತೋಽತ್ರ ವಿಧಿನಾ ಸುಖದಂ ಪುರಾಣಂ ॥೪೨॥**

ಸಂಸಾರವೆಂಬ ಸಮುದ್ರದ ಜಲವನ್ನು ದಾಟುವುದಕ್ಕೆ ಹಡಗಿನಂತಿರುವ, ಪಟುವಾದ ಎಲ್ಲ ಅವಯವಗಳಿಂದ ಕೂಡಿದ ಈ ಮನುಷ್ಯದೇಹವೆಂಬ ತೆಪ್ಪವನ್ನೂ ಪಡೆದು

ಈ ಪುರಾಣವನ್ನು ಹೇಳುವವರನ್ನು ಹೊಂದಿದಾಗ್ಯೂ, ಐಹಿಕಾಮುಷ್ಮಿಕಸುಖಗಳನ್ನು ಕೊಡುವ ಈ ಪುರಾಣವನ್ನು ಯಾವನು ಕೇಳುವುದಿಲ್ಲವೋ ಅಂಥವನು ಮೂಢನು ಮತ್ತು ದೈವದಿಂದ ಮೋಸಗೊಳಿಸಲ್ಪಟ್ಟವನು ಅಂದರೆ ಅದೃಷ್ಟಹೀನನು ಎಂದು ತಿಳಿಯಬೇಕು.

**ಯಃ ಪ್ರಾಪ್ಯ ಕರ್ಣಯುಗಲಂ ಪಟುಮಾನುಷತ್ವೇ**
**ರಾಗೀ ಶೃಣೋತಿ ಸತತಂ ಚ ಪರಾಪವಾದಾನ್ ।**
**ಸರ್ವಾರ್ಥದಂ ರಸನಿಧಿಂ ವಿಮಲಂ ಪುರಾಣಂ**
**ನಷ್ಟಃ ಕುತೋ ನ ಶೃಣುತೇ ಭುವಿ ಮಂದಬುದ್ಧಿಃ ॥೪೩॥**

ವಿವೇಚಿಸಿ ತಿಳಿಯಲು ಶಕ್ತಿಯುಳ್ಳ ಈ ಮನುಷ್ಯಜನ್ಮದಲ್ಲಿ ಕೇಳಲು ಸಮರ್ಥವಾದ ಶ್ರೋತ್ರೇಂದ್ರಿಯ (ಕಿವಿ) ವನ್ನು ಹೊಂದಿ ಯಾವಾಗಲೂ ಯಾವನು ಮತ್ತೊಬ್ಬರ ದೂಷಣಾದಿಗಳನ್ನು ಕೇಳುತ್ತಾನೋ, ಎಲ್ಲಾ ಮನಸ್ಸಿನ ಬಯಕೆಗಳನ್ನು ಸಲ್ಲಿಸುವ ಆನಂದರೂಪಸಾದ ಆತ್ಮನ ಸ್ವರೂಪವನ್ನು ತಿಳಿಸುವ ಭಂಡಾರದ ನಿಧಿಯಂತಿರುವ, ಪರಿಶುದ್ಧವಾದ ಈ ಮಹಾಪುರಾಣವನ್ನು ಯಾವನು ಕೇಳುವುದಿಲ್ಲವೋ ಅಂಥವನು ದಡ್ಡನೂ, ನಷ್ಟವಾದವನೂ ಹೇಗಾಗುವುದಿಲ್ಲ, ಅಂದರೆ ಯಾವನು ಇದನ್ನು ಕೇಳುವುದಿಲ್ಲವೋ ಅವನು ಕೇವಲ ದಡ್ಡನೂ ಹೌದು, ಸೌಕರ್ಯಗಳೆಲ್ಲವೂ ಇದ್ದರೂ ಪ್ರಯೋಜನವನ್ನು ಪಡೆಯದಿರುವುದರಿಂದ ಎಲ್ಲಾ ವಿಧವಾದ ನಷ್ಟವನ್ನು ಹೊಂದಿದವನೂ ಹೌದು ಎಂದು ತಾತ್ಪರ್ಯವು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ತೃತೀಯೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

### || ಚತುರ್ಥೋಽಧ್ಯಾಯಃ ||

### ನಾಲ್ಕನೆಯ ಅಧ್ಯಾಯ

|| ಋಷಯ ಊಚುಃ ||

**ಸೌಮ್ಯ ವ್ಯಾಸಸ್ಯ ಭಾರ್ಯಾಯಾಂ ಕಸ್ಯಾಂ ಜಾತಃ ಸುತಃ ಶುಕಃ ।**
**ಕಥಂ ವಾ ಕೀದೃಶೋ ಯೇನ ಪಠಿತೇಯಂ ಸುಸಂಹಿತಾ ॥೧॥**

ಋಷಿಗಳು ಸೂತನನ್ನು ಪ್ರಶ್ನೆಮಾಡುತ್ತಾರೆ—ಎಲೈ ಸಾಧುವೇ, ವ್ಯಾಸ ಋಷಿಯ ಯಾವ ಪತ್ನಿಯಲ್ಲಿ ಶುಕನೆಂಬ ಮಗನು ಹೇಗೆ ಹುಟ್ಟಿದನು ? ಅವನು ಎಂಥ ಗುಣಗಳುಳ್ಳವನು ? ಅವನು ಈ ರೀತಿಯಾದ ಈ ಒಳ್ಳೆಯ ಸಂಹಿತೆಯನ್ನು ಕೇಳಬೇಕಾದರೆ ಸಾಮಾನ್ಯಗುಣವುಳ್ಳವನಲ್ಲ. ಆದುದರಿಂದ ಅವನು ಹುಟ್ಟಿದ ರೀತಿ ಮೊದಲಾದುವುಗಳನ್ನು ನಮಗೆ ಹೇಳು.

**ಅಯೋನಿಜಸ್ತ್ವಯಾ ಪ್ರೋಕ್ತಸ್ತಥಾ ಚಾರಣಿಜಃ ಶುಕಃ ।**
**ಸಂದೇಹೋಽಸ್ತಿ ಮಹಾಂಸ್ತತ್ರ ಕಥಯಾದ್ಯ ಮಹಾಮತೇ ॥೨॥**

ಎಲೈ ಸೂತನೇ, ಶುಕಮುನಿಯು ಅಯೋನಿಜನೆಂಬುದಾಗಿಯೂ, ಅರಣಿಯಲ್ಲಿ ಹುಟ್ಟಿದವನೆಂಬುದಾಗಿಯೂ ಹೇಳುತ್ತೀಯೆ. ಅಲ್ಲಿ ನಮಗೆ ಒಂದು ದೊಡ್ಡ ಸಂದೇಹವುಂಟಾಗಿದೆ. ಆದ್ದರಿಂದ ನಮಗೆ ಅವನ ಉತ್ಪತ್ತಿಯ ರೀತಿಯನ್ನು ಹೇಳು. ಇಲ್ಲಿ ಸಂದೇಹವೇನೆಂದರೆ, ಮನುಷ್ಯನು ಹುಟ್ಟಬೇಕಾದರೆ ಶರೀರಕ್ಕೆ ಕಾರಣವಾದ ಬೀಜವು ಇಲ್ಲದೆ ಆಗುವುದಿಲ್ಲ. ಆ ಬೀಜವು ಅರಣಿಯಲ್ಲಿ ಬರಲು ಕಾರಣವಿಲ್ಲ. ಆದ್ದರಿಂದ ಅವನು ಅರಣಿಯಲ್ಲಿ ಜನಿಸಿದುದು ಹೇಗೆ ? ಎಂಬುದು.

**ಗರ್ಭಯೋಗೀ ಶ್ರುತಃ ಪೂರ್ವಂ ಶುಕೋ ನಾಮ ಮಹಾತಪಾಃ ।**
**ಕಥಂ ಚ ಪಠಿತಂ ತೇನ ಪುರಾಣಂ ಬಹುವಿಸ್ತರಂ ॥೩॥**

ಅಲ್ಲದೆ ದೊಡ್ಡ ತಪಸ್ವಿಯಾದ ಆ ಶುಕಮುನಿಯು ಗರ್ಭದಲ್ಲಿರುವಾಗಲೇ ಯೋಗಿಯಾಗಿದ್ದನೆಂಬುದಾಗಿ ನಾವು ಕೇಳಿದ್ದೇವೆ. ಹೀಗಿರುವಾಗ ಯೋಗಿಗಳಾದವರಿಗೆ ಕಾರ್ಯಾಕಾರ್ಯದ ತಿಳಿವಳಿಕೆಗೆ ಬೇರೆಯವರ ಸಹಾಯವು ಅವಶ್ಯಕವಿಲ್ಲ. ಹೀಗಿದ್ದಾಗ್ಯೂ ಈ ವಿಸ್ತಾರವಾದ ಪುರಾಣವನ್ನು ಆ ಶುಕಮುನಿಯು ಹೇಗೆ? ಏಕೆ ಓದಬೇಕಾಯಿತು? ಇವೆಲ್ಲವನ್ನೂ ನಮಗೆ ತಿಳಿಸಬೇಕೆಂದು ಕೇಳಿದರು.

|| ಸೂತ ಉವಾಚ ||

**ಪುರಾ ಸರಸ್ವತೀತೀರೇ ವ್ಯಾಸಃ ಸತ್ಯವತೀಸುತಃ ।**
**ಆಶ್ರಮೇ ಕಲವಿಂಕೌ ತು ದೃಷ್ಟ್ವಾ ವಿಸ್ಮಯಮಾಗತಃ ॥೪॥**

ಸೂತಮುನಿಯು ಹೇಳುತ್ತಾನೆ—ಪೂರ್ವದಲ್ಲಿ ಸರಸ್ವತೀನದಿಯ ದಡದಲ್ಲಿ ಸತ್ಯವತಿಯ ಪುತ್ರನಾದ ವ್ಯಾಸಋಷಿಯು ಆಶ್ರಮದಲ್ಲಿ ವಾಸಮಾಡಿಕೊಂಡಿದ್ದಾಗ ಒಂದು ದಿನ ಕಲವಿಂಕ (ಗುಬ್ಬಚ್ಚಿ) ದಂಪತಿಗಳನ್ನು ನೋಡಿ ಆಶ್ಚರ್ಯಹೊಂದಿದನು.

**ಜಾತಮಾತ್ರಂ ಶಿಶುಂ ನೀಡೇ ಮುಕ್ತಮಂಡಾನ್ಮನೋಹರಂ ।**
**ತಾಮ್ರಾಸ್ಯಂ ಶುಭಸರ್ವಾಂಗಂ ಪಿಚ್ಛಾಂಕುರವಿವರ್ಜಿತಂ ॥೫॥**

**ತೌ ತು ಭಕ್ಷ್ಯಾರ್ಥಮತ್ಯಂತಂ ರತೌ ಶ್ರಮಪರಾಯಣೌ ।**
**ಶಿಶೋಶ್ಚಂಚುಪುಟೇ ಭಕ್ಷ್ಯಂ ಕ್ಷಿಪಂತೌ ಚ ಪುನಃಪುನಃ ॥೬॥**

ಆ ದಂಪತಿಗಳು ಆಗತಾನೇ ಮೊಟ್ಟೆಯಿಂದ ಹೊರಟಿದ್ದ ಮರಿಯನ್ನು ತಮ್ಮ ಗೂಡಿನಲ್ಲಿಟ್ಟುಕೊಂಡಿದ್ದುವು. ಆ ಮರಿಯು ನೋಡಲು ಬಹಳ ಸುಂದರವಾಗಿತ್ತು. ಅದು ಕೆಂಪಾದ ಮುಖವುಳ್ಳದ್ದಾಗಿಯೂ ಪುಚ್ಛವಿಲ್ಲದ್ದಾಗಿ (ಗರಿಗಳಿಲ್ಲದ್ದಾಗಿ) ಯೂ ಇತ್ತು. ಬಹಳ ಆಯಾಸಪಟ್ಟಿದ್ದ ಆ ಹಕ್ಕಿಗಳು ಆಹಾರ ತೆಗೆದುಕೊಳ್ಳಲಪೇಕ್ಷೆಯುಳ್ಳವುಗಳಾಗಿದ್ದರೂ ತಾವು ತಿನ್ನುವ ಆಹಾರವನ್ನು ಆ ಮರಿಯ ಕೊಕ್ಕಿನಲ್ಲಿ ಮತ್ತೆ ಮತ್ತೆ ಇಡುತ್ತಿದ್ದವು.

**ಅಂಗೇನಾಂಗಾನಿ ಬಾಲಸ್ಯ ಘರ್ಷಯಂತೌ ಮುದಾನ್ವಿತೌ ।**
**ಚುಂಬಂತೌ ಚ ಮುಖಂ ಪ್ರೇಮ್ಣಾ ಕಲವಿಂಕೌ ಶಿಶೋಃ ಶುಭಂ ॥೭॥**

ಮತ್ತು ಆಕಲವಿಂಕಗಳು ತಮ್ಮ ಅಂಗಗಳಿಂದ ಅದರ ಅವಯವಗಳನ್ನು ಜ್ಞು ತ್ತಲೂ ಪ್ರೀತಿಯಿಂದ ಅದರ ಮುಖಕ್ಕೆ ಮುತ್ತಿಡುತ್ತಲೂ ಇದ್ದುವು.

**ವೀಕ್ಷ್ಯ ಪ್ರೇಮಾದ್ಭುತಂ ತತ್ರ ಬಾಲೇ ಚಟಕಯೋಸ್ತದಾ ।**
**ವ್ಯಾಸಶ್ಚಿಂತಾತುರಃ ಕಾಮಂ ಮನಸಾ ಸಮಚಿಂತಯತ್ ॥೮॥**

ಈ ರೀತಿಯಾಗಿ ಆ ಮರಿಯಲ್ಲಿ ಆ ಹಕ್ಕಿಗಳಿಗಿರುವ ಬಹಳವಾದ ಪ್ರೀತಿಯನ್ನು ವ್ಯಾಸನು ನೋಡಿ ಚಿಂತೆಯಿಂದ ಕೂಡಿದವನಾಗಿ ಮನಸ್ಸಿನಲ್ಲಿ ಮುಂದೆ ಹೇಳುವ ರೀತಿಯಲ್ಲಿ ಯೋಚಿಸಿದನು.

**ತಿರಶ್ಚಾಮಪಿ ಯತ್ಪ್ರೇಮ ಪುತ್ರೇ ಸಮುಭಿಲಕ್ಷ್ಯತೇ ।**
**ಕಿಂ ಚಿತ್ರಂ ಯನ್ಮನುಷ್ಯಾಣಾಂ ಸೇವಾಫಲಮಭೀಪ್ಸತಾಂ ॥೯॥**

ತಿರ್ಯಕ್ಪ್ರಾಣಿಗಳಾದ ಹಕ್ಕಿಗಳಿಗೂ ಕೂಡ ಮಕ್ಕಳಲ್ಲಿ ಈ ರೀತಿಯಾದ ಪ್ರೇಮವು ಕಾಣುತ್ತಲಿದೆ. ಹೀಗಿರುವಲ್ಲಿ ಬುದ್ಧಿವಂತರಾದ ಮಕ್ಕಳು ಹುಟ್ಟಿ ನಮ್ಮ ಸೇವೆಮಾಡುತ್ತಾರೆಂದು ಬಯಸುವ ಮನುಷ್ಯರಿಗೆ ಹೆಚ್ಚಾದ ಪ್ರೀತಿಯಿದೆ ಎಂಬುದೇ ನಾಶ್ಚರ್ಯವು ?

**ಕಿಮೇತೌ ಚಟಕೌ ಚಾಸ್ಯ ವಿವಾಹಂ ಸುಖಸಾಧನಂ ।**
**ವಿರಚ್ಯ ಸುಖಿನೌ ಸ್ಯಾತಾಂ ದೃಷ್ಟ್ವಾ ವಧ್ವಾ ಮುಖಂ ಶುಭಂ ॥೧೦॥**

ಈ ಎರಡು ಹಕ್ಕಿಗಳು ಸುಖಕ್ಕೆ ಸಾಧನವಾದ ವಿವಾಹವನ್ನು ಇದಕ್ಕೆ ಮಾಡಿ ಸೊಸೆಯ ಮುಖವನ್ನು ನೋಡಿ ಸುಖವನ್ನನುಭವಿಸುತ್ತವೆಯೋ ಏನು ?

**ಅಥವಾ ವಾರ್ಧಕೇ ಪ್ರಾಪ್ತೇ ಪರಿಚರ್ಯಾಂ ಕರಿಷ್ಯತಿ ।**
**ಪುತ್ರಃ ಪರಮಧರ್ಮಿಷ್ಠಃ ಪುಣ್ಯಾರ್ಥಂ ಕಲವಿಂಕಯೋಃ ॥೧೧॥**

ಹಾಗಲ್ಲದಿದ್ದರೆ ತಮಗೆ ಮುಪ್ಪು ಬರಲು ಈ ಮಗುವು ದೊಡ್ಡದಾದ ಮೇಲೆ ಬಹಳ ಧರ್ಮಿಷ್ಠನಾಗಿ ಪುಣ್ಯಸಂಪಾದನೆಗಾಗಿ ತಮ್ಮ ಸೇವೆಯನ್ನು ಮಾಡುವುದೆಂದು ಈ ರೀತಿಯಾಗಿ ಮಾಡುತ್ತಿವೆಯೇ ?

**ಅರ್ಜಯಿತ್ವಾಥವಾ ದ್ರವ್ಯಂ ಪಿತರೌ ತರ್ಪಯಿಷ್ಯತಿ ।**
**ಅಥವಾ ಪ್ರೇತಕಾರ್ಯಾಣಿ ಕರಿಷ್ಯತಿ ಯಥಾವಿಧಿ ॥೧೨॥**

ಅಥವಾ ಈ ಮಗನು ದ್ರವ್ಯವನ್ನು ಸಂಪಾದಿಸಿ ತಂದೆತಾಯಿಗಳನ್ನು ತೃಪ್ತಿಪಡಿಸುತ್ತಾನೆಯೇ? ಹಾಗಲ್ಲದಿದ್ದರೆ ತಂದೆತಾಯಿಗಳು ಸತ್ತಮೇಲೆ ಅವರ ಸದ್ಗತಿಗಾಗಿ ಮಗನು ಮಾಡಬೇಕಾದ ಶ್ರಾದ್ಧತರ್ಪಣ ಮುಂತಾದ ಶಾಸ್ತ್ರೋಕ್ತವಾದ ಪ್ರೇತಕಾರ್ಯವನ್ನು ಮಾಡುತ್ತಾನೆಯೇ?

**ಅಥವಾ ಕಿಂ ಗಯಾಶ್ರಾದ್ಧಂ ಗತ್ವಾ ಸಂವಿತರಿಷ್ಯತಿ ।**
**ನೀಲೋತ್ಸರ್ಗಂ ಚ ವಿಧಿವತ್ಪ್ರಕರಿಷ್ಯತಿ ಬಾಲಕಃ ॥೧೩॥**

ಅಥವಾ ಈ ಬಾಲಕನು ಗಯಾಕ್ಷೇತ್ರಕ್ಕೆ ಹೋಗಿ ಅಲ್ಲಿ ತಂದೆತಾಯಿಗಳಿಗೆ ಶ್ರಾದ್ಧಮಾಡುತ್ತಾನೆಯೇ? ಅಥವಾ ಇವನು ನೀಲವಾದ ವೃಷಭವನ್ನು ಪಿತೃಗಳನ್ನು ಉದ್ದೇಶಿಸಿ ಬಿಡುತ್ತಾನೆಯೇ?

**ಸಂಸಾರೇಽತ್ರ ಸಮಾಖ್ಯಾತಂ ಸುಖಾನಾಮುತ್ತಮಂ ಸುಖಂ ।**
**ಪುತ್ರಗಾತ್ರಪರಿಷ್ವಂಗೋ ಲಾಲನಂ ಚ ವಿಶೇಷತಃ ॥೧೪॥**

ಈ ಕಾರಣಗಳ ಪೈಕಿ ಯಾವುದೂ ಇಲ್ಲವು. ಆದುದರಿಂದ ಈ ಸಂಸಾರದಲ್ಲಿ ನಮಗೆ ದೊರೆಯುವ ಸುಖಗಳಲ್ಲೆಲ್ಲಾ ಮಗನ ಶರೀರದ ಆಲಿಂಗನವೂ, ಹೆಚ್ಚಾಗಿ ಪ್ರೀತಿಸಿ ಮುದ್ದಾಡಿಸುವುದೂ ಇವುಗಳು ಉತ್ತಮವಾದ ಸುಖಗಳೆನ್ನಿಸಿಕೊಳ್ಳುತ್ತವೆ.

**ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೋ ನೈವ ಚ ನೈವ ಚ ।**
**ಪುತ್ರಾದನ್ಯತರನ್ನಾಸ್ತಿ ಪರಲೋಕಸ್ಯ ಸಾಧನಂ ॥೧೫॥**

ಪುತ್ರನಿಲ್ಲದವನಿಗೆ ಈ ಲೋಕದ ಸುಖವಾಗಲೀ ಪರಲೋಕದಲ್ಲಿ ಸದ್ಗತಿಯಾಗಲೀ ಇಲ್ಲವು. ಸ್ವರ್ಗವಂತೂ ದೊರೆಯುವುದೇ ಇಲ್ಲವು. ಪರಲೋಕಕ್ಕೆ ಸಾಧನವಾದುದು ಪುತ್ರನಿಗಿಂತಲೂ ಮಿಗಿಲಾದುದು ಬೇರೆ ಯಾವದೂ ಇಲ್ಲವೇ ಇಲ್ಲವು.

**ಮನ್ವಾದಿಭಿಶ್ಚ ಮುನಿಭಿರ್ಧರ್ಮಶಾಸ್ತ್ರೇಷು ಭಾಷಿತಂ ।**
**ಪುತ್ರವಾನ್ ಸ್ವರ್ಗಮಾಪ್ನೋತಿ ನಾಪುತ್ರಸ್ತು ಕಥಂಚನ ॥೧೬॥**

ಮನುವೇ ಮೊದಲಾದವರು ಧರ್ಮಶಾಸ್ತ್ರಗಳಲ್ಲಿ ಮಗನುಳ್ಳವನು ಸ್ವರ್ಗವನ್ನು ಹೊಂದುತ್ತಾನೆ. ಮಕ್ಕಳಿಲ್ಲದವನಿಗೆ ಹೇಗೂ ಸ್ವರ್ಗವಿಲ್ಲವೆಂದು ಹೇಳಿರುತ್ತಾರೆ.

**ದೃಶ್ಯತೇಽತ್ರ ಸಮಕ್ಷಂ ತನ್ನಾನುಮಾನೇನ ಸಾಧ್ಯತೇ ।**
**ಪುತ್ರವಾನ್ಮುಚ್ಯತೇ ಪಾಪಾದಾಪ್ತವಾಕ್ಯಂ ಚ ಶಾಶ್ವತಂ ॥೧೭॥**

ಮಗನು ಅವಶ್ಯವಾಗಿರಲೇಬೇಕೆಂಬುದಕ್ಕೆ ಪ್ರತ್ಯಕ್ಷವೇ ಪ್ರಮಾಣವು. ಅದು ಈ ಹಕ್ಕಿಗಳನ್ನು ನೋಡಿದರೇ ತಿಳಿಯುತ್ತದೆ. ಇದನ್ನು ಅನುಮಾನದಿಂದ ಊಹಿಸ ಬೇಕಾಗಿಲ್ಲವು. ಮಕ್ಕಳುಳ್ಳವನು ಪಾಪದಿಂದ ಬಿಡುಗಡೆಯಾಗಿ ಶ್ರೇಯಸ್ಸನ್ನು ಹೊಂದುತ್ತಾನೆಂಬ ಆಪ್ತವಾಕ್ಯವು, ಈ ವಿಷಯದಲ್ಲಿ ಸತ್ಯವಾದುದು.

**ಆತುರೋ ಮೃತ್ಯುಕಾಲೇಽಪಿ ಭೂಮಿಶಯ್ಯಾಗತೋ ನರಃ ।**
**ಕರೋತಿ ಮನಸಾ ಚಿಂತಾಂ ದುಃಖಿತಃ ಪುತ್ರವರ್ಜಿತಃ ॥೧೮॥**

ಖಾಯಿಲೆಯಿಂದ ನರಳುತ್ತಿದ್ದು ಮರಣಕಾಲವು ಸಮಾಪಿಸಿರುವಾಗಲೂ, ಭೂಮಿಯಲ್ಲಿರುವ ಹಾಸಿಗೆಯಲ್ಲಿ ಮಲಗಿರುವ ಮಕ್ಕಳಿಲ್ಲದ ಮನುಷ್ಯನು ದುಃಖವುಳ್ಳ ವನಾಗಿ ಈ ರೀತಿಯಾಗಿ ಯೋಚಿಸುತ್ತಾನೆ.

**ಧನಂ ಮೇ ವಿಪುಲಂ ಗೇಹೇ ಪಾತ್ರಾಣಿ ವಿವಿಧಾನಿ ಚ ।**
**ಮಂದಿರಂ ಸುಂದರಂ ಚೈತತ್ಕೋಽಸ್ಯ ಸ್ವಾಮೀ ಭವಿಷ್ಯತಿ ॥೧೯॥**

ನನ್ನ ಮನೆಯಲ್ಲಿ ಬೇಕಾದಷ್ಟು ದ್ರವ್ಯವೂ ಪಾತ್ರೆಪದಾರ್ಥಗಳೂ ಇವೆ. ಮನೆಯಾದರೋ ಬಹಳ ಸುಂದರವಾಗಿದೆ. ನಾನು ಮರಣಹೊಂದಿದಲ್ಲಿ ಇದಕ್ಕೆ ಯಜಮಾನನು ಯಾವನು ಆಗುವನು? ಎಂಬುದಾಗಿ ಯೋಚಿಸುತ್ತಾನೆ.

**ಮೃತ್ಯುಕಾಲೇ ಮನಸ್ತಸ್ಯ ದುಃಖೇನ ಭ್ರಮತೇ ಯತಃ ।**
**ಅತೋಽಸ್ಯ ದುರ್ಗತಿರ್ನೂನಂ ಭ್ರಾಂತಚಿತ್ತಸ್ಯ ಸರ್ವಥಾ ॥೨೦॥**

ಮರಣಕಾಲದಲ್ಲಿ ಅಂಥ ಮಕ್ಕಳಿಲ್ಲದವನಿಗೆ ಮನಸ್ಸು ದುಃಖದಿಂದ ಬಹಳ ಚಂಚಲವಾಗಿರುತ್ತದೆ. ಹೀಗಿರುವುದರಿಂದ ಭ್ರಾಂತಿಹೊಂದಿದ ಮನಸ್ಸುಳ್ಳ ಅವನಿಗೆ ದುರ್ಗತಿಯಲ್ಲದೆ ಬೇರೆ ಸದ್ಗತಿಯಿಲ್ಲವು.

**ಏವಂ ಬಹುವಿಧಾಂ ಚಿಂತಾಂ ಕೃತ್ವಾ ಸತ್ಯವತೀಸುತಃ ।**
**ನಿಃಶ್ವಸ್ಯ ಬಹುಧಾ ಚೋಷ್ಣಂ ವಿಮನಾಃ ಸಂಬಭೂವ ಹ ॥೨೧॥**

ಈ ರೀತಿಯಾಗಿ ಸತ್ಯವತೀದೇವಿಯ ಮಗನಾದ ವ್ಯಾಸನು ಹಲವು ಬಗೆಯಾಗಿ ಯೋಚಿಸಿ ಬಿಸಿಯಾಗಿ ನಿಟ್ಟುಸಿರನ್ನು ಬಿಟ್ಟು ವ್ಯಥೆಯುಳ್ಳ ಮನಸ್ಸುಳ್ಳವನಾದನು.

**ವಿಚಾರ್ಯ ಮನಸಾತ್ಯರ್ಥಂ ಕೃತ್ವಾ ಮನಸಿ ನಿಶ್ಚಯಂ ।**
**ಜಗಾಮ ಚ ತಪಸ್ತಪ್ತುಂ ಮೇರುಪರ್ವತಸನ್ನಿಧೌ ॥೨೨॥**

ಈರೀತಿಯಾಗಿ ಮನಸ್ಸಿನಲ್ಲಿ ಬಹಳವಾಗಿ ಯೋಚಿಸಿ ಕಡೆಗೆ ನಿಶ್ಚಯ ಮಾಡಿಕೊಂಡು ಮೇರುಪರ್ವತದ ತಪ್ಪಲಿನಲ್ಲಿ ತಪಸ್ಸುಮಾಡುವುದಕ್ಕಾಗಿ ಹೊರಟು ಹೋದನು.

**ಮನಸಾ ಚಿಂತಯಾಮಾಸ ಕಂ ದೇವಂ ಸಮುಪಾಸ್ಮಹೇ ।**
**ವರಪ್ರದಾನನಿಪುಣಂ ವಾಂಛಿತಾರ್ಥಪ್ರದಂ ತಥಾ ॥೨೩॥**

ಅಲ್ಲಿ ಮನಸ್ಸಿನಲ್ಲಿ ನನಗೆ ಇಷ್ಟವಾದ ವರವನ್ನು ಕೊಡುವ, ಭಕ್ತರ ಕೋರಿಕೆಗಳನ್ನು ನೆರವೇರಿಸಬಲ್ಲ, ಯಾವ ದೇವರನ್ನು ಕುರಿತು ತಪಸ್ಸುಮಾಡೋಣ ಎಂದು ಯೋಚಿಸಿದನು.

**ವಿಷ್ಣುಂ ರುದ್ರಂ ಸುರೇಂದ್ರಂ ವಾ ಬ್ರಹ್ಮಾಣಂ ಚ ದಿವಾಕರಂ ।**
**ಗಣೇಶಂ ಕಾರ್ತಿಕೇಯಂ ಚ ಪಾವಕಂ ವರುಣಂ ತಥಾ ॥೨೪॥**

ವಿಷ್ಣು, ಶಿವ, ದೇವೇಂದ್ರ, ಬ್ರಹ್ಮ, ಸೂರ್ಯ, ಗಣಪತಿ, ಷಣ್ಮುಖ, ಅಗ್ನಿ, ವರುಣ, ಈ ದೇವತೆಗಳಲ್ಲಿ ಯಾವ ದೇವತೆಯನ್ನು ಕುರಿತು ತಪಸ್ಸುಮಾಡಲಿ.

**ಏವಂ ಚಿಂತಯತಸ್ತಸ್ಯ ನಾರದೋ ಮುನಿಸತ್ತಮಃ ।**
**ಯದೃಚ್ಛಯಾ ಸಮಾಯಾತೋ ವೀಣಾಪಾಣಿಃ ಸಮಾಹಿತಃ ॥೨೫॥**

ಈ ರೀತಿಯಾಗಿ ವ್ಯಾಸಋಷಿಯು ಯೋಚಿಸುತ್ತಿರಲಾಗಿ ಅಕಸ್ಮಾತ್ತಾಗಿ ಋಷಿಶ್ರೇಷ್ಠನಾದ ವೀಣೆಯನ್ನು ಕೈಯಲ್ಲಿ ಧರಿಸಿರುವ ನಾರದಮುನಿಯು ಅಲ್ಲಿಗೆ ಬಂದನು.

**ತಂ ದೃಷ್ಟ್ವಾ ಪರಮಪ್ರೀತೋ ವ್ಯಾಸಸ್ಸತ್ಯವತೀಸುತಃ ।**
**ಕೃತ್ವಾರ್ಘ್ಯಮಾಸನಂ ದತ್ವಾ ಪಪ್ರಚ್ಛ ಕುಶಲಂ ಮುನಿಂ ॥೨೬॥**

ಸತ್ಯವತೀದೇವಿಯ ಮಗನಾದ ವ್ಯಾಸನು ಆ ನಾರದಋಷಿಯನ್ನು ನೋಡಿ ಬಹಳ ಸಂತೋಷಪಟ್ಟವನಾಗಿ ಆ ಮುನಿಗೆ ಅರ್ಘ್ಯಾಸನಾದಿಗಳನ್ನು ಕೊಟ್ಟು ಉಪಚರಿಸಿ ಕುಶಲಪ್ರಶ್ನೆಯನ್ನು ಮಾಡಿದನು.

**ಶ್ರುತ್ವಾಥ ಕುಶಲಪ್ರಶ್ನಂ ಪಪ್ರಚ್ಛ ಮುನಿಸತ್ತಮಃ ।**
**ಚಿಂತಾತುರೋಽಸಿ ಕಸ್ಮಾತ್ತ್ವಂ ದ್ವೈಪಾಯನ ವದಸ್ವ ಮೇ ॥೨೭॥**

ವ್ಯಾಸನ ಕುಶಲಪ್ರಶ್ನೆಯನ್ನು ಕೇಳಿ ನಾರದನು ವ್ಯಾಸನನ್ನು ಕುರಿತು ಎಲೈ ವ್ಯಾಸಮುನಿಯೇ, ನಿನ್ನನ್ನು ನೋಡಿದರೆ ಬಹಳ ಚಿಂತೆಯಿಂದ ಕೂಡಿರುವ ಹಾಗೆ ಕಾಣುತ್ತದೆ, ಅದಕ್ಕೆ ಕಾರಣವೇನು ಹೇಳು.

॥ ವ್ಯಾಸ ಉವಾಚ ॥

**ಅಪುತ್ರಸ್ಯ ಗತಿರ್ನಾಸ್ತಿ ನ ಸುಖಂ ಮಾನಸೇ ತತಃ ।**
**ತದರ್ಥಂ ದುಃಖಿತಶ್ಚಾಹಂ ಚಿಂತಯಾಮಿ ಪುನಃಪುನಃ ॥೨೮॥**

ಮಕ್ಕಳಿಲ್ಲದವರಿಗೆ ಗತಿಯಿಲ್ಲವು. ಮನಸ್ಸಿಗೆ ಸುಖವೂ ಇಲ್ಲವು. ಆದುದರಿಂದ ಅದಕ್ಕೋಸ್ಕರ ದುಃಖವುಳ್ಳ ನಾನು ಮತ್ತೆ ಮತ್ತೆ ಈ ರೀತಿಯಾಗಿ ಚಿಂತಿಸುತ್ತಿದೇನೆ. ಎಂದು ವ್ಯಾಸಋಷಿಯು ಹೇಳಿದನು.

**ತಪಸಾ ತೋಷಯಾಮ್ಯದ್ಯ ಕಂ ದೇವಂ ವಾಂಛಿತಾರ್ಥದಂ ।**
**ಇತಿ ಚಿಂತಾತುರೋಽಸ್ಮ್ಯದ್ಯ ತ್ವಾಮಹಂ ಶರಣಂ ಗತಃ ॥೨೯॥**

ನನ್ನ ಅಪೇಕ್ಷೆಯನ್ನು ಸಲ್ಲಿಸುವ ಯಾವ ದೇವರನ್ನು ಕುರಿತು ತಪಸ್ಸನ್ನು ಮಾಡಲಿ ಎಂಬ ಆಲೋಚನೆಯಿಂದ ಕೂಡಿರುವ ನಾನು ಈಗ ನಿಮ್ಮನ್ನು ಶರಣು ಹೊಂದಿರುತ್ತೇನೆ.

**ಸರ್ವಜ್ಞೋಽಸಿ ಮಹರ್ಷೇ ತ್ವಂ ಕಥಯಾಶು ಕೃಪಾನಿಧೇ ।**
**ಕಂ ದೇವಂ ಶರಣಂ ಯಾಮಿ ಯೋ ಮೇ ಪುತ್ರಂ ಪ್ರದಾಸ್ಯತಿ ॥೩೦॥**

ಎಲೈ ನಾರದನೇ, ನೀನು ಎಲ್ಲವನ್ನೂ ತಿಳಿದವನೂ, ಮಹರ್ಷಿಯೂ, ದಯಾನಿಧಿಯೂ ಆಗಿರುತ್ತೀಯೆ. ಆದುದರಿಂದ ನಾನು ಯಾವ ದೇವರನ್ನು ಶರಣು ಹೋಗಲಿ, ಯಾವ ದೇವರು ನನಗೆ ಪುತ್ರನನ್ನು ಕೊಟ್ಟಾನು? ಅದನ್ನು ನನಗೆ ಜಾಗ್ರತೆಯಾಗಿ ಹೇಳು.

॥ ಸೂತ ಉವಾಚ ॥

**ಇತಿ ವ್ಯಾಸೇನ ಪೃಷ್ಟಸ್ತು ನಾರದೋ ವೇದವಿನ್ಮುನಿಃ ।**
**ಉವಾಚ ಪರಯಾ ಪ್ರೀತ್ಯಾ ಕೃಷ್ಣಂ ಪ್ರತಿ ಮಹಾಮನಾಃ ॥೩೧॥**

ಸೂತನು ಹೇಳುತ್ತಾನೆ—ಈ ರೀತಿಯಾಗಿ ವ್ಯಾಸನಿಂದ ಕೇಳಲ್ಪಟ್ಟ, ವೇದಗಳನ್ನು ತಿಳಿದಿರುವ ಮನನಶೀಲನಾದ ನಾರದನು ಬಹಳ ಪ್ರೀತಿಯಿಂದ ಉದಾರವಾದ ಮನಸ್ಸುಳ್ಳವನಾಗಿ ಕೃಷ್ಣದ್ವೈಪಾಯನನೆಂಬ ಹೆಸರುಳ್ಳ ವ್ಯಾಸಮುನಿಯನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

|| ನಾರದ ಉವಾಚ ||

**ಪಾರಾಶರ್ಯ ಮಹಾಭಾಗ ಯತ್ತ್ವಂ ಪೃಚ್ಛಸಿ ಮಾಮಿಹ ।**
**ತಮೇವಾರ್ಥಂ ಪುರಾ ಪೃಷ್ಟಃ ಪಿತ್ರಾ ಮೇ ಮಧುಸೂದನಃ ॥೩೨॥**

ನಾರದನು ಪ್ರತ್ಯುತ್ತರವಾಗಿ ಹೇಳುವನು—ಎಲೈ ಪುಣ್ಯಶಾಲಿಯಾದ ವ್ಯಾಸನೇ, ನೀನು ನನ್ನನ್ನು ಯಾವ ಪ್ರಶ್ನೆಯನ್ನು ಕೇಳಿದೆಯೋ ಅದೇ ಪ್ರಶ್ನೆಯನ್ನು ಪೂರ್ವದಲ್ಲಿ ನನ್ನ ತಂದೆಯಾದ ಬ್ರಹ್ಮನು ವಿಷ್ಣುವನ್ನು ಕೇಳಿದ್ದನು.

**ಧ್ಯಾನಸ್ಥಂ ಚ ಹರಿಂ ದೃಷ್ಟ್ವಾ ಪಿತಾ ಮೇ ವಿಸ್ಮಯಂ ಗತಃ ।**
**ಪರ್ಯಪೃಚ್ಛತ ದೇವೇಶಂ ಶ್ರೀನಾಥಂ ಜಗತಃ ಪತಿಂ ॥೩೩॥**

ನನ್ನ ತಂದೆಯು ಧ್ಯಾನಮಾಡುತ್ತಿದ್ದ ವಿಷ್ಣುವನ್ನು ನೋಡಿ ಬಹಳ ಆಶ್ಚರ್ಯಗೊಂಡನು. ಆಗಲೇ ಲಕ್ಷ್ಮೀಪತಿಯೂ, ಲೋಕಕ್ಕೆ ಒಡೆಯನೂ ಆದ ವಿಷ್ಣುವನ್ನು ಈ ರೀತಿಯಲ್ಲಿ ಪ್ರಶ್ನೆಮಾಡಿದನು.

**ಕೌಸ್ತುಭೋದ್ಭಾಸಿತಂ ದಿವ್ಯಂ ಶಂಖಚಕ್ರಗದಾಧರಂ ।**
**ಪೀತಾಂಬರಂ ಚತುರ್ಬಾಹುಂ ಶ್ರೀವತ್ಸಾಂಕಿತವಕ್ಷಸಂ ॥೩೪॥**

**ಕಾರಣಂ ಸರ್ವಲೋಕಾನಾಂ ದೇವದೇವಂ ಜಗದ್ಗುರುಂ ।**
**ವಾಸುದೇವಂ ಜಗನ್ನಾಥಂ ತಪ್ಯಮಾನಂ ಮಹತ್ತಪಃ ॥೩೫॥**

ಕೌಸ್ತುಭಮಣಿಯಿಂದ ಪ್ರಕಾಶಮಾನನಾಗಿಯೂ, ಶ್ರೇಷ್ಠನಾಗಿಯೂ, ಶಂಖ, ಚಕ್ರ, ಗದೆ, ಇವುಗಳನ್ನು ಧರಿಸಿರುವವನಾಗಿಯೂ, ಪೀತಾಂಬರವನ್ನುಟ್ಟವನಾಗಿಯೂ, ನಾಲ್ಕು ತೋಳುಗಳುಳ್ಳವನಾಗಿಯೂ, ಶ್ರೀವತ್ಸವೆಂಬ ಮಚ್ಚೆಯ ಗುರುತಿನಿಂದ ಕೂಡಿದ ಎದೆಯುಳ್ಳವನಾಗಿಯೂ ಇರುವ ಮತ್ತು ಎಲ್ಲ ಲೋಕಗಳಿಗೂ ಕಾರಣನೂ, ದೇವತೆಗಳಿಗೂ ದೇವನೂ, ಜಗತ್ತಿಗೆಲ್ಲಾ ಗುರುವೂ, ವಸುದೇವನ

ಮಗನೂ, ಜಗತ್ತಿಗೆಲ್ಲಾ ಒಡೆಯನೂ ಆದ ಉತ್ತಮವಾದ ತಪಸ್ಸನ್ನು ಮಾಡುತ್ತಿರುವ ವಿಷ್ಣುವನ್ನು ಪ್ರಶ್ನೆ ಮಾಡಿದನು.

|| ಬ್ರಹ್ಮೋವಾಚ ||

**ದೇವದೇವ ಜಗನ್ನಾಥ ಭೂತಭವ್ಯಭವತ್ಪ್ರಭೋ ।**
**ತಪಶ್ಚರಸಿ ಕಸ್ಮಾತ್ತ್ವಂ ಕಿಂ ಧ್ಯಾಯಸಿ ಜನಾರ್ದನ ॥೩೬॥**

ದೇವತೆಗಳಿಗೂ ದೇವನೂ, ಜಗದೊಡೆಯನೂ, ಹಿಂದಿನ ಮುಂದಿನ ಮತ್ತು ಈಗಿನ ವಸ್ತುಗಳ ಕಾರ್ಯಗಳು ಇವೆಲ್ಲಕ್ಕೂ ಒಡೆಯನೂ ಆದ ವಿಷ್ಣುವೇ, ನೀನು ಏತಕ್ಕಾಗಿ ತಪಸ್ಸನ್ನು ಮಾಡುತ್ತಿರುವೆ? ಎಲೈ ಜನಾರ್ದನನೇ ನೀನು ಏನನ್ನು ಧ್ಯಾನಿಸುತ್ತಿರುವೆ?

**ವಿಸ್ಮಯೋಽಯಂ ಮಮಾತ್ಯರ್ಥಂ ತ್ವಂ ಸರ್ವಜಗತಾಂ ಪ್ರಭುಃ ।**
**ಧ್ಯಾನಯುಕ್ತೋಽಸಿ ದೇವೇಶ ಕಿಂಚ ಚಿತ್ರಮತಃ ಪರಂ ॥೩೭॥**

ಎಲೈ ದೇವತೆಗಳ ಒಡೆಯನೇ, ನೀನು ಎಲ್ಲ ಪ್ರಪಂಚಗಳಿಗೂ ಪ್ರಭುವಾಗಿ ರುವೆ. ಇಂತಹ ನೀನೂ ತಪಸ್ಸನ್ನು ಮಾಡುತ್ತಿರುವೆ. ಇದಕ್ಕಿಂತಲೂ ಆಶ್ಚರ್ಯಕರ ವಾದುದು ಮತ್ತೇನಿರುವುದು?

**ತ್ವನ್ನಾಭಿಕಮಲಾಜ್ಜಾತಃ ಕರ್ತಾಹಮಖಿಲಸ್ಯ ಚ ।**
**ತ್ವತ್ತಃ ಕೋಽಪ್ಯಧಿಕೋಽಸ್ತ್ಯತ್ರ ತಂ ದೇವಂ ಬ್ರೂಹಿ ಮಾಪತೇ ॥೩೮॥**

ಎಲೈ ಲಕ್ಷ್ಮೀಕಾಂತನೇ, ನಿನ್ನ ನಾಭಿಕಮಲದಿಂದ ಹುಟ್ಟಿದ ನಾನೇ ಎಲ್ಲ ವನ್ನೂ ಸೃಷ್ಟಿಮಾಡುತ್ತಿದ್ದೇನೆ. ಹೀಗಿರುವಲ್ಲಿ ನಿನಗಿಂತಲೂ ಹೆಚ್ಚಾದ ದೇವರು ಬೇರೆ ಯಾರು ಇದ್ದಾರೆ? ಆ ದೇವರು ಯಾರೆನ್ನುವುದನ್ನು ನನಗೆ ಹೇಳು.

**ಜಾನಾಮ್ಯಹಂ ಜಗನ್ನಾಥ ತ್ವಮಾದಿಃ ಸರ್ವಕಾರಣಂ ।**
**ಕರ್ತಾ ಪಾಲಯಿತಾ ಹರ್ತಾ ಸಮರ್ಥಃ ಸರ್ವಕಾರ್ಯಕೃತ್ ॥೩೯॥**

ಎಲೈ ಜಗದೊಡೆಯನೇ, ನೀನೇ ಎಲ್ಲಕ್ಕಿಂತ ಮೊದಲಿನವನೂ ಮತ್ತು ಎಲ್ಲಕ್ಕೂ ಕಾರಣನೂ, ಸೃಷ್ಟಿಮಾಡುವವನೂ, ಸೃಷ್ಟಿಸಿದ ವಸ್ತುಗಳನ್ನು ಕಾಪಾಡು ವವನೂ, ಅವುಗಳ ಕಾರ್ಯವಾದಮೇಲೆ ಎಲ್ಲವನ್ನೂ ಉಪಸಂಹಾರಮಾಡುವವನೂ,

ಎಲ್ಲ ಕೆಲಸಗಳನ್ನು ನಿರ್ವಹಿಸುವವನೂ, ಇದೆಲ್ಲಕ್ಕೂ ತಕ್ಕ ಶಕ್ತಿಯುಳ್ಳವನೂ ಆಗಿರುವೆ ಎಂಬುದಾಗಿ ನಾನು ತಿಳಿದಿದ್ದೇನೆ.

**ಇಚ್ಛಯಾ ತೇ ಮಹಾರಾಜ ಸೃಜಾಮ್ಯಹಮಿದಂ ಜಗತ್ ।**
**ಹರಃ ಸಂಹರತೇ ಕಾಲೇ ಸೋಽಪಿ ತೇ ವಚನೇ ಸದಾ ॥೪೦॥**

ಮಹಾಪ್ರಭುವೇ, ನಾನು ಈ ಜಗತ್ತನ್ನು ನಿನ್ನ ಇಚ್ಛೆಯಂತೆ ಸೃಷ್ಟಿಮಾಡುತ್ತೇನೆ. ರುದ್ರನು ಪ್ರಳಯಕಾಲದಲ್ಲಿ ಎಲ್ಲವನ್ನೂ ಉಪಸಂಹಾರಮಾಡುವುದೂ ನಿನ್ನ ಮಾತಿನಿಂದಲೇ ಆಗಿದೆ.

**ಸೂರ್ಯೋ ಭ್ರಮತಿ ಚಾಕಾಶೇ ವಾಯುರ್ವಾತಿ ಶುಭಾಶುಭಃ ।**
**ಅಗ್ನಿಸ್ತಪತಿ ಪರ್ಜನ್ಯೋ ವರ್ಷತೀಶ ತ್ವದಾಜ್ಞಯಾ ॥೪೧॥**

ಓ ಪ್ರಭುವೇ, ನಿನ್ನ ಅಪ್ಪಣೆಯಿಂದಲೇ ಸೂರ್ಯನು ಆಕಾಶದಲ್ಲಿ ತಿರುಗುತ್ತಿದ್ದಾನೆ. ಅನುಕೂಲವೂ ಪ್ರತಿಕೂಲವೂ ಆದ ಗಾಳಿಯೂ ನಿನ್ನ ಅಪ್ಪಣೆಯಿಂದಲೇ ಬೀಸುತ್ತದೆ. ನಿನ್ನ ಆಜ್ಞೆಯಂತೆ ಅಗ್ನಿಯು ಉರಿಯುತ್ತದೆ ಮತ್ತು ಪರ್ಜನ್ಯನು ಮಳೆಯನ್ನು ಸುರಿಸುತ್ತಾನೆ.

**ತ್ವಂ ತು ಧ್ಯಾಯಸಿ ಕಂ ದೇವಂ ಸಂಶಯೋಽಯಂ ಮಹಾನ್ಮಮ ।**
**ತ್ವತ್ತಃ ಪರಂ ನ ಪಶ್ಯಾಮಿ ದೇವಂ ವೈ ಭುವನತ್ರಯೇ ॥೪೨॥**

ಈ ಮೂರುಲೋಕಗಳಲ್ಲಿಯೂ ನಿನಗಿಂತಲೂ ಹೆಚ್ಚಾದ ದೇವರನ್ನು ನಾನು ಕಾಣೆನು. ಹೀಗಿದ್ದಾಗ್ಯೂ ನೀನು ಯಾವ ದೇವರನ್ನು ಕುರಿತು ತಪಸ್ಸುಮಾಡುತ್ತಿದ್ದೀಯೆ. ಈ ವಿಷಯದಲ್ಲಿ ನನಗೆ ದೊಡ್ಡ ಸಂಶಯವುಂಟಾಗಿದೆ.

**ಕೃಪಾಂ ಕೃತ್ವಾ ವದಸ್ವಾದ್ಯ ಭಕ್ತೋಽಸ್ಮಿ ತವ ಸುವ್ರತ ।**
**ಮಹತಾಂ ನೈವ ಗೋಪ್ಯಂ ಹಿ ಪ್ರಾಯಃ ಕಿಂಚಿದಿತಿ ಸ್ಮೃತಿಃ ॥೪೩॥**

ಶಾಸ್ತ್ರನಿಯಮಗಳನ್ನು ಪಾಲಿಸುವ ವಿಷ್ಣುವೇ, ನಾನು ನಿನಗೆ ಭಕ್ತನಾಗಿದ್ದೇನೆ. ನನಗೆ ದಯವಿಟ್ಟು ಈ ವಿಚಾರವನ್ನು ಹೇಳು. ಬಹುವಾಗಿ ಮಹಾತ್ಮರಾದವರಿಗೆ ಗುಟ್ಟಾಗಿಡಬೇಕಾದುದು ಯಾವುದೂ ಇರುವುದಿಲ್ಲವೆಂದು ಧರ್ಮಶಾಸ್ತ್ರವು ಹೇಳುತ್ತದೆ.

ತಚ್ಛ್ರುತ್ವಾ ವಚನಂ ತಸ್ಯ ಹರಿರಾಹ ಪ್ರಜಾಪತಿಂ ।
ಶೃಣುಷ್ವೈಕಮನಾ ಬ್ರಹ್ಮಂಸ್ತ್ವಾಂ ಬ್ರವೀಮಿ ಮನೋಗತಂ ॥೪೪॥

ಹೀಗೆ ಹೇಳಿದ ಬ್ರಹ್ಮನ ಆ ಮಾತುಗಳನ್ನು ಕೇಳಿ ವಿಷ್ಣುವು ಅವನನ್ನು ಕುರಿತು ಎಲೈ ಬ್ರಹ್ಮನೇ, ನನ್ನ ಮನಸ್ಸಿನಲ್ಲಿರುವುದನ್ನು ನಿನಗೆ ಹೇಳುತ್ತೇನೆ. ಏಕಾಗ್ರಮನಸ್ಸಿನಿಂದ ಕೇಳುವವನಾಗು.

ಯದ್ಯಪಿ ತ್ವಾಂ ಶಿವಂ ಮಾಂ ಚ ಸ್ಥಿತಿಸೃಷ್ಟ್ಯಂತಕಾರಣಂ ।
ತೇ ಜಾನಂತಿ ಜನಾಸ್ಸರ್ವೇ ಸದೇವಾಸುರಮಾನುಷಾಃ ॥೪೫॥

ದೇವತೆಗಳು, ರಾಕ್ಷಸರು, ಮನುಷ್ಯರು ಮೊದಲಾದ ಸಮಸ್ತಜನರೂ ನಿನ್ನನ್ನೂ ನನ್ನನ್ನೂ ಶಿವನನ್ನೂ ಸೃಷ್ಟಿಸ್ಥಿತಿಸಂಹಾರಗಳಿಗೆ ಕ್ರಮವಾಗಿ ಕಾರಣರೆಂದು ತಿಳಿದಿದ್ದಾರೆ.

ಸ್ರಷ್ಟಾ ತ್ವಂ ಪಾಲಕಶ್ಚಾಹಂ ಹರಃ ಸಂಹಾರಕಾರಕಃ ।
ಕೃತಾಃ ಶಕ್ತ್ಯೇತಿ ಸಂತರ್ಕಾಃ ಕ್ರಿಯತೇ ವೇದಪಾರಗೈಃ ॥೪೬॥

ಆದರೆ ವೇದಗಳನ್ನು ಸಂಪೂರ್ಣವಾಗಿ ತಿಳಿದವರು, ನಾವು ಮೂವರೂ ಸೃಷ್ಟಿ ಸ್ಥಿತಿ ಉಪಸಂಹಾರ ಕರ್ತೃಗಳಾಗಿರುವುದು ಆದಿಶಕ್ತಿಯ ಮಹಿಮೆಯಿಂದ ಎಂದು ಊಹಿಸುತ್ತಾರೆ.

ಜಗತ್ಸಂಜನನೇ ಶಕ್ತಿಃ ತ್ವಯಿ ತಿಷ್ಠತಿ ರಾಜಸೀ ।
ಸಾತ್ತ್ವಿಕೀ ಮಯಿ ರುದ್ರೇ ಚ ತಾಮಸೀ ಪರಿಕೀರ್ತಿತಾ ॥೪೭॥

ಎಲೈ ಬ್ರಹ್ಮನೇ, ನಿನ್ನಲ್ಲಿ ಜಗತ್ತನ್ನು ಸೃಷ್ಟಿಮಾಡಲು ಬೇಕಾದ ರಜೋ ಗುಣವೇ ಹೆಚ್ಚಾಗಿರುವ ಶಕ್ತಿಯು ಇದೆ. ನನ್ನಲ್ಲಿ ಸತ್ತ್ವಗುಣವೇ ಪ್ರಧಾನವಾದ ಶಕ್ತಿಯು ಪಾಲನಮಾಡುವಾಗ ಇರುತ್ತದೆ. ತಮೋಗುಣಪ್ರಧಾನವಾದ ಶಕ್ತಿಯು ಈ ಜಗತ್ತನ್ನು ಉಪಸಂಹಾರಮಾಡುವಾಗ ರುದ್ರನಲ್ಲಿ ತೋರುತ್ತದೆ.

ತಯಾ ವಿರಹಿತಸ್ತ್ವಂ ನ ತತ್ಕರ್ಮಕರಣೇ ಪ್ರಭುಃ ।
ನಾಹಂ ಪಾಲಯಿತುಂ ಶಕ್ತಃ ಸಂಹರ್ತುಂ ನಾಪಿ ಶಂಕರಃ ॥೪೮॥

ರಜೋಗುಣವೇ ಪ್ರಧಾನವಾದ ಶಕ್ತಿಯು ನಿನ್ನಲ್ಲಿ ಇಲ್ಲದೆ ನೀನು ಸೃಷ್ಟಿ ಕಾರ್ಯವನ್ನು ಮಾಡಲಾರೆ. ನಾನು ಸತ್ತ್ವಗುಣಪ್ರಧಾನವಾದ ಶಕ್ತಿಯಿಲ್ಲದೇ

ಇದ್ದರೆ ಪಾಲನೆಯನ್ನು ಮಾಡಲಾರೆನು. ರುದ್ರನು ತಮೋಗುಣವು ಮುಂದಾದ ಶಕ್ತಿಯನ್ನು ಬಿಟ್ಟು ಉಪಸಂಹಾರಕಾರ್ಯವನ್ನು ಮಾಡಲಾರನು.

**ತದಧೀನಾ ವಯಂ ಸರ್ವೇ ವರ್ತಾಮಃ ಸತತಂ ವಿಭೋ ।**
**ಪ್ರತ್ಯಕ್ಷೇ ಚ ಪರೋಕ್ಷೇ ಚ ದೃಷ್ಟಾಂತಂ ಶೃಣು ಸುವ್ರತ ॥೪೯॥**

ಎಲೈ ಸರ್ವವ್ಯಾಪಿಯಾದ ಬ್ರಹ್ಮನೇ, ನಾವು ಯಾವಾಗಲೂ ಆ ಶಕ್ತಿಯ ಅಧೀನರಾಗಿದ್ದೇವೆ. ಈ ವಿಷಯದಲ್ಲಿ ಪ್ರತ್ಯಕ್ಷವಾದ ಮತ್ತು ಪರೋಕ್ಷವಾದ ದೃಷ್ಟಾಂತಗಳನ್ನು ಹೇಳುತ್ತೇನೆ ಕೇಳು.

**ಶೇಷೇ ಸ್ವಪಿಮಿ ಪರ್ಯಂಕೇ ಪರತಂತ್ರೋ ನ ಸಂಶಯಃ ।**
**ತದಧೀನಃ ಸದೋತ್ತಿಷ್ಠೇ ಕಾಲೇ ಕಾಲವಶಂಗತಃ ॥೫೦॥**

ನಾನು ಪ್ರಲಯಕಾಲದಲ್ಲಿ ಆದಿಶೇಷನೆಂಬ ಮಂಚದ ಮೇಲೆ ಪರಾಧೀನನಾಗಿ ಮಲಗುತ್ತೇನೆ. ಅದರಂತೆ ಸೃಷ್ಟಿಯ ಪ್ರಾರಂಭದಲ್ಲಿ ಎಚ್ಚರಗೊಳ್ಳುತ್ತೇನೆ. ಹೀಗೆ ಮಲಗುವುದು, ಏಳುವುದು ಆಯಾ ಕಾಲಗಳಲ್ಲಿ ಹೊರಹೊಮ್ಮುವ ಶಕ್ತಿಯ ಅಧೀನವಾಗಿವೆ. ಆದ್ದರಿಂದ ನಾನೂ ಕಾಲಕ್ಕೆ ಪರತಂತ್ರನಾಗಿದ್ದೇನೆ. ಇದರಲ್ಲಿ ಸಂದೇಹವಿಲ್ಲವು. ಇಲ್ಲಿ ಮಹಾಪ್ರಲಯಕಾಲದಲ್ಲಿ ಬ್ರಹ್ಮನು ಬೇರೆ ಇದ್ದು ಈ ರೀತಿಯಾದ ವಿಷ್ಣುವಿನ ಮಲಗುವಿಕೆಯನ್ನು ನೋಡುವುದಿಲ್ಲ. ಆದುದರಿಂದ ಇದು ಪರೋಕ್ಷದೃಷ್ಟಾಂತವು.

**ತಪಶ್ಚರಾಮಿ ಸತತಂ ತದಧೀನೋಽಸ್ಮ್ಯಹಂ ಸದಾ ।**
**ಕದಾಚಿತ್ಸಹ ಲಕ್ಷ್ಮ್ಯಾ ಚ ವಿಹರಾಮಿ ಯಥಾಸುಖಂ ॥೫೧॥**

ನಾನು ಆ ಶಕ್ತಿಗೆ ಅಧೀನನಾಗಿ ಯಾವಾಗಲೂ ತಪಸ್ಸನ್ನು ಮಾಡುತ್ತಿರುತ್ತೇನೆ. ಕೆಲವುವೇಳೆ ಲಕ್ಷ್ಮಿಯೊಡನೆ ಸುಖವಾಗಿ ವಿಹಾರಮಾಡುತ್ತಿರುತ್ತೇನೆ.

**ಕದಾಚಿದ್ದಾನವೈಃ ಸಾರ್ಧಂ ಸಂಗ್ರಾಮಂ ಪ್ರಕರೋಮ್ಯಹಂ ।**
**ದಾರುಣಂ ದೇಹದಮನಂ ಸರ್ವಲೋಕಭಯಂಕರಂ ॥೫೨॥**

ನಾನು ಆ ಶಕ್ತಿಗೆ ಅಧೀನನಾಗಿಯೇ ಒಂದೊಂದು ವೇಳೆ ರಾಕ್ಷಸರನ್ನು ಎದುರಿಸಿ ಶರೀರವನ್ನು ಆಯಾಸಗೊಳಿಸುವ ಎಲ್ಲ ಲೋಕಗಳಿಗೂ ಭಯವನ್ನುಂಟುಮಾಡುವ ಮತ್ತು ಘೋರವಾದ ಯುದ್ಧವನ್ನು ಮಾಡುತ್ತೇನೆ.

**ಪ್ರತ್ಯಕ್ಷಂ ತವ ಧರ್ಮಜ್ಞ ತಸ್ಮಿನ್ನೇಕಾರ್ಣವೇ ಪುರಾ ।**
**ಪಂಚವರ್ಷಸಹಸ್ರಾಣಿ ಬಾಹುಯುದ್ಧಂ ಮಯಾ ಕೃತಂ ॥೫೩॥**

ಧರ್ಮಗಳನ್ನು ತಿಳಿದಿರುವ ಬ್ರಹ್ಮನೇ, ಪೂರ್ವದಲ್ಲಿ ನಾನು ಈ ಜಗತ್ತೆಲ್ಲವೂ ಒಂದೇ ಸಮುದ್ರವಾಗಿ ಅಂತರಾಳಿಕವಾದ ಆ ಜಲಪ್ರಳಯಕಾಲದಲ್ಲಿ ಐದುಸಾವಿರವರ್ಷಗಳವರೆಗೆ ಬಾಹುಯುದ್ಧವನ್ನು ಮಾಡಿದುದನ್ನು ನೀನು ಪ್ರತ್ಯಕ್ಷವಾಗಿ ನೋಡಿದ್ದೀಯೆ.

**ತೌ ಕರ್ಣಮಲಜೌ ದುಷ್ಟೌ ದಾನವೌ ಮದಗರ್ವಿತೌ ।**
**ದೇವದೇವ್ಯಾಃ ಪ್ರಸಾದೇನ ನಿಹತೌ ಮಧುಕೈಟಭೌ ॥೫೪॥**

ಎಲೈ ಬ್ರಹ್ಮನೇ, ಆಗ ಕಿವಿಯ ಕೊಳೆಯಿಂದ ಹುಟ್ಟಿದ ಮಧು, ಕೈಟಭ ಎಂಬ ರಾಕ್ಷಸರೊಡನೆ ನಾನು ಅನೇಕವರ್ಷಗಳವರೆಗೆ ಬಾಹುಯುದ್ಧವನ್ನು ಮಾಡಿ ಅನಂತರದಲ್ಲಿ ಅವರನ್ನು ಎಲ್ಲ ದೇವತೆಗಳಿಗೂ ಒಡತಿಯಾದ ಆ ದೇವಿಯ ಅನುಗ್ರಹದಿಂದ ಸಂಹಾರಮಾಡಿದೆನು. ಈ ವಿಚಾರವನ್ನು ನೀನು ಪ್ರತ್ಯಕ್ಷವಾಗಿ ನೋಡಿದ್ದೀಯೆ.

**ತದಾ ತ್ವಯಾ ನ ಕಿಂ ಜ್ಞಾತಂ ಕಾರಣಂ ತು ಪರಾತ್ಪರಂ ।**
**ಶಕ್ತಿರೂಪಂ ಮಹಾಭಾಗ ಕಿಂ ಪೃಚ್ಛಸಿ ಪುನಃ ಪುನಃ ॥೫೫॥**

ಮೊದಲು ನಾನು ಮಧುಕೈಟಭರೊಡನೆ ಯುದ್ಧಮಾಡುತ್ತಿದ್ದಾಗ ನನ್ನ ಬಲವು ಕಡಮೆಯಾದ ಸಮಯದಲ್ಲಿ ಮಧುಕೈಟಭರಿಗೆ ವ್ಯಾಮೋಹವನ್ನುಂಟುಮಾಡಿ ನನ್ನಲ್ಲಿ ಬಲವನ್ನು ಕೊಟ್ಟು ಮಧುಕೈಟಭರ ನಾಶಕ್ಕೂ, ಸಕಲಜಗತ್ತಿಗೂ ಕಾರಣವಾದ ಆ ಶಕ್ತಿಯ ಮಹಿಮೆಯನ್ನು ನೀನು ನೋಡಲಿಲ್ಲವೇ? ಹೀಗಿದ್ದಾಗ್ಯೂ ಮತ್ತೆಮತ್ತೆ ನನ್ನನ್ನು ಏಕೆ ಕೇಳುತ್ತೀಯೆ?

**ಯದೀಚ್ಛಾ ಪುರುಷೋ ಭೂತ್ವಾ ವಿಚರಾಮಿ ಮಹಾರ್ಣವೇ ।**
**ಕಚ್ಛಪಃ ಕೋಲಸಿಂಹಶ್ಚ ವಾಮನಶ್ಚ ಯುಗೇ ಯುಗೇ ॥೫೬॥**

ಆ ಆದಿಶಕ್ತಿಯ ಇಚ್ಛೆಯುಂಟಾದರೆ ಮಣಿದ್ವೀಪದಲ್ಲಿ ಸ್ತ್ರೀರೂಪದಿಂದಿದ್ದ ನಾನು ಪುನಃ ಪುರುಷನಾಗಿ ಮಹಾಸಾಗರದ ನೀರಿನಲ್ಲಿ ಮತ್ಸ್ಯಾವತಾರವನ್ನು ಪಡೆದು ಸಂಚಾರಮಾಡುತ್ತೇನೆ. ಅನಂತರ ಆಮೆಯ ರೂಪವುಳ್ಳವನಾಗುತ್ತೇನೆ. ಆಮೇಲೆ ವರಾಹರೂಪವನ್ನು ತಾಳುತ್ತೇನೆ. ಅನಂತರದಲ್ಲಿ ವಾಮನನಾಗುತ್ತೇನೆ. ಈರೀತಿ

ಯಾಗಿ ಪ್ರತಿಯುಗದಲ್ಲಿಯೂ ಒಂದೊಂದು ರೂಪವುಳ್ಳವನಾಗುತ್ತಾ ಆಯಾ ಕಾರ್ಯ ಗಳನ್ನು ನಿರ್ವಹಿಸುತ್ತೇನೆ.

**ನ ಕಸ್ಯಾಪಿ ಪ್ರಿಯೋ ಲೋಕೇ ತಿರ್ಯಗ್ಯೋನಿಷು ಸಂಭವಃ ।**
**ನಾಭವಂ ಸ್ವೇಚ್ಛಯಾ ವಾಮೋ ವರಾಹಾದಿಷು ಯೋನಿಷು ॥೩೭॥**

ಲೋಕದಲ್ಲಿ ಯಾರಿಗೂ ತಿರ್ಯಕ್ಪ್ರಾಣಿಗಳ ಜನ್ಮದಲ್ಲಿ ಹುಟ್ಟುವಿಕೆಯು ಇಷ್ಟವಾಗುವುದಿಲ್ಲ. ಹೀಗಿದ್ದಾಗ್ಯೂ ನಾನು ವರಾಹವೇ ಮೊದಲಾದ ಪ್ರಾಣಿಗಳ ವಿಕಾರಗಳಾದ ದೇಹಗಳಲ್ಲಿ ನನ್ನ ಇಚ್ಛೆಯಿಂದಲೇ ನಾನು ಹುಟ್ಟುವುದಿಲ್ಲವು.

**ವಿಹಾಯ ಲಕ್ಷ್ಮ್ಯಾ ಸಹ ಸಂವಿಹಾರಂ**
**ಕೋ ಯಾತಿ ಮತ್ಸ್ಯಾದಿಷು ಹೀನಯೋನಿಷು ।**
**ಶಯ್ಯಾಂ ಚ ಮುಕ್ತ್ವಾ ಗರುಡಾಸನಸ್ಥಃ**
**ಕರೋತಿ ಯುದ್ಧಂ ವಿಪುಲಂ ಸ್ವತಂತ್ರಃ ॥೩೮॥**

ಲೋಕದಲ್ಲಿ ಸ್ವತಂತ್ರನಾದ ಯಾವ ಪುರುಷನು ತಾನೆ ಎಲ್ಲ ಸುಖಸಾಮಗ್ರಿ ಗಳನ್ನೂ ಬಿಟ್ಟು ಕಷ್ಟಪಡುತ್ತಾನೆ ? ನಾನಾದರೋ ಪರಾಧೀನನಾಗಿ ಎಲ್ಲಾ ಕೆಲಸ ಗಳನ್ನೂ ಮಾಡಬೇಕಾಗಿದೆ. ನಾನು ಸ್ವತಂತ್ರನಾಗಿದ್ದಪಕ್ಷದಲ್ಲಿ ಲಕ್ಷ್ಮಿಯ ಜೊತೆ ಯಲ್ಲಿ ವಿಹಾರಮಾಡುವುದನ್ನು ಬಿಟ್ಟು ಮತ್ಸ್ಯಾದಿಕೀಳುಜಾತಿಯ ದೇಹಗಳಲ್ಲಿ ಹುಟ್ಟುತ್ತಿದ್ದೆನೇ ? ಸುಖವಾದ ಹಾಸಿಗೆಯನ್ನು ಬಿಟ್ಟು ಗರುಡನ ಮೇಲೆ ಹತ್ತಿ ಘೋರವಾದ, ಬಹುಕಾಲದವರೆಗೆ ಹೆಚ್ಚಿದ ಯುದ್ಧವನ್ನು ಮಾಡುತ್ತಿದ್ದೆನೇ ? ಆದುದರಿಂದ ನಾನು ಸ್ವತಂತ್ರನಲ್ಲವು. ಆ ಶಕ್ತಿಗೆ ಅಧೀನನು.

**ಪುರಾ ಪುರಸ್ತೇಽಜಶಿರೋ ಮದೀಯಂ**
**ಗತಂ ಧನುರ್ಜ್ಯಾಸ್ಖಲನಾತ್ಕ್ವಚಾಪಿ ।**
**ತ್ವಯಾ ತದಾ ವಾಜಿಶಿರೋ ಗೃಹೀತ್ವಾ**
**ಸಂಯೋಜಿತಂ ಶಿಲ್ಪಿವರೇಣ ಭೂಯಃ ॥೩೯॥**

ಓ ಬ್ರಹ್ಮನೇ, ಪೂರ್ವಕಾಲದಲ್ಲಿ ನಿನ್ನ ಎದುರಿಗೇ ನಾನು ಧನುಸ್ಸಿನ ಹೆಡೆಯ ಹಗ್ಗವನ್ನು ಎಳೆದು ಕಟ್ಟುತ್ತಿದ್ದಾಗ ಕೈಜಾರಿ ಅದು ಮಿಡಿದು ನನ್ನ ತಲೆಯು ಎಲ್ಲಿಯೋ

ಕಾಣವೆ ಹಾರಿಯೋಯಿತು. ಆಗ ನೀನು ಚತುರನಾದ ಶಿಲ್ಪಿಯಾದುದರಿಂದ ಕುದುರೆಯ ತಲೆಯನ್ನು ತಂದು ಕುತ್ತಿಗೆಯ ಮೇಲೆ ಪುನಃ ಸೇರಿಸಿದೆ.

**ಹಯಾನನೋಽಹಂ ಪರಿಕೀರ್ತಿತಶ್ಚ**
**ಪ್ರತ್ಯಕ್ಷಮೇತತ್ತವ ಲೋಕಕರ್ತಃ ।**
**ವಿಡಂಬನೇಯಂ ಕಿಲ ಲೋಕಮಧ್ಯೇ**
**ಕಥಂ ಭವೇದಾತ್ಮಪರೋ ಯದಿ ಸ್ಯಾಂ ॥೬೦॥**

ಆಗಿನಿಂದ ನಾನು ಕುದುರೆಯ ತಲೆಯಿಂದ ಕೂಡಿ ಹಯಾನನ ಅಥವಾ ಹಯಗ್ರೀವನೆನಿಸಿಕೊಂಡೆನು. ಈ ವಿಚಾರವನ್ನು ನೀನು ಪ್ರತ್ಯಕ್ಷವಾಗಿ ನೋಡಿ ತಿಳಿದಿದ್ದೀಯೆ. ಈ ರೀತಿಯಾಗಿ ನಡೆದುದು ಈ ಲೋಕದಲ್ಲಿ ಪರಾಧೀನತೆಯ ಗುರುತಲ್ಲವೇ ? ಹಾಗಲ್ಲದೆ ನಾನು ಸ್ವತಂತ್ರನಾಗಿದ್ದಲ್ಲಿ ಇಂತಹ ನಡೆವಳಿಕೆಯು ಹೇಗೆ ಸಂಭವಿಸೀತು ? ಆದುದರಿಂದ ನಾನು ಸ್ವತಂತ್ರನಲ್ಲವು.

**ತಸ್ಮಾನ್ನಾಹಂ ಸ್ವತಂತ್ರೋಽಸ್ಮಿ ಶಕ್ತ್ಯಧೀನೋಽಸ್ಮಿ ಸರ್ವಥಾ ।**
**ತಾಮೇವ ಶಕ್ತಿಂ ಸತತಂ ಧ್ಯಾಯಾಮಿ ಚ ನಿರಂತರಂ ॥೬೧॥**

ಆದುದರಿಂದ ಎಲೈ ಬ್ರಹ್ಮನೇ, ನಾನು ಸ್ವತಂತ್ರನಾಗಿರವೆ ಎಲ್ಲದರಲ್ಲೂ ಆ ಆದಿ ಶಕ್ತಿಯ ಅಧೀನನಾಗಿದ್ದೇನೆ. ಅಂಥ ಶಕ್ತಿಯನ್ನು ನಾನು ಯಾವಾಗಲೂ ಧ್ಯಾನ ಮಾಡುತ್ತಿರುತ್ತೇನೆ.

**ನಾತಃ ಪರತರಂ ಕಿಂಚಿಜ್ಜಾನಾಮಿ ಕಮಲೋದ್ಭವ ।**

ಎಲೈ ಬ್ರಹ್ಮನೇ ಆ ಶಕ್ತಿಗಿಂತಲೂ ಹೆಚ್ಚಿನದಾದ ಬೇರೆ ಯಾವುದೊಂದು ವಸ್ತುವನ್ನೂ ನಾನು ಕಾಣೆನು.

॥ ನಾರದ ಉವಾಚ ॥

**ಇತ್ಯುಕ್ತಂ ವಿಷ್ಣುನಾ ತೇನ ಪದ್ಮಯೋನೇಸ್ತು ಸನ್ನಿಧೌ ॥೬೨॥**

ನಾರದನು ಹೇಳುತ್ತಾನೆ—ಎಲೈ ವ್ಯಾಸನೇ, ಈ ರೀತಿಯಾಗಿ ವಿಷ್ಣುವು ಬ್ರಹ್ಮನ ಸಮೀಪದಲ್ಲಿ ಹೇಳಿದನು,

**ತೇನ ಚಾಪ್ಯಹಮುಕ್ತೋಽಸ್ಮಿ ತಥೈವ ಮುನಿಪುಂಗವ ।**
**ತಸ್ಮಾತ್ತ್ವಮಪಿ ಕಲ್ಯಾಣ ಪುರುಷಾರ್ಥಾಪ್ತಿಹೇತವೇ ॥೬೩॥**

ಓ ಶ್ರೇಷ್ಠನಾದ ಮುನಿಯೇ, ಆ ಬ್ರಹ್ಮನು ನನಗೂ ಹೀಗೆ ಹೇಳಿದನು. ಆದುದರಿಂದ ಎಲೈ ಮಂಗಳಕರನೇ, ನೀನೂ ಕೂಡ ಒಳ್ಳೆಯ ಪುರುಷಾರ್ಥವನ್ನು ಹೊಂದಬೇಕಾದರೆ ಆ ದೇವಿಯನ್ನು ಪೂಜಿಸು.

**ಅಸಂಶಯಂ ಹೃದಂಭೋಜೇ ಭಜ ದೇವೀಪದಾಂಬುಜಂ ।**
**ಸರ್ವಂ ದಾಸ್ಯತಿ ಸಾ ದೇವೀ ಯದ್ಯದಿಷ್ಟಂ ಭವೇತ್ತವ ॥೬೪॥**

ನೀನೂ ಕೂಡ ಸಂದೇಹಪಡದೆ ಬೊಗ್ಗಿದ ಕಮಲದಂತಿರುವ ನಿನ್ನ ಹೃದಯದಲ್ಲಿ ಆ ದೇವಿಯ ಪಾದಕಮಲಗಳನ್ನು ಧ್ಯಾನಮಾಡು. ಅದರಿಂದ ಸಂತುಷ್ಟಳಾದ ದೇವಿಯು ನಿನಗೆ ಯಾವಯಾವುದು ಇಷ್ಟವೋ ಅದೆಲ್ಲವನ್ನೂ ಕರುಣಿಸುವಳು ಎಂಬುದಾಗಿ ನಾರದಮುನಿಯು ವ್ಯಾಸನಿಗೆ ಹೇಳಿದನು.

॥ ಸೂತ ಉವಾಚ ॥

**ನಾರದೇನೈವಮುಕ್ತಸ್ತು ವ್ಯಾಸಃ ಸತ್ಯವತೀಸುತಃ ।**
**ದೇವೀಪಾದಾಬ್ಜನಿಷ್ಣಾತಸ್ತಪಸೇ ಪ್ರಯಯೌ ಗಿರೌ ॥೬೫॥**

ಸೂತನು ಹೇಳುತ್ತಾನೆ—ಓ ಋಷಿಗಳಿರಾ, ಈ ರೀತಿಯಾಗಿ ನಾರದನು ಹೇಳಿದ ಅನಂತರದಲ್ಲಿ ವ್ಯಾಸಋಷಿಯು ದೇವಿಯ ಪಾದಾರವಿಂದಗಳಲ್ಲಿ ಭಕ್ತಿಯುಳ್ಳವನಾಗಿ ಆ ಪರ್ವತದಲ್ಲಿ ತಪಸ್ಸನ್ನು ಮಾಡುವುದಕ್ಕಾಗಿ ಹೊರಟುಹೋದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಚತುರ್ಥೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

|| ಪಂಚಮೋಽಧ್ಯಾಯಃ ||

### ಐದನೆಯ ಅಧ್ಯಾಯವು

|| ಋಷಯ ಊಚುಃ ||

**ಸೂತಾಸ್ಮಾಕಂ ಮನಃ ಕಾಮಂ ಮಗ್ನಂ ಸಂಶಯಸಾಗರೇ ।**
**ಯಥೋಕ್ತಂ ಮಹದಾಶ್ಚರ್ಯಂ ಜಗದ್ವಿಸ್ಮಯಕಾರಕಂ ॥೧॥**

**ಯನ್ಮೂರ್ಧಾ ಮಾಧವಸ್ಯಾಪಿ ಗತೋ ದೇಹಾತ್ಪುನಃ ಪರಂ ।**
**ಹಯಗ್ರೀವಸ್ತತೋ ಜಾತಃ ಸರ್ವಕರ್ತಾ ಜನಾರ್ದನಃ ॥೨॥**

ಋಷಿಗಳು ಹೇಳುತ್ತಾರೆ—ಎಲೈ ಸೂತನೇ, ನಮ್ಮ ಮನಸ್ಸು ಬಹಳವಾಗಿ ಸಂದೇಹವೆಂಬ ಸಮುದ್ರದಲ್ಲಿ ಮುಳುಗಿದೆ. ನೀವು ಹೇಳಿದ ವಿಚಾರವು ಜಗತ್ತಿಗೆ ಆಶ್ಚರ್ಯವನ್ನುಂಟುಮಾಡುವುದಾಗಿದೆ. ಅದು ಯಾವುದೆಂದರೆ, ವಿಷ್ಣುವಿನ ತಲೆಯೂ ಕೂಡ ಶರೀರವನ್ನು ಬಿಟ್ಟು ಬೇರೆ ಹೋಗಿ, ಸರ್ವಕರ್ತನಾದ ವಿಷ್ಣುವೂ ಕುದುರೆಯ ತಲೆಯುಳ್ಳವನಾದನು, ಎಂಬುದು.

**ವೇದೋಽಪಿ ಸ್ತೌತಿ ಯಂ ದೇವಂ ದೇವಾಃ ಸರ್ವೇ ಯದಾಶ್ರಯಾಃ ।**
**ಆದಿದೇವೋ ಜಗನ್ನಾಥಃ ಸರ್ವಕಾರಣಕಾರಣಃ ॥೩॥**

**ತಸ್ಯಾಪಿ ವದನಂ ಛಿನ್ನಂ ದೈವಯೋಗಾತ್ಕಥಂ ತದಾ ।**
**ತತ್ಸರ್ವಂ ಕಥಯಾಶು ತ್ವಂ ವಿಸ್ತರೇಣ ಮಹಾಮತೇ ॥೪॥**

ಯಾವ ದೇವನನ್ನು ವೇದಗಳು ಸ್ತೋತ್ರಮಾಡುತ್ತಿವೆಯೋ, ಎಲ್ಲ ದೇವತೆಗಳೂ ಯಾರ ಆಶ್ರಯದಿಂದ ಬದುಕುತ್ತಿದ್ದಾರೆಯೋ, ಯಾವನು ಎಲ್ಲಕ್ಕೂ ಮೊದಲನೆಯವನಾಗಿ ಜಗತ್ತಿಗೆಲ್ಲಾ ಒಡೆಯನಾಗಿ, ಕಾರಣವಾದ ವಸ್ತುಗಳಿಗೂ ಕಾರಣನಾಗಿ

ದ್ದಾನೆಯೋ, ಅಂಥ ವಿಷ್ಣುವಿನ ತಲೆಯೂ ಕೂಡ ದೈವಯೋಗದಿಂದ ಹೇಗೆ ಕತ್ತರಿಸಿ ಹೋಯಿತು ? ಅಂಥ ಕಥೆಯನ್ನು ಎಲೈ ತುಂಬ ತಿಳಿವಳಿಕೆಯುಳ್ಳ ಸೂತನೇ, ನಮಗೆ ವಿಸ್ತಾರವಾಗಿ ಎಲ್ಲವನ್ನೂ ಹೇಳಬೇಕು ಎಂದು ಕೇಳಿದರು.

|| ಸೂತ ಉವಾಚ ||

**ಶೃಣ್ವಂತು ಋಷಯಸ್ಸರ್ವೇ ಸಾವಧಾನಾಸ್ಸಮಂತತಃ ।**
**ಚರಿತಂ ದೇವದೇವಸ್ಯ ವಿಷ್ಣೋಃ ಪರಮತೇಜಸಃ ॥೫॥**

ಸೂತನು ಹೇಳಿದನು—ಎಲೈ ಋಷಿಗಳಿರಾ, ಎಲ್ಲಾ ಭಾಗದಲ್ಲೂ ಸ್ಥಿರವಾದ ಮನಸ್ಸುಳ್ಳವರಾಗಿ, ಹೆಚ್ಚಾದ ತೇಜಸ್ಸುಳ್ಳ ದೇವದೇವನಾದ ಆ ವಿಷ್ಣುವಿನ ಚರಿತ್ರೆಯನ್ನು ಕೇಳಿರಿ.

**ಕದಾಚಿದ್ದಾರುಣಂ ಯುದ್ಧಂ ಕೃತ್ವಾ ದೇವಃ ಸನಾತನಃ ।**
**ದಶವರ್ಷಸಹಸ್ರಾಣಿ ಪರಿಶ್ರಾಂತೋ ಜನಾರ್ದನಃ ॥೬॥**

ಯಾವಾಗಲೂ ಮೂರು ಕಾಲಗಳಲ್ಲೂ ಇರುವವನಾದ, ದೇವನಾದ, ಜ್ಞಾನ ಜ್ಯೋತಿಸ್ವರೂಪನಾದ, ಆ ವಿಷ್ಣುವು ಒಂದಾನೊಂದು ಸಮಯದಲ್ಲಿ ಹತ್ತುಸಾವಿರ ವರ್ಷಗಳು ರಾಕ್ಷಸರ ಮೇಲೆ ಘೋರವಾದ ಯುದ್ಧವನ್ನು ಮಾಡಿ ಬಳಲಿದನು.

**ಸಮೇ ದೇಶೇ ಶುಭೇ ಸ್ಥಾನೇ ಕೃತ್ವಾ ಪದ್ಮಾಸನಂ ವಿಭುಃ ।**
**ಅವಲಂಬ್ಯ ಧನುಸ್ಸಜ್ಯಂ ಕಂಠದೇಶೇ ಧರಾಸ್ಥಿತಂ ॥೭॥**

ಆಗ ವಿಷ್ಣುವು ಹಳ್ಳದಿಣ್ಣೆಗಳಿಲ್ಲದೆ ಸಮನಾಗಿಯೂ, ಪರಿಶುದ್ಧವಾಗಿಯೂ ಇರುವ ಸ್ಥಳದಲ್ಲಿ ಹೆದೆಯೇರಿಸಿ ಕಟ್ಟಿದ್ದ ಧನುಸ್ಸನ್ನು ತನ್ನ ಕುತ್ತಿಗೆಗೆ ಒರಗಿಸಿಕೊಂಡು ಪದ್ಮಾಸನ ಹಾಕಿಕೊಂಡು ಕುಳಿತುಕೊಂಡನು.

**ದತ್ವಾ ಭಾರಂ ಧನುಷ್ಕೋಟ್ಯಾಂ ನಿದ್ರಾಮಾಪ ರಮಾಪತಿಃ ।**
**ಶ್ರಾಂತತ್ವಾದ್ದೈವಯೋಗಾಚ್ಚ ಜಾತಸ್ತತ್ರಾತಿನಿದ್ರಿತಃ ॥೮॥**

ಆಗ ತನ್ನ ಶರೀರದ ಭಾರವನ್ನೆಲ್ಲಾ ಧನುಸ್ಸಿನ ಮೇಲಿಟ್ಟು ನಿದ್ದೆಹೋದನು. ಬಹಳ ಬಳಲಿದ್ದುದರಿಂದಲೂ, ದೈವಯೋಗದಿಂದಲೂ ಅವನಿಗೆ ಗಾಢವಾದ ನಿದ್ರೆಯು ಬಂದಿತು.

ತದಾ ಕಾಲೇನ ಕಿಯತಾ ದೇವಾಃ ಸರ್ವೇ ಸವಾಸವಾಃ ।
ಬ್ರಹ್ಮೇಶಸಹಿತಾಃ ಸರ್ವೇ ಯಜ್ಞಂ ಕರ್ತುಂ ಸಮುದ್ಯತಾಃ ॥೯॥

ಆ ಸಮಯದಲ್ಲಿ ಸ್ವಲ್ಪಕಾಲ ಕಳೆದ ಮೇಲೆ, ಬ್ರಹ್ಮನಿಂದಲೂ, ಈಶ್ವರ ನಿಂದಲೂ, ಇಂದ್ರನಿಂದಲೂ ಕೂಡಿದವರಾಗಿ ದೇವತೆಗಳೆಲ್ಲರೂ ಒಂದು ವಿಶೇಷಯಾಗ ವನ್ನು ಮಾಡಲುಪಕ್ರಮಿಸಿದರು.

ಗತಾಃ ಸರ್ವೇಽಥ ವೈಕುಂಠಂ ದ್ರಷ್ಟುಂ ದೇವಂ ಜನಾರ್ದನಂ ।
ದೇವಕಾರ್ಯಾರ್ಥಸಿದ್ಧ್ಯರ್ಥಂ ಮಖಾನಾಮಧಿಪಂ ಪ್ರಭುಂ ॥೧೦॥

ಆಗ ದೇವತೆಗಳ ಕಾರ್ಯದ ಫಲಸಿದ್ಧಿಗಾಗಿ ಯಜ್ಞಗಳಿಗೆಲ್ಲಾ ಯಜಮಾನನಾದ, ದುಷ್ಟರನ್ನು ನಿಗ್ರಹಿಸುವ, ತೇಜಸ್ವಿಯೂ, ದಕ್ಷನೂ ಆದ ವಿಷ್ಣುವನ್ನು ನೋಡಲು ಎಲ್ಲರೂ ವೈಕುಂಠಕ್ಕೆ ಹೋದರು.

ಅದೃಷ್ಟ್ವಾ ತಂ ತದಾ ತತ್ರ ಜ್ಞಾನದೃಷ್ಟ್ಯಾ ವಿಲೋಕ್ಯ ತೇ ।
ಯತ್ರಾಸ್ತೇ ಭಗವಾನ್ವಿಷ್ಣುರ್ಜಗ್ಮುಸ್ತತ್ರ ತದಾ ಸುರಾಃ ॥೧೧॥

ಅಲ್ಲಿ ವಿಷ್ಣುವಿಲ್ಲದಿರಲು ಜ್ಞಾನದೃಷ್ಟಿಯಿಂದ ವಿಷ್ಣುವು ಇರುವ ಸ್ಥಳವನ್ನು ತಿಳಿದು ಆ ದೇವತೆಗಳೆಲ್ಲರೂ ಅಲ್ಲಿಗೆ ಹೋದರು.

ದದೃಶುಸ್ತೇ ತದೇಶಾನಂ ಯೋಗನಿದ್ರಾವಶಂ ಗತಂ ।
ವಿಚೇತನಂ ವಿಭುಂ ವಿಷ್ಣುಂ ತತ್ರಾಽಽಸಾಂಚಕ್ರಿರೇ ಸುರಾಃ ॥೧೨॥

ಎಲ್ಲಕ್ಕೂ ಒಡೆಯನಾದ, ಸರ್ವವ್ಯಾಪಿಯಾದ, ಯೋಗನಿದ್ರೆಗೆ ಅಧೀನನಾಗಿ ಅಲುಗಾಡದೆ ಇರುವ, ವಿಷ್ಣುವನ್ನು ಆಗ ಅಲ್ಲಿ ನೋಡಿ ಆ ದೇವತೆಗಳು ಅಲ್ಲಿಯೇ ಇರುವವರಾದರು.

ಸ್ಥಿತೇಷು ಸರ್ವದೇವೇಷು ನಿದ್ರಾಸುಪ್ತೇ ಜಗತ್ಪತೌ ।
ಚಿಂತಾಮಾಪುಃ ಸುರಾಸ್ಸರ್ವೇ ಬ್ರಹ್ಮರುದ್ರಪುರೋಗಮಾಃ ॥೧೩॥

ವಿಷ್ಣುವು ನಿದ್ರೆಮಾಡುತ್ತಿರಲಾಗಿ, ಅಲ್ಲಿದ್ದ ಬ್ರಹ್ಮ ರುದ್ರ ಮೊದಲಾದ ದೇವತೆಗಳೆಲ್ಲರೂ ಹೀಗೆ ಯೋಚಿಸತೊಡಗಿದರು.

ತಾನುವಾಚ ತತಃ ಶಕ್ರಃ ಕಿಂ ಕರ್ತವ್ಯಂ ಸುರೋತ್ತಮಾಃ ।
ನಿದ್ರಾಭಂಗಃ ಕಥಂ ಕಾರ್ಯಶ್ಚಿಂತಯಂತು ಸುರೋತ್ತಮಾಃ ॥೧೪॥

ಆ ಸಮಯದಲ್ಲಿ ಇಂದ್ರನು ದೇವತೆಗಳನ್ನು ಕುರಿತು ವಿಷ್ಣುವಿಗೆ ನಿದ್ರಾಭಂಗವನ್ನು ಹೇಗೆಮಾಡುವುದು ಎಂಬ ವಿಷಯವನ್ನು ನೀವುಗಳೆಲ್ಲರೂ ಆಲೋಚಿಸಿರಿ ಎಂದು ಹೇಳಿದನು.

ತಮುವಾಚ ತದಾ ಶಂಭುರ್ನಿದ್ರಾಭಂಗೇಽಸ್ತಿ ದೂಷಣಂ ।
ಕಾರ್ಯಂ ಚೈವ ಪ್ರಕರ್ತವ್ಯಂ ಯಜ್ಞಸ್ಯ ಸುರಸತ್ತಮಾಃ ॥೧೫॥

ಆಗ ಶಂಭುವು, ಓ ದೇವತೆಗಳಲ್ಲಿ ಶ್ರೇಷ್ಠರಾದವರೇ ನಿದ್ರಾಭಂಗಮಾಡುವುದು ದೋಷಕ್ಕೆ ಕಾರಣವಾಗುತ್ತದೆ. ಆದರೆ ಯಜ್ಞಕಾರ್ಯವನ್ನೂ ನಿರ್ವಾಹ ಮಾಡಬೇಕಾಗಿದೆ ಎಂದು ಹೇಳಿದನು.

ಉತ್ಪಾದಿತಾ ತದಾ ವಮ್ರ್ಯೋ ಬ್ರಹ್ಮಣಾ ಪರಮೇಷ್ಠಿನಾ ।
ತಯಾ ಭಕ್ಷಯಿತುಂ ತತ್ರ ಧನುಷೋಽಗ್ರಂ ಧರಾಸ್ಥಿತಂ ॥೧೬॥

ಸರ್ವೋತ್ತಮವಾದ ಸತ್ಯಲೋಕದಲ್ಲಿ ದೊರೆಯಾಗಿರುವ ಬ್ರಹ್ಮನು ಭೂಮಿಯಲ್ಲಿರುವ ಆ ಧನುಸ್ಸಿನ ತುದಿಯನ್ನು ತಿನ್ನುವುದಕ್ಕಾಗಿ ಗೆಜ್ಜಲುಹುಳುಗಳನ್ನು ಸೃಷ್ಟಿ ಮಾಡಿದನು.

ಭಕ್ಷಿತೇಽಗ್ರೇ ತದಾ ನಿಮ್ನಂ ಗಮಿಷ್ಯತಿ ಶರಾಸನಂ ।
ತದಾ ನಿದ್ರಾವಿಮುಕ್ತೋಽಸೌ ದೇವದೇವೋ ಭವಿಷ್ಯತಿ ॥೧೭॥

ಗೆಜ್ಜಲುಹುಳುವು ಧನುಸ್ಸಿನ ತುದಿಯನ್ನು ತಿಂದಮೇಲೆ ಆ ಧನುಸ್ಸು ಕೆಳಭಾಗದಲ್ಲಿ ಬಗ್ಗುತ್ತದೆ. ಆಗ ವಿಷ್ಣುವು ನಿದ್ರೆಯಿಂದ ಬಿಡುಗಡೆಯನ್ನು ಹೊಂದಿ ಎಚ್ಚರಗೊಳ್ಳುತ್ತಾನೆ.

ದೇವಕಾರ್ಯಂ ತದಾ ಸರ್ವಂ ಭವಿಷ್ಯತಿ ನ ಸಂಶಯಃ ।
ಸ ವಮ್ರೀಂ ಸಂದಿದೇಶಾಥ ದೇವದೇವಃ ಸನಾತನಃ ॥೧೮॥

ವಿಷ್ಣುವಿಗೆ ಎಚ್ಚರವಾದರೆ ದೇವತೆಗಳ ಕೆಲಸವೆಲ್ಲವೂ ಕೈಗೂಡುವುದೆಂಬುದಾಗಿ ಯೋಚಿಸಿ ಬ್ರಹ್ಮನು ಗೆಜ್ಜಲುಹುಳುವನ್ನು ಕುರಿತು ಧನುಸ್ಸನ್ನು ತಿನ್ನಲು ಅಪ್ಪಣೆಮಾಡಿದನು.

**ತಮುವಾಚ ತದಾ ವಮ್ರೀ ದೇವದೇವಸ್ಯ ಮಾಪತೇಃ ।**
**ನಿದ್ರಾಭಂಗಃ ಕಥಂ ಕಾರ್ಯೋ ದೇವಸ್ಯ ಜಗತಾಂ ಗುರೋಃ ॥೧೯॥**

ಆಗ ಆ ಹುಳುವು ಬ್ರಹ್ಮನನ್ನು ಕುರಿತು, ಲಕ್ಷ್ಮೀಪತಿಯೂ, ಜಗತ್ತಿಗೆ ಗುರುವೂ ಆದ ಆ ವಿಷ್ಣುವಿನ ನಿದ್ರೆಗೆ ನಾನು ಹೇಗೆ ಭಂಗವನ್ನುಂಟುಮಾಡಲಿ? ಎಂದು ಕೇಳಿತು.

**ನಿದ್ರಾಭಂಗಃ ಕಥಾಚ್ಛೇದೋ ದಂಪತ್ಯೋಃ ಪ್ರೀತಿಭೇದನಂ ।**
**ಶಿಶುಮಾತೃವಿಭೇದಶ್ಚ ಬ್ರಹ್ಮಹತ್ಯಾಸಮಂ ಸ್ಮೃತಂ ॥೨೦॥**

ನಿದ್ರೆಗೆ ತೊಂದರೆಯನ್ನುಂಟುಮಾಡುವುದು, ದಂಪತಿಗಳಿಗಿರುವ ಅನ್ಯೋನ್ಯ ಪ್ರೀತಿಯನ್ನು ಕೆಡಿಸುವುದು, ತಾಯಿಮಕ್ಕಳಿಗೆ ಅಗಲಿಕೆಯಿಂದ ದ್ವೇಷವನ್ನುಂಟು ಮಾಡುವುದು, ಇವುಗಳು ಬ್ರಹ್ಮಹತ್ಯಾಪಾಪಕ್ಕೆ ಸಮವಾದವುಗಳೆಂದು ಹೇಳಲ್ಪಟ್ಟಿವೆ.

**ತತ್ಕಥಂ ದೇವದೇವಸ್ಯ ಕರೋಮಿ ಸುಖನಾಶನಂ ।**
**ಕಿಂ ಫಲಂ ಭಕ್ಷಣಾದ್ದೇವ ಯೇನ ಪಾಪಂ ಕರೋಮ್ಯಹಂ ॥೨೧॥**

ಆದುದರಿಂದ ಎಲೈ ಬ್ರಹ್ಮನೇ, ನಾನು ವಿಷ್ಣುವಿಗೆ ಅಪ್ರಿಯವಾದ ನಿದ್ರಾಭಂಗ ವನ್ನು ಹೇಗೆ ಉಂಟುಮಾಡಲಿ? ಧನುಸ್ಸಿನ ತುದಿಯನ್ನು ತಿನ್ನುವುದರಿಂದ ಉಂಟಾ ಗುವ ಇಂಥ ಪಾಪಕಾರ್ಯವನ್ನು ಮಾಡುವುದರಿಂದ ನನಗೆ ಏನು ಪ್ರಯೋಜನವು?

**ಸರ್ವಃ ಸ್ವಾರ್ಥವಶೋ ಲೋಕಃ ಕುರುತೇ ಪಾತಕಂ ಕಿಲ ।**
**ತಸ್ಮಾದಹಂ ಕರಿಷ್ಯಾಮಿ ಸ್ವಾರ್ಥಮೇವ ಪ್ರಭಕ್ಷಣಂ ॥೨೨॥**

ಲೋಕದಲ್ಲಿ ಎಲ್ಲ ಪ್ರಾಣಿಗಳೂ ತಮ್ಮ ಪ್ರಯೋಜನಕ್ಕಾಗಿ ಪಾಪಕೃತ್ಯವನ್ನಾ ದರೂ ಮಾಡುವುದು ಕಂಡುಬರುತ್ತದೆ. ಅದು ಅವುಗಳ ಸ್ವಭಾವ. ಆದುದರಿಂದ ನಾನೂ ನನ್ನ ಹೊಟ್ಟೆತುಂಬಿಕೊಳ್ಳುವುದೆಂಬ ಸ್ವಾರ್ಥಕ್ಕಾಗಿ ಇದನ್ನು ತಿನ್ನುತ್ತೇನೆ ಎಂದು ಹೇಳಿತು.

॥ ಬ್ರಹೋವಾಚ ॥

**ತವ ಭಾಗಂ ಕರಿಷ್ಯಾಮೋ ಮುಖಮಧ್ಯೇ ಯಥಾ ಶೃಣು ।**
**ತೇನ ತ್ವಂ ಕುರು ಕಾರ್ಯಂ ನೋ ವಿಷ್ಣುಂ ಬೋಧಯ ಮಾಚಿರಂ ॥೨೩॥**

ಬ್ರಹ್ಮನು ಹೇಳುತ್ತಾನೆ—ಎಲೈ ಹುಳುವೇ, ಈಗ ನೀನು ವಿಷ್ಣುವನ್ನು ಎಬ್ಬಿಸಿ ನಮ್ಮ ಕಾರ್ಯಕ್ಕೆ ಸಹಾಯಮಾಡಿದ್ದೇ ಆದರೆ, ನಾವು ಮಾಡುವ ಯಜ್ಞದಲ್ಲಿ ನಿನಗೂ ಒಂದು ಭಾಗವನ್ನು ಕೊಡುತ್ತೇವೆ. ಆದುದರಿಂದ ನೀನು ಸಾವಕಾಶ ಮಾಡದೆ ಜಾಗ್ರತೆಯಾಗಿ ಈ ಕಾರ್ಯವನ್ನು ಮಾಡು.

**ಹೋಮಕರ್ಮಣಿ ಪಾರ್ಶ್ವೇ ಚ ಹವಿರ್ದಾನಾತ್ಪತಿಷ್ಯತಿ ।**
**ತಂ ತೇ ಭಾಗಂ ವಿಜಾನೀಹಿ ಕುರು ಕಾರ್ಯಂ ತ್ವರಾನ್ವಿತಾ ॥೨೪॥**

ಹೋಮಮಾಡುವಾಗ ಹೋಮಕುಂಡದ ಪಕ್ಕಗಳಲ್ಲಿ ಹವಿಸ್ಸು ಬೀಳುತ್ತದೆ. ಆ ಹವಿಸ್ಸೇ ನಿನ್ನ ಭಾಗವೆಂದು ತಿಳಿ. ನೀನು ಜಾಗ್ರತೆಯಾಗಿ ಈ ಕೆಲಸವನ್ನು ಮಾಡು.

॥ ಸೂತ ಉವಾಚ ॥

**ಇತ್ಯುಕ್ತಾ ಬ್ರಹ್ಮಣಾ ವಮ್ರಿ ಧನುಷೋಽಗ್ರಂ ತ್ವರಾನ್ವಿತಾ ।**
**ಚಖಾದ ಸಂಸ್ಥಿತಂ ಭೂಮೌ ವಿಮುಕ್ತಾ ಜ್ಯಾ ತದಾಽಭವತ್ ॥೨೫॥**

ಹೀಗೆ ಬ್ರಹ್ಮನು ಹೇಳಿದ ಮೇಲೆ ಆ ಹುಳುವು ನೆಲದ ಮೇಲೆ ಇದ್ದ ಧನುಸ್ಸಿನ ತುದಿಯನ್ನು ತಿಂದುಬಿಟ್ಟಿತು. ಆಗ ಆ ಸ್ಥಳದಲ್ಲಿ ಕಟ್ಟಿದ್ದ ಧನುಸ್ಸಿನ ಹಗ್ಗವು ಬಿಚ್ಚಿಹೋಯಿತು.

**ಪ್ರತ್ಯಂಚಾಯಾಂ ವಿಮುಕ್ತಾಯಾಂ ಮುಕ್ತಾ ಕೋಟಿಸ್ತಥೋತ್ತರಾ ।**
**ಶಬ್ದಃ ಸಮಭವದ್ಘೋರಸ್ತೇನ ತ್ರಸ್ತಾಃ ಸುರಾಸ್ತದಾ ॥೨೬॥**

ಹೀಗೆ ಧನುಸ್ಸಿನ ಕೆಳಗಡೆಯ ಒಂದು ತುದಿಯು ಹಗ್ಗದ ಬಿಗಿತದಿಂದ ಬಿಡಲ್ಪಟ್ಟದ್ದರಿಂದ ಇನ್ನೊಂದು ತುದಿಯೂ ಬಿಡಲ್ಪಟ್ಟು ಧನುಸ್ಸು ಚಿಮ್ಮಲು ಬಹಳ ಘೋರವಾದ ಶಬ್ದವುಂಟಾಯಿತು. ಆದರಿಂದ ದೇವತೆಗಳೆಲ್ಲರೂ ಹೆದರಿದರು.

**ಬ್ರಹ್ಮಾಂಡಂ ಕ್ಷುಭಿತಂ ಸರ್ವಂ ವಸುಧಾ ಕಂಪಿತಾ ತದಾ ।**
**ಸಮುದ್ರಾಶ್ಚ ಸಮುದ್ವಿಗ್ನಾಸ್ತ್ರೇಸುಶ್ಚ ಜಲಜಂತವಃ ॥೨೭॥**

ಆ ಶಬ್ದದಿಂದ ಬ್ರಹ್ಮಾಂಡವು ಚಂಚಲವಾಯಿತು. ಭೂಮಿಯೆಲ್ಲವೂ ನಡುಗಿತು. ಸಮುದ್ರಗಳೆಲ್ಲವೂ ಅಲ್ಲೋಲಕಲ್ಲೋಲವಾಗಿ ಜಲದಲ್ಲಿರುವ ಪ್ರಾಣಿಗಳೆಲ್ಲವೂ ಹೆದರಿದುವು.

**ವವುರ್ವಾತಾಸ್ತಥಾ ಚೋಗ್ರಾಃ ಪರ್ವತಾಶ್ಚ ಚಕಂಪಿರೇ ।**
**ಉಲ್ಕಾಪಾತಾ ಮಹೋತ್ಪಾತಾ ಬಭೂವುರ್ದುಃಖಶಂಸಿನಃ ॥೨೮॥**

ಆಗ ಬಿರುಗಾಳಿಯು ಬೀಸಿತು. ಪರ್ವತಗಳು ನಡುಗಿದವು. ದುಃಖವನ್ನು ಸೂಚಿಸುವ ಉಲ್ಕಾಪಾತಗಳೂ ಮಹೋತ್ಪಾತಗಳೂ ಉಂಟಾದವು.

**ದಿಶೋ ಘೋರತರಾಶ್ಚಾಸನ್ ಸೂರ್ಯೋಽಪ್ಯಸ್ತಂಗತೋಽಭವತ್ ।**
**ಚಿಂತಾಮಾಪುಃ ಸುರಾಃಸರ್ವೇ ಕಿಂ ಭವಿಷ್ಯತಿ ದುರ್ದಿನೇ ॥೨೯॥**

ದಿಕ್ಕುಗಳೆಲ್ಲವೂ ನೋಡಲು ಭಯವನ್ನುಂಟುಮಾಡುತ್ತಿದ್ದುವು. ಸೂರ್ಯನ ಕಾಂತಿಯು ಕಮ್ಮಿಯಾಗಿ ಅಸ್ತವಾಯಿತು. ಈ ರೀತಿಯ ಈ ದುರ್ದಿನದಲ್ಲಿ ಇನ್ನು ಏನು ವಿಪತ್ತುಂಟಾಗುವುದೋ ಎಂದು ದೇವತೆಗಳೆಲ್ಲರೂ ಚಿಂತೆಗೊಳಗಾದರು.

**ಏವಂ ಚಿಂತಯತಾಂ ತೇಷಾಂ ಮೂರ್ಧಾ ವಿಷ್ಣೋಃ ಸಕುಂಡಲಃ ।**
**ಗತಃ ಸಮುಕುಟಃ ಕ್ವಾಪಿ ದೇವದೇವಸ್ಯ ತಾಪಸಾಃ ॥೩೦॥**

ಓ ಋಷಿಗಳಿರಾ, ಹೀಗೆ ದೇವತೆಗಳು ಆಲೋಚಿಸುತ್ತಿರುವಾಗ ಅವರು ನೋಡುತ್ತಿರುವಂತೆಯೇ ವಿಷ್ಣುವಿನ ಕಿರೀಟಕುಂಡಲಗಳಿಂದ ಸಹಿತವಾದ ತಲೆಯು, ಧನುಸ್ಸಿನ ತುದಿಯಿಂದ ಕತ್ತರಿಸಲ್ಪಟ್ಟು ಎಲ್ಲಿಯೋ ಹಾರಿಹೋಯಿತು.

**ಅಂಧಕಾರೇ ತದಾ ಘೋರೇ ಶಾಂತೇ ಬ್ರಹ್ಮಹರೌ ತದಾ ।**
**ಶಿರೋಹೀನಂ ಶರೀರಂ ತು ದದೃಶಾತೇ ವಿಲಕ್ಷಣಂ ॥೩೧॥**

ಅನಂತರದಲ್ಲಿ ಕತ್ತಲೆಯು ಭಯಂಕರವಾಗಿರಲು, ಗದ್ದಲವೆಲ್ಲವೂ ಶಾಂತ ವಾದ ಮೇಲೆ ಬ್ರಹ್ಮ, ಶಿವ ಇವರಿಬ್ಬರೂ, ಆ ವಿಲಕ್ಷಣವಾದ ತಲೆಯಿಲ್ಲದ ವಿಷ್ಣುವಿನ ಶರೀರವನ್ನು ನೋಡಿದರು.

**ದೃಷ್ಟ್ವಾ ಕಬಂಧಂ ವಿಷ್ಣೋಸ್ತೇ ವಿಸ್ಮಿತಾಃ ಸುರಸತ್ತಮಾಃ ।**
**ಚಿಂತಾಸಾಗರಮಗ್ನಾಶ್ಚ ರುರುದುಃ ಶೋಕಕರ್ಶಿತಾಃ ॥೩೨॥**

ಎಲೈ ಋಷಿಗಳಿರಾ, ದೇವತೆಗಳೆಲ್ಲರೂ ತಲೆಯಿಲ್ಲದ ವಿಷ್ಣುವಿನ ಮುಂಡವನ್ನು ನೋಡಿ ಆಶ್ಚರ್ಯಪಟ್ಟು ಮುಂದೆ ಏನಾಗುವುದೋ ಎಂಬ ಆತಂಕದ ಸಮುದ್ರದಲ್ಲಿ ಮುಳುಗಿ ಮುಂದುಗಾಣದೆ ದುಃಖದಿಂದ ಅತ್ತರು.

**ಹಾ ನಾಥ ಕಿಂ ಪ್ರಭೋ ಜಾತಮತ್ಯದ್ಭುತಮಮಾನುಷಂ ।**
**ವೈಶಸಂ ಸರ್ವದೇವಾನಾಂ ದೇವದೇವ ಸನಾತನ ॥೩೩॥**

ಓ ಪ್ರಭುವೇ, ದೇವದೇವನೇ, ಅಯ್ಯೋ ಏನು ಆಶ್ಚರ್ಯವು! ನಾವು ಸ್ವಲ್ಪವೂ ನಿರೀಕ್ಷಿಸದೇ ಇದ್ದ ಅದ್ಭುತವೂ, ಅಮಾನುಷವೂ ಆದ ದುಃಖವು ಸರ್ವ ದೇವತೆಗಳಿಗೂ ಉಂಟಾಯಿತಲ್ಲ! ಏನು ದೈವದುರ್ವಿಲಾಸವು? ದೇವತೆಗಳೆಲ್ಲರಿಗೂ ನಾಶವನ್ನುಂಟುಮಾಡಬಹುದಾದ ಏನು ವಿಪತ್ತು ಒದಗಿತು! ನೀನಾದರೋ ದೇವತೆಗಳೆಲ್ಲರಿಗೂ ದೊರೆಯಾದವನು ಮತ್ತು ನಾಶರಹಿತನೂ ನಿತ್ಯನೂ ಆಗಿರುವೆಯಲ್ಲವೇ?

**ಮಾಯೇಯಂ ಕಸ್ಯ ದೇವಸ್ಯ ಯಯಾ ತೇಽದ್ಯ ಶಿರೋ ಹೃತಂ ।**
**ಅಚ್ಛೇದ್ಯಸ್ತ್ವಮಭೇದ್ಯೋಽಸಿ ಅಪ್ರದಾಹ್ಯೋಽಸಿ ಸರ್ವದಾ ॥೩೪॥**

ಎಲೈ ದೇವನೇ, ನೀನು ಕತ್ತರಿಸುವುದಕ್ಕೂ, ಒಡೆಯುವುದಕ್ಕೂ ಸುಡುವುದಕ್ಕೂ ಎಂದಿಗೂ ಆಗದಿರುವ ಚೈತನ್ಯಶಕ್ತಿರೂಪನು. ಹಾಗಾದರೂ ನಿನ್ನ ತಲೆಯನ್ನು ಯಾವ ದೇವರ ಮಾಯೆಯು ಅಪಹರಿಸಿತು?

**ಏವಂ ಗತೇ ತ್ವಯಿ ವಿಭೋ ಮರಿಷ್ಯಂತಿ ಚ ದೇವತಾಃ ।**
**ಕೀದೃಶಸ್ತ್ವಯಿ ನಃ ಸ್ನೇಹಃ ಸ್ವಾರ್ಥೇನೈವ ರುದಾಮಹೇ ॥೩೫॥**

ಓ ವಿಭುವೇ, ನೀನು ಈ ರೀತಿಯಾಗಿ ನಷ್ಟವಾಗಿಹೋದರೆ ಈ ದೇವತೆಗಳೆಲ್ಲರೂ ಮರಣಹೊಂದುತ್ತಾರೆ. ನಿನ್ನಲ್ಲಿ ನಮಗಿರುವ ಪ್ರೀತಿಯಾದರೂ ಎಂಥದು! ಆದರೂ ನಾವುಗಳು ಸ್ವಾರ್ಥಕ್ಕಾಗಿಯೇ ಅಳುತ್ತಿದ್ದೇವೆ.

**ನಾಯಂ ವಿಘ್ನಃ ಕೃತೋ ದೈತ್ಯೈರ್ನ ಯಕ್ಷೈರ್ನ ಚ ರಾಕ್ಷಸೈಃ ।**
**ದೇವೈರೇವ ಕೃತಃ ಕಸ್ಯ ದೂಷಣಂ ಚ ರಮಾಪತೇ ॥೩೬॥**

ಈ ರೀತಿಯಾದ ವಿಘ್ನವು ರಾಕ್ಷಸರಿಂದಾಗಲೀ, ಯಕ್ಷರಿಂದಾಗಲೀ ಮಾಡಲ್ಪಟ್ಟುದಲ್ಲವು. ಇದು ದೇವತೆಗಳಿಂದಲೇ ಮಾಡಲ್ಪಟ್ಟಿದೆ. ಹೇ ಲಕ್ಷ್ಮೀಪತಿಯೇ, ಇದು ಯಾರ ದೋಷವೋ ತಿಳಿಯಲಾಗದೇ ಇದೆಯಲ್ಲ!

**ಪರಾಧೀನಾಃ ಸುರಾಃ ಸರ್ವೇ ಕಿಂ ಕುರ್ಮಃ ಕ್ವ ವ್ರಜಾಮ ಚ ।**
**ಶರಣಂ ನೈವ ದೇವೇಶ ಸುರಾಣಾಂ ಮೂಢಚೇತಸಾಂ ॥೩೭॥**

ದೇವತೆಗಳೆಲ್ಲರೂ ನಾವೂ ಪರಾಧೀನರಾಗಿದ್ದೇವೆ. ಏನು ಮಾಡೋಣ, ಎಲ್ಲಿಗೆ ಹೋಗೋಣ, ಮೂಢಬುದ್ಧಿಯುಳ್ಳ ಈ ದೇವತೆಗಳಿಗೆ ರಕ್ಷಕರು ಯಾರೂ ಇಲ್ಲವೆ?

**ನ ಚೈಷಾ ಸಾತ್ತ್ವಿಕೀ ಮಾಯಾ ರಾಜಸೀ ನ ಚ ತಾಮಸೀ ।**
**ಯಯಾ ಛಿನ್ನಂ ಶಿರಸ್ತ್ವೇದ್ಯ ಮಾಯೇಶಸ್ಯ ಜಗದ್ಗುರೋಃ ॥೩೮॥**

ಯಾವ ಮಾಯೆಯಿಂದ ತಲೆಯು ಕತ್ತರಿಸಲ್ಪಟ್ಟಿತೋ ಅದು ಸತ್ತ್ವಗುಣ ಪ್ರಧಾನವೂ, ರಜೋಗುಣಪ್ರಧಾನವೂ, ತಮೋಗುಣಪ್ರಧಾನವೂ ಆದ ಮಾಯೆಯಲ್ಲವು. ಮಾಯೆಗೂ ಜಗತ್ತಿಗೂ ಗುರುವಾದ ವಿಷ್ಣುವಿನ ತಲೆಯನ್ನು ಕತ್ತರಿಸಬೇಕಾದರೆ ಇದು ಬೇರೆ ಮಾಯೆಯಾಗಿರಬೇಕು. ಸತ್ತ್ವಾದಿಗುಣಗಳುಳ್ಳ ಮಾಯೆಯು ವಿಷ್ಣುವಿಗೆ ಅಧೀನವಾದುದರಿಂದ ಅವನ ತಲೆಯನ್ನು ಆ ಮಾಯೆಯು ಕತ್ತರಿಸಲಾರದು.

**ಕ್ರಂದಮಾನಾಂಸ್ತದಾ ದೃಷ್ಟ್ವಾ ದೇವಾನ್ ಶಿವಪುರೋಗಮಾನ್ ।**
**ಬೃಹಸ್ಪತಿಸ್ತದೋವಾಚ ಶಮಯನ್ವೇದವಿತ್ತಮಃ ॥೩೯॥**

ಈ ರೀತಿಯಾಗಿ ಗೋಳಾಡುತ್ತಿರುವ ಶಿವನೇ ಮೊದಲಾದ ದೇವತೆಗಳನ್ನು ನೋಡಿ ವೇದಗಳನ್ನು ಚೆನ್ನಾಗಿ ಬಲ್ಲವನಾದ ಬೃಹಸ್ಪತಿಯು ಅವರಿಗೆ ಸಮಾಧಾನವನ್ನು ಮಾಡುತ್ತಾ ಹೀಗೆ ಹೇಳಿದನು.

**ರುದಿತೇನ ಮಹಾಭಾಗಾಃ ಕ್ರಂದಿತೇನ ತಥಾಪಿ ಕಿಂ ।**
**ಉಪಾಯಶ್ಚಾತ್ರ ಕರ್ತವ್ಯಃ ಸರ್ವಥಾ ಬುದ್ಧಿಗೋಚರಃ ॥೪೦॥**

**ದೈವಂ ಪುರುಷಕಾರಶ್ಚ ದೇವೇಶಸದೃಶಾವುಭೌ ।**
**ಉಪಾಯಶ್ಚ ವಿಧಾತವ್ಯೋ ದೈವಾತ್ಫಲತಿ ಸರ್ವಥಾ ॥೪೧॥**

ಎಲೈ ಪುಣ್ಯಶಾಲಿಗಳಿರಾ, ಸುಮ್ಮನೆ ಅಳುತ್ತಾ ಗೋಳಾಡುವುದರಿಂದ ಏನು ಪ್ರಯೋಜನ? ನಮ್ಮ ಬುದ್ಧಿಗೆ ತಿಳಿದ ಉಪಾಯವನ್ನು ಮಾಡಬೇಕು. ಅದೃಷ್ಟವೂ ಪುರುಷಪ್ರಯತ್ನವೂ ಸಮವಾದ ಸಾಮರ್ಥ್ಯವುಳ್ಳವುಗಳು. ನಾವು ಪುರುಷಪ್ರಯತ್ನಸಾಧ್ಯವಾದ ಉಪಾಯವನ್ನು ಮಾಡಿದರೆ ಅದು ದೈವಸಹಕಾರದಿಂದ ಸಿದ್ಧಿಸುತ್ತದೆ ಎಂಬುದಾಗಿ ಗುರುವು ಹೇಳಿದನು.

|| ಇಂದ್ರ ಉವಾಚ ||

**ದೈವಮೇವ ಪರಂ ಮನ್ಯೇ ಧಿಕ್ ಪೌರುಷಮನರ್ಥಕಂ ।**
**ವಿಷ್ಣೋರಪಿ ಶಿರಶ್ಛಿನ್ನಂ ಸುರಾಣಾಂ ಚೈವ ಪಶ್ಯತಾಂ   ॥೪೨॥**

ಇಂದ್ರನು ಹೇಳುತ್ತಾನೆ—ಅದೃಷ್ಟವೇ ಹೆಚ್ಚಾದುದು. ಪ್ರಯೋಜನವಿಲ್ಲದ ಪೌರುಷಕ್ಕೆ ಧಿಕ್ಕಾರವಿರಲಿ. ಏಕೆಂದರೆ, ದೇವತೆಗಳೆಲ್ಲರೂ ನೋಡುತ್ತಿರುವಾಗಲೇ ಸಾಕ್ಷಾದ್ವಿಷ್ಣುವಿನ ತಲೆಯೇ ಕತ್ತರಿಸಿ ಹೋಯಿತಲ್ಲವೇ ?

|| ಬ್ರಹ್ಮೋವಾಚ ||

**ಅವಶ್ಯಮೇವ ಭೋಕ್ತವ್ಯಂ ಕಾಲೇನಾಪಾದಿತಂ ಚ ಯತ್ ।**
**ಶುಭಂ ವಾಪ್ಯಶುಭಂ ವಾಪಿ ದೈವಂ ಕೋಽತಿಕ್ರಮೇತ್ಪುನಃ   ॥೪೩॥**

ಬ್ರಹ್ಮನು ಹೇಳುತ್ತಾನೆ—ಕಾಲಾಧೀನವಾಗಿ ಬಂದುದೆಲ್ಲವನ್ನೂ ಅದು ಒಳ್ಳೆಯದು, ಕೆಟ್ಟುದು ಯಾವುದಾದರೂ ಅನುಭವಿಸಲೇಬೇಕು. ಅದೃಷ್ಟವನ್ನು ಮೀರುವುದಕ್ಕೆ ಯಾರಿಗೆ ಸಾಧ್ಯ ?

**ದೇಹವಾನ್ ಸುಖದುಃಖಾನಾಂ ಭೋಕ್ತಾ ನೈವಾತ್ರ ಸಂಶಯಃ ।**
**ಯಥಾ ಕಾಲವಶಾತ್ಕೃತ್ತಂ ಶಿರೋ ಮೇ ಶಂಭುನಾ ಪುರಾ   ॥೪೪॥**

ಶರೀರವನ್ನು ಪಡೆದಿರುವವರೆಲ್ಲರೂ ಸುಖದುಃಖಗಳನ್ನು ಅನುಭವಿಸಲೇ ಬೇಕು. ಪೂರ್ವದಲ್ಲಿ ಕಾಲವಶದಿಂದ ಶಂಭುವು ನನ್ನ ತಲೆಯನ್ನು ಕತ್ತರಿಸಿದನು.

**ತಥೈವ ಲಿಂಗಪಾತಶ್ಚ ಮಹಾದೇವಸ್ಯ ಶಾಪತಃ ।**
**ತಥೈವಾದ್ಯ ಹರೇರ್ಮೂರ್ಧಾ ಪತಿತೋ ಲವಣಾಂಭಸಿ   ॥೪೫॥**

ಕಾಲಾನುಸಾರವಾಗಿ ಶಾಪದಿಂದ ಶಂಭುವಿನ ಲಿಂಗವೂ ಬಿದ್ದುಹೋಯಿತು. ಅದರಂತೆಯೇ ಈಗ ವಿಷ್ಣುವಿನ ತಲೆಯೂ ಕೂಡ ಕತ್ತರಿಸಿ ಲವಣಸಮುದ್ರದಲ್ಲಿ ಬಿದ್ದಿರುವುದು.

**ಸಹಸ್ರಭಗಸಂಪ್ರಾಪ್ತಿರ್ದುಃಖಂ ಚೈವ ಶಚೀಪತೇಃ ।**
**ಸ್ವರ್ಗಾದ್ಭ್ರಂಶಸ್ತಥಾವಾಸಃ ಕಮಲೇ ಮಾನಸೇ ಸರೇ   ॥೪೬॥**

ದೈವಯೋಗದಿಂದಲೇ ಶಚೀಪತಿಯಾದ ಇಂದ್ರನಿಗೂ ಸಹಸ್ರಭಗಸಂಪ್ರಾಪ್ತಿಯು, ಸ್ವರ್ಗವನ್ನು ಬಿಟ್ಟು ಮಾನಸಸರೋವರದಲ್ಲಿ ಕಮಲದಲ್ಲಿ ವಾಸಮಾಡುವಿಕೆ, ಇವುಗಳೂ ಒದಗಿದವು.

**ಏತೇ ದುಃಖಸ್ಯ ಭೋಕ್ತಾರಃ ಕೇನ ದುಃಖಂ ನ ಭುಜ್ಯತೇ ।**
**ಸಂಸಾರೇಽಸ್ಮಿನ್ಮಹಾಭಾಗಾಸ್ತಸ್ಮಾಚ್ಛೋಕಂ ತ್ಯಜಂತು ವೈ ॥೪೭॥**

ಎಲೈ ಪುಣ್ಯಶಾಲಿಗಳೇ, ಈ ಸಂಸಾರದಲ್ಲಿ ಯಾರುತಾನೇ ದುಃಖವನ್ನು ಅನುಭವಿಸದವರು ಇದ್ದಾರೆ? ಇಂದ್ರಾದಿಗಳಿಗೂ ಕೂಡ ಒಂದೊಂದು ವಿಧವಾದ ದುಃಖವು ಪ್ರಾಪ್ತವಾಯಿತು. ಆದುದರಿಂದ ನೀವೆಲ್ಲರೂ ದುಃಖವನ್ನು ಬಿಟ್ಟುಬಿಡಿರಿ.

**ಚಿಂತಯಂತು ಮಹಾಮಾಯಾಂ ವಿದ್ಯಾಂ ದೇವೀಂ ಸನಾತನೀಂ ।**
**ಸಾ ವಿಧಾಸ್ಯತಿ ನಃ ಕಾರ್ಯಂ ನಿರ್ಗುಣಾ ಪ್ರಕೃತಿಃ ಪರಾ ॥೪೮॥**

ದುಃಖವನ್ನು ಬಿಟ್ಟು ಯಾವಾಗಲೂ ನಿತ್ಯವಾಗಿರುವ ಚಿದ್ರೂಪಳಾದ, ವಿದ್ಯಾಸ್ವರೂಪಳಾದ, ಗುಣಗಳಿಲ್ಲದ ಮಹಾಮಾಯೆಯನ್ನು ಧ್ಯಾನಮಾಡಿರಿ. ಪರಾಪ್ರಕೃತಿ ಎಂದು ಪ್ರಸಿದ್ಧಳಾಗಿರುವ ಅವಳು ನಮ್ಮ ಕೆಲಸವನ್ನು ನೆರವೇರಿಸುತ್ತಾಳೆ.

**ಬ್ರಹ್ಮವಿದ್ಯಾಂ ಜಗದ್ಧಾತ್ರೀಂ ಸರ್ವೇಷಾಂ ಜನನೀಂ ತಥಾ ।**
**ಯಯಾ ಸರ್ವಮಿದಂ ವ್ಯಾಪ್ತಂ ತ್ರೈಲೋಕ್ಯಂ ಸಚರಾಚರಂ ॥೪೯॥**

ಯಾವ ಮಾಯೆಯಿಂದ ಸ್ಥಾವರಜಂಗಮರೂಪವಾದ ಈ ಮೂರುಲೋಕವೂ ವ್ಯಾಪಿಸಲ್ಪಟ್ಟಿವೆಯೋ, ಅಂಥ ಜಗತ್ತನ್ನು ಧರಿಸಿರುವ, ಎಲ್ಲ ವಸ್ತುಗಳಿಗೂ ತಾಯಿಯಾದ ಬ್ರಹ್ಮವಿದ್ಯೆಯನ್ನು ಧ್ಯಾನಮಾಡಿರಿ. ನಮ್ಮ ಕಾರ್ಯವು ಸಿದ್ಧಿಸುವುದು ಎಂದು ಹೇಳಿದನು.

॥ ಸೂತ ಉವಾಚ ॥

**ಇತ್ಯುಕ್ತ್ವಾ ವೈ ಸುರಾನ್ವೇಧಾ ನಿಗಮಾನಾದಿದೇಶ ಹ ।**
**ದೇಹಯುಕ್ತಾನ್ ಸ್ಥಿತಾನಗ್ರೇ ಸುರಕಾರ್ಯಾರ್ಥಸಿದ್ಧಯೇ ॥೫೦॥**

ಈ ರೀತಿಯಾಗಿ ಬ್ರಹ್ಮನು ದೇವತೆಗಳಿಗೆ ಹೇಳಿ, ಶರೀರವನ್ನು ಹೊಂದಿ ಎದುರಿಗೆ ನಿಂತಿರುವ ವೇದಗಳನ್ನು, ದೇವತೆಗಳ ಕೆಲಸವು ಸಿದ್ಧಿಯಾಗುವುದಕ್ಕಾಗಿ ಈರೀತಿಯಾಗಿ ಅಪ್ಪಣೆಮಾಡಿದನು.

॥ ಬ್ರಹ್ಮೋವಾಚ ॥

**ಸ್ತುವಂತು ಪರಮಾಂ ದೇವೀಂ ಬ್ರಹ್ಮವಿದ್ಯಾಂ ಸನಾತನೀಂ ।**
**ಗೂಢಾಂಗೀಂ ಚ ಮಹಾಮಾಯಾಂ ಸರ್ವಕಾರ್ಯಾರ್ಥಸಾಧನೀಂ ॥೫೧॥**

ಓ ವೇದಗಳಿರಾ, ಉತ್ಕೃಷ್ಟದೇವತೆಯಾದ, ಬ್ರಹ್ಮಜ್ಞಾನಸ್ವರೂಪಳಾದ, ಅನಾದಿ ಎಂದರೆ ಎಲ್ಲಕ್ಕೂ ಕಾರಣಳಾದುದರಿಂದ ಮೊದಲಿಲ್ಲದವಳಾದ, ಗುಟ್ಟಾದ ಅವಯವಗಳುಳ್ಳ, ಎಲ್ಲಾ ಕೆಲಸಗಳನ್ನೂ ನೆರವೇರಿಸುವ, ಮೂಲಪ್ರಕೃತಿಯಾದ ದೇವಿಯನ್ನು ನೀವು ಸ್ತೋತ್ರಮಾಡಿರಿ.

**ತಚ್ಛ್ರುತ್ವಾ ವಚನಂ ತಸ್ಯ ವೇದಾಃ ಸರ್ವಾಂಗಸುಂದರಾಃ ।**
**ತುಷ್ಟುವುರ್ಜ್ಞಾನಗಮ್ಯಾಂ ತಾಂ ಮಹಾಮಾಯಾಂ ಜಗತ್ಸ್ಥಿತಾಂ ॥೫೨॥**

ಹೀಗೆ ಹೇಳಿದ ಬ್ರಹ್ಮನ ಮಾತನ್ನು ಕೇಳಿ ಎಲ್ಲಾ ಅವಯವಗಳಿಂದಲೂ ಕೂಡಿ, ಕೇಳಲು ಹಿತವಾಗಿರುವ ವೇದಗಳು, ತಿಳಿವಿನಿಂದ ತಿಳಿದುಕೊಳ್ಳಲು ಯೋಗ್ಯಳಾದ ಪ್ರಪಂಚಸ್ವರೂಪಳಾದ, ಮಹಾಮಾಯಾ ಎಂದರೆ ಎಲ್ಲರಿಗೂ ಸಮಾನವಾಗಿರುವ ಮೂಲಾವಿದ್ಯಾ ಎಂದು ಪ್ರಸಿದ್ಧಳಾಗಿರುವ, ಆ ಶಕ್ತಿಯನ್ನು ಸ್ತೋತ್ರಮಾಡಿದುವು.

॥ ವೇದಾ ಊಚುಃ ॥

**ನಮೋ ದೇವಿ ಮಹಾಮಾಯೇ ವಿಶ್ವೋತ್ಪತ್ತಿಕರೇ ಶಿವೇ ।**
**ನಿರ್ಗುಣೇ ಸರ್ವಭೂತೇಶಿ ಮಾತಃ ಶಂಕರಕಾಮದೇ ॥೫೩॥**

ಓ ದೇವಿಯೇ, ಮಹಾಮಾಯೆಯೇ, ಜಗತ್ತಿನ ಉತ್ಪತ್ತಿಗೆ ಕಾರಣಳೇ, ಮಂಗಳಸ್ವರೂಪಳೇ, ಸಾತ್ತ್ವಿಕರಾಜಸತಾಮಸಗಳೆಂಬ ಗುಣಗಳಿಲ್ಲದವಳೇ, ಪ್ರಾಣಿಗಳಿಗೆಲ್ಲಾ ಒಡೆಯಳೇ, ಶಂಕರನ ಇಚ್ಛೆಯನ್ನು ಸಲ್ಲಿಸುವವಳೇ, ಸುಖಕರಗಳಾದ ಕೋರಿಕೆಗಳನ್ನು ನೆರವೇರಿಸುವವಳೇ, ಹೇ ತಾಯಿಯೇ ನಿನಗೆ ನಮಸ್ಕಾರವು.

**ತ್ವಂ ಭೂತಿಃ ಸರ್ವಭೂತಾನಾಂ ಪ್ರಾಣಃ ಪ್ರಾಣವತಾಂ ತಥಾ ।**
**ಧೀಃ ಶ್ರೀಃ ಕಾಂತಿಃ ಕ್ಷಮಾ ಶಾಂತಿಃ ಶ್ರದ್ಧಾ ಮೇಧಾ ಧೃತಿಃ ಸ್ಮೃತಿಃ ॥೫೪॥**

ಓ ದೇವಿಯೇ, ನೀನು ಎಲ್ಲಾ ಪ್ರಾಣಿಗಳಲ್ಲಿಯೂ ತೋರುತ್ತಿರುವ ಮಹಿಮಾಸ್ವರೂಪಳೂ ಪ್ರಾಣವಿರುವ ಪ್ರಾಣಿಗಳಿಗೆ ಪ್ರಾಣಶಕ್ತಿರೂಪಳೂ, ಬುದ್ಧಿಸ್ವರೂಪಳೂ,

ಐಶ್ವರ್ಯಸ್ವರೂಪಳೂ, ಕಾಂತಿಸ್ವರೂಪಳೂ, ಸಹನೆಯಸ್ವರೂಪಳೂ, ಶಾಂತಿಸ್ವರೂಪಳೂ, ನಂಬಿಕೆಯಸ್ವರೂಪಳೂ, ಗ್ರಂಥಾದಿಗಳ ಅರ್ಥವನ್ನು ಮರೆಯದೆ ಧರಿಸುವ ಸಾಮರ್ಥ್ಯ ಸ್ವರೂಪಳೂ, ಧೈರ್ಯಸ್ವರೂಪಳೂ, ಸ್ಮರಣೆಯ ಸ್ವರೂಪಳೂ ಕೂಡ ಆಗಿರುವೆ.

**ತ್ವಮುದ್ಗೀತೇಽರ್ಧಮಾತ್ರಾಸಿ ಗಾಯತ್ರೀ ವ್ಯಾಹೃತಿಸ್ತಥಾ ।**
**ಜಯಾ ಚ ವಿಜಯಾ ಧಾತ್ರೀ ಲಜ್ಜಾ ಕೀರ್ತಿಸ್ಸ್ಪೃಹಾ ದಯಾ ॥೫೫॥**

ಮತ್ತು ನೀನು ಪ್ರಣವಾಕ್ಷರದಲ್ಲಿ ಅರ್ಧಮಾತ್ರಾಸ್ವರೂಪಳೂ, ಗಾಯತ್ರೀ ಸ್ವರೂಪಳೂ, ವ್ಯಾಹೃತಿಮಂತ್ರಸ್ವರೂಪಳೂ, ಗೆಲುವಿನ ಸ್ವರೂಪಳೂ, ವಿಜಯ ಸ್ವರೂಪಳೂ, ಉಪಮಾತೃಸ್ವರೂಪಳೂ, ನಾಚಿಕೆಯ ಸ್ವರೂಪಳೂ, ಯಶಸ್ಸಿನ ಸ್ವರೂಪಳೂ, ಇಚ್ಛಾಸ್ವರೂಪಳೂ, ಕರುಣಾಸ್ವರೂಪಳೂ ಕೂಡ ಆಗಿರುತ್ತೀಯೆ.

**ತ್ವಾಂ ಸಂಸ್ತುವೋಽಮ್ಬ ಭುವನತ್ರಯಸಂವಿಧಾನ**
**ದಕ್ಷಾಂ ದಯಾರಸಯುತಾಂ ಜನನೀಂ ಜನಾನಾಂ ।**
**ವಿದ್ಯಾಂ ಶಿವಾಂ ಸಕಲಲೋಕಹಿತಾಂ ವರೇಣ್ಯಾಂ**
**ವಾಗ್ಬೀಜವಾಸನಿಪುಣಾಂ ಭವನಾಶಕರ್ತ್ರೀಂ ॥೫೬॥**

ಓ ತಾಯಿಯೇ, ಮೂರು ಲೋಕಗಳನ್ನು ಸೃಷ್ಟಿಸುವುದರಲ್ಲಿ ಸಮರ್ಥಳಾದ ಕರುಣೆಯೆಂಬ ರಸದಿಂದ ಕೂಡಿರುವ, ಎಲ್ಲಾ ಜನಗಳಿಗೂ ತಾಯಿಯಾದ, ಜ್ಞಾನ ಸ್ವರೂಪಳೂ, ಮಂಗಳಕರಳೂ, ಎಲ್ಲಾ ಲೋಕಗಳಿಗೂ ಒಳ್ಳೆಯದನ್ನುಂಟುಮಾಡು ವವಳೂ, ಸೇವೆಮಾಡಲು ಯೋಗ್ಯಳೂ, ವಾಗ್ಬೀಜದಲ್ಲಿ ವಾಸಮಾಡುವುದರಲ್ಲಿ ಚತುರಳೂ, ಆಗಿರುವ ಜನನಮರಣರೂಪವಾದ ಸಂಸಾರವನ್ನು ನಾಶಮಾಡುವ, ನಿನ್ನನ್ನು ನಾವು ಚೆನ್ನಾಗಿ ಸ್ತೋತ್ರಮಾಡುತ್ತೇವೆ.

**ಬ್ರಹ್ಮಾ ಹರಃ ಶೌರಿಸಹಸ್ರನೇತ್ರ-**
**ವಾಗ್ವಹ್ನಿಸೂರ್ಯಾ ಭುವನಾಧಿನಾಥಾಃ ।**
**ತೇ ತ್ವತ್ಕೃತಾಃ ಸಂತಿ ತತೋ ನ ಮುಖ್ಯಾ**
**ಮಾತಾ ಯತಸ್ತ್ವಂ ಸ್ಥಿರಜಂಗಮಾನಾಂ ॥೫೭॥**

ಓ ತಾಯಿಯೇ, ಬ್ರಹ್ಮನೂ ಶಿವನೂ ವಿಷ್ಣುವೂ ಇಂದ್ರನೂ ಸರಸ್ವತಿಯೂ ಅಗ್ನಿಯೂ ಸೂರ್ಯನೂ ಇವರೆಲ್ಲರೂ ಒಂದೊಂದು ಲೋಕಕ್ಕೆ ಒಡೆಯರಾಗಿದ್ದಾರೆ.

ಅವರೆಲ್ಲರೂ ನಿನ್ನಿಂದಲೇ ಸೃಷ್ಟಿಸಲ್ಪಟ್ಟವರಾಗಿರುತ್ತಾರೆ. ಆದುದರಿಂದ ಅವರು ಮುಖ್ಯರಲ್ಲವು. ಸಂಚಾರಶಕ್ತಿಯುಳ್ಳ ಪ್ರಾಣಿಗಳಿಗೂ, ಅಚಲವಾದ ಜಡವಸ್ತುಗಳಿಗೂ ನೀನು ತಾಯಿಯಾಗಿರುವುದರಿಂದ ನೀನೇ ಮುಖ್ಯಳು. ಆದುದರಿಂದ ನಾವು ನಿನ್ನನ್ನೇ ಸ್ತೋತ್ರಮಾಡುತ್ತೇವೆ.

**ಸಕಲಭುವನಮೇತತ್ಕರ್ತುಕಾಮಾ ಯದಾ ತ್ವಂ**
**ಸೃಜಸಿ ಜನನಿ ದೇವಾನ್ ವಿಷ್ಣುರುದ್ರಾಜಮುಖ್ಯಾನ್ ।**
**ಸ್ಥಿತಿಲಯಜನನಂ ತೈಃ ಕಾರಯಸ್ಯೇಕರೂಪಾ**
**ನ ಖಲು ತವ ಕಥಂಚಿದ್ದೇವಿ ಸಂಸಾರಲೇಶಃ ॥೫೮॥**

ಓ ಜನನಿಯೇ, ನೀನು ಈ ಎಲ್ಲಾ ಲೋಕಗಳನ್ನೂ ಸೃಷ್ಟಿಮಾಡಬೇಕೆಂದು ಯಾವಾಗ ಇಚ್ಛಿಸುತ್ತೀಯೋ ಆಗ, ವಿಷ್ಣು, ಶಿವ, ಬ್ರಹ್ಮನೇ ಮೊದಲಾದ ದೇವತೆಗಳನ್ನು ಸೃಷ್ಟಿಮಾಡಿ, ಅವರಿಂದ ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡಿಸುತ್ತೀಯೆ. ಹೀಗೆ ಪ್ರಪಂಚದ ಸೃಷ್ಟಿಸ್ಥಿತಿಲಯಗಳಿಗೆ ನೀನು ಕಾರಣಳಾಗಿದ್ದಾಗ್ಯೂ ನೀನು ಮಾತ್ರ ಸ್ವಲ್ಪವೂ (ನಿನಗೆ ಸಂಸಾರದಲ್ಲಿ ನಾನು, ನನ್ನದು ಎಂಬ ಅಭಿಮಾನದ ಸಂಬಂಧವಿಲ್ಲದುದರಿಂದ) ವಿಕಾರವನ್ನು ಹೊಂದದೇ ಒಂದೇ ಸಮನಾಗಿರುತ್ತೀಯೆ.

**ನ ತೇ ರೂಪಂ ವೇತ್ತುಂ ಸಕಲಭುವನೇ ಕೋಽಪಿ ನಿಪುಣೋ**
**ನ ನಾಮ್ನಾಂ ಸಂಖ್ಯಾಂ ತೇ ಕಥಿತುಮಿಹ ಯೋಗ್ಯೋಽಸ್ತಿಪುರುಷಃ ।**
**ಯದಲ್ಪಂ ಕೀಲಾಲಂ ಕಲಯಿತುಮಶಕ್ತಃ ಸ ತು ನರಃ**
**ಕಥಂ ಪಾರಾವಾರಾಕಲನಚತುರಃ ಸ್ಯಾದೃತಮತಿಃ ॥೫೯॥**

ಓ ತಾಯಿಯೇ, ನಾವೇನೋ ನಿನ್ನನ್ನು ಸ್ತೋತ್ರಮಾಡುತ್ತೇವೆಂದು ಪ್ರತಿಜ್ಞೆ ಮಾಡಿದೆವು. ಆದರೆ ಈಗ ನಿನ್ನನ್ನು ಸ್ತೋತ್ರಮಾಡುವುದಕ್ಕೂ ಸಮರ್ಥರಾಗಿಲ್ಲ. ಏಕೆಂದರೆ, ಲೋಕದಲ್ಲಿ ಒಬ್ಬನೂ ಕೂಡ ನಿನ್ನ ರೂಪವು ಸತ್ತ್ವಾದಿಗುಣಗಳಿಂದ ಕೂಡಿದುದೇ ಅಥವಾ ಗುಣಗಳಿಲ್ಲದುದೇ ಎಂಬುದನ್ನೇ ನಿಶ್ಚಯಮಾಡಲು ಸಮರ್ಥನಾಗಿಲ್ಲ. ಈ ವಿಷಯದಲ್ಲಿ "ಯಾವಳ ರೂಪವನ್ನು ಬ್ರಹ್ಮಾದಿಗಳೂ ಕೂಡ ತಿಳಿಯಲಾರರೋ ಅದರಿಂದ ನೀನು ಜನರ ಬುದ್ಧಿಯಿಂದ ತಿಳಿಯಲು ಆಗದವಳು" ಎಂಬ ಅರ್ಥವನ್ನುಳ್ಳ, 'ಕೋ ಅದ್ಧಾವೇದ' ಎಂದು ಮುಂತಾದ ಶ್ರುತಿಯೇ ಪ್ರಮಾಣವು. ಹೀಗಿರುವಲ್ಲಿ ನಿನ್ನನ್ನು ನಾವು ಹೇಗೆ ಸ್ತೋತ್ರಮಾಡಬಲ್ಲೆವು?

[ಇಲ್ಲಿ ಯಾವ ವಸ್ತುವನ್ನು ಹೇಳಲಾರದೆ ಮನಸ್ಸಿನಿಂದ ಸಹಿತವಾದ ಮಾತುಗಳು ಹಿಂತಿರುಗುತ್ತವೆ ಎಂಬ ಅರ್ಥವುಳ್ಳ 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಪ್ರಮಾಣವು.] ನಿನ್ನ ನಾಮಗಳನ್ನಾದರೂ ಉಚ್ಚಾರಮಾಡೋಣವೆಂದರೆ ನಿನ್ನ ನಾಮಗಳು ಇಷ್ಟೇ ಇವೆಯೆಂದು ನಿಶ್ಚಯಮಾಡಿ ಹೇಳುವ ಮನುಷ್ಯನು ತಾನೇ ಯಾವನು ಇದ್ದಾನೆ ? [ನಿನ್ನ ನಾಮಗಳು ಅಪಾರವಾಗಿರುವುದರಿಂದ ಅದನ್ನು ಕೂಡ ಹೇಳಿ ಮುಗಿಸಲು ಸಾಧ್ಯವಿಲ್ಲವೆಂದು ತಾತ್ಪರ್ಯವು.] ಲೋಕದಲ್ಲಿ ಪ್ರಾಮಾಣಿಕನಾದ ಯಾವನು ತಾನೇ ಸಣ್ಣದಾದ ಕೆರೆ, ಕೊಳ, ಬಾವಿ ಇವುಗಳನ್ನೇ ದಾಟಲು ಅಶಕ್ತನಾಗಿದ್ದಾಗ್ಯೂ, ದೊಡ್ಡದಾದ ಸಮುದ್ರವನ್ನು ದಾಟಲು ಸಮರ್ಥನಾಗುತ್ತಾನೆ ? ಎಂದರೆ, ಭ್ರಾಂತಿಯಿಂದ ಯಾವನಾದರೂ ಸಮುದ್ರವನ್ನು ದಾಟುತ್ತೇನೆಂದು ಹೊರಡಬಹುದು. ಸರಿಯಾದ ತಿಳಿವಳಿಕೆಯುಳ್ಳವನು ಹಾಗೆ ಹೊರಡುವುದಿಲ್ಲವೆಂದು ಅಭಿಪ್ರಾಯವು. ಸಣ್ಣದಾದ ಕೆರೆ ಕೊಳಗಳನ್ನೇ ದಾಟಲು ಆಗದಿರುವ ಮನುಷ್ಯನಿಗೆ ಹೇಗೆ ಸಮುದ್ರವನ್ನು ದಾಟುವುದು ಆಗುವುದೇ ಇಲ್ಲವೋ, ಹಾಗೆ ನಿನ್ನ ನಾಮಗಳನ್ನೇ ಕಡೆಗೆ ಅವುಗಳ ಸಂಖ್ಯೆಯನ್ನೇ ಹೇಳಲು ಸಾಧ್ಯವಿಲ್ಲದ ನಾವು ಅಪಾರವಾದ ನಿನ್ನ ರೂಪವನ್ನು ತಿಳಿಯಲಾರೆವು. ಹೀಗೆ ನಿನ್ನ ನಾಮಗಳನ್ನೂ ರೂಪಗಳನ್ನೂ ನಿಷ್ಕರ್ಷೆಯಾಗಿ ತಿಳಿಯದೇ ಇರುವುದರಿಂದ ಸ್ತೋತ್ರಮಾಡುವುದು ನಮಗೆ ಸಾಧ್ಯವಲ್ಲವೆಂದು ತಾತ್ಪರ್ಯವು. ದೇವಿಯ ನಾಮರೂಪಗಳ ಖಚಿತವಾದ ಜ್ಞಾನವಿಲ್ಲದಿದ್ದರೂ ದೇವಿಯು ಮಾಡುವ ಸೃಷ್ಟಿ ಮುಂತಾದುವನ್ನು ಅವಲಂಬಿಸಿ ಏಕೆ ಸ್ತೋತ್ರಮಾಡಲಾಗದು ? ಎಂದರೆ—

**ನ ದೇವಾನಾಂ ಮಧ್ಯೇ ಭಗವತಿ ತವಾನಂತವಿಭವಂ**
**ವಿಜಾನಾತ್ಯೇಕೋಽಪಿ ತ್ವಮಿಹ ಭುವನೈಕಾಸಿ ಜನನೀ ।**
**ಕಥಂ ಮಿಥ್ಯಾವಿಶ್ವಂ ಸಕಲಮಪಿ ಚೈಕಾ ರಚಯಸಿ**
**ಪ್ರಮಾಣಂ ತ್ವೇತಸ್ಮಿನ್ನಿಗಮವಚನಂ ದೇವಿ ವಿಹಿತಂ** ॥೬೦॥

ಓ ದೇವಿ, ನಿನ್ನ ರೂಪ ಮತ್ತು ನಾಮಗಳ ಪೂರ್ಣಜ್ಞಾನವಿಲ್ಲದಿದ್ದಾಗ್ಯೂ ಜಗತ್ತನ್ನು ಸೃಷ್ಟಿಮಾಡಲು ಬೇಕಾಗಿರುವ ಗುಣಗಳು ನಿನ್ನಲ್ಲಿರುವುದರಿಂದ ಆ ಗುಣಗಳುಳ್ಳವಳೆಂದು ನಿನ್ನನ್ನು ಸ್ತೋತ್ರಮಾಡಬಹುದಲ್ಲ ಎಂದರೆ, ಅದೂ ಸಾಧ್ಯವಿಲ್ಲ. ಏಕೆಂದರೆ, ದೇವತೆಗಳಲ್ಲಿ ಒಬ್ಬನಾದರೂ ನಿನ್ನ ಅಪಾರವಾದ ಮಹಿಮೆಯನ್ನು ತಿಳಿದಿರುವುದಿಲ್ಲ. ನೀನು ಭುವನಾ ಎಂದರೆ ಭುವನೇಶ್ವರೀ ಎಂಬ ನಾಮವನ್ನು ಧರಿಸಿರುವ ನೀನೇ ಎಲ್ಲಾ

ಲೋಕಗಳಿಗೂ ಒಬ್ಬಳೇ ತಾಯಿಯಾಗಿರುತ್ತೀಯೆ. ನೀನೊಬ್ಬಳೇ ಸತ್ಯತತ್ತ್ವವಾದುದರಿಂದ ಈ ಪ್ರಪಂಚವು ಮಿಥ್ಯಾಭೂತವಾದುದು ಎಂದರೆ ಪಾರಮಾರ್ಥಿಕವಲ್ಲದ್ದು. ಈ ಪ್ರಪಂಚವನ್ನು ನೀನು ಹೇಗೆ ಸೃಷ್ಟಿಮಾಡಿದೆ? ಎಂಬ ವಿಚಾರದಲ್ಲಿಯೂ, ಓ ದೇವಿಯೇ, ವೇದವಾಕ್ಯವೇ ಪ್ರಮಾಣವು. 'ಈ ಜಾಗ್ರತ್ಸ್ವಪ್ನಸುಷುಪ್ತಿಗಳು ಮಾಯಾಮಾತ್ರವಾದುವು' ಎಂಬ ಶ್ರುತಿವಾಕ್ಯವೇ ನೀನು ಮಿಥ್ಯಾಜಗತ್ತನ್ನು ಸೃಷ್ಟಿಮಾಡಿದ್ದೀಯೆ ಎಂಬುದಕ್ಕೆ ಪ್ರಮಾಣವು. ಎಂದರೆ ನೀನೊಬ್ಬಳೇ ಇದ್ದು ಜಗತ್ತನ್ನು ಸೃಷ್ಟಿಮಾಡಿರುತ್ತೀಯೆ ಎಂದು ಹೇಳಿದ್ದರಿಂದ ಸೃಷ್ಟಿಕಾಲದಲ್ಲಿ ಇನ್ನೊಬ್ಬರೂ ಇಲ್ಲದೆ ಇದ್ದುದರಿಂದ ನೀನು ಪ್ರಪಂಚವನ್ನು ಯಾವರೀತಿ ಸೃಷ್ಟಿಮಾಡಿದೆ ಎಂಬುದು ಯಾರಿಗೂ ಗೊತ್ತಾಗುವಹಾಗೆಯೇ ಇಲ್ಲವು. ಅದು ಗೊತ್ತಿದ್ದರಲ್ಲವೇ ನಿನ್ನನ್ನು ಸ್ತೋತ್ರಮಾಡಬಹುದು. ಆದುದರಿಂದ ನಿನ್ನನ್ನು ಸ್ತೋತ್ರಮಾಡಲು ಸಾಧ್ಯವಿಲ್ಲವೆಂದು ಅಭಿಪ್ರಾಯವು. ಏಕೆಂದರೆ ಅತಿ ಚತುರನಾದ ದೊಂಬರನನು ಬಹು ಎತ್ತರವಾದ ಗಣೆಯನ್ನು ಹತ್ತಬಲ್ಲನು. ಆದರೂ ಅವನು ತನ್ನ ಹೆಗಲನ್ನು ಮಾತ್ರ ಏರಲಾರನು. ಇದು ಹೇಗೋ ಅದರಂತೆಯೇ ಸ್ತೋತ್ರಮಾಡುವ ನಾವು ಈ ಪ್ರಪಂಚದಲ್ಲಿ ಸೇರಿರುವುದರಿಂದ ನಮ್ಮ ಕಾರಣವೂ ಪ್ರಪಂಚದಲ್ಲಿ ಸೇರಿದೆ. ಅದರ ಕಾರಣವನ್ನು ನಾವೇ ತಿಳಿಯುವುದು ಅಸಾಧ್ಯವಾದುದೆಂದು ಭಾವವು.

**ನಿರೀಹೈವಾಸಿ ತ್ವಂ ನಿಖಿಲಜಗತಾಂ ಕಾರಣಮಹೋ**
**ಚರಿತ್ರಂ ತೇ ಚಿತ್ರಂ ಭಗವತಿ ಮನೋ ನೋ ವ್ಯಥಯತಿ ।**
**ಕಥಂಕಾರಂ ವಾಚ್ಯಃ ಸಕಲನಿಗಮಾಗೋಚರಗುಣ**
**ಪ್ರಭಾವಃ ಸ್ವಂ ಯಸ್ಮಾತ್ಸ್ವಯಮಪಿ ನ ಜಾನಾಸಿ ಪರಮಂ ॥೬೧॥**

ಅಪಾರವಾದ ಮಹಿಮೆಯುಳ್ಳ ದೇವಿಯೇ, ನೀನು ಆಪ್ತಕಾಮಳು, ನೆರವೇರಿರುವ ಎಲ್ಲ ಕೋರಿಕೆಗಳುಳ್ಳವಳು, ಆದುದರಿಂದ ವಿಕಾರವನ್ನುಂಟುಮಾಡುವ ಯಾವ ವಿಧವಾದ ಇಚ್ಛಾದಿಗಳೂ ಇಲ್ಲದವಳೇ ಆಗಿರುತ್ತೀಯೆ. ಆದರೂ, ಈ ಪ್ರಪಂಚಕ್ಕೆಲ್ಲಾ ಕಾರಣಳೂ ಆಗಿರುತ್ತೀಯೆ. ಹೀಗೆ ವಿಚಿತ್ರವಾದ ಸ್ವಭಾವಸಾಮರ್ಥ್ಯವುಳ್ಳ ನಿನಗೆ ಇದು ಯುಕ್ತವಾದುದೇ ಆಗಿರುತ್ತದೆ. ಹೀಗಿರುವುದರಿಂದಲೇ ನಿನ್ನ ಚರಿತ್ರೆಯು ನಮ್ಮ ಮನಸ್ಸನ್ನು ವ್ಯಥೆಗೊಳಿಸುತ್ತದೆ. ಏಕೆಂದರೆ, ನಿನ್ನ ಅಪಾರವೂ ವಿಚಿತ್ರವೂ ಆದ ಮಹಿಮೆಯು ಪರಿಮಿತವಾದ ನಮ್ಮ ಬುದ್ಧಿಗೆ ನಿಲುಕದಂತಾಗಿರುತ್ತದೆ. ಅಲ್ಲದೆ, ಎಲ್ಲಾ ವಿಧವಾದ ವೇದಗಳಿಗೂ ಕೂಡ ನಿಲುಕದ, ಅವುಗಳಿಂದಲೂ ವರ್ಣಿಸಲಾಗದ,

ನಿನ್ನ ಗುಣಗಳ ಮಹಿಮೆಯನ್ನು ನಾವು ಹೇಳಲು ಹೇಗೆ ಸಮರ್ಥರಾದೇವು? ನಾವು ತಿಳಿದುಕೊಳ್ಳುವುದಂತೂ ಇರಲಿ, ನಿನ್ನ ಅನಿರ್ವಚನೀಯವಾದ ಎಂದರೆ ಹೀಗಿರುವುದೆಂದು ಹೇಳಲಸವಳವಾದ ಉತ್ತಮವಾದ ನಿನ್ನ ಮಹಿಮೆಯನ್ನು ನೀನೇ ತಿಳಿಯಬಲ್ಲೆ ಎಂದೂ ಹೇಳಲಾಗುವುದಿಲ್ಲವು. ಏಕೆಂದರೆ ಆಗ ಅದು ಬುದ್ಧಿಗೋಚರ ವಾಗಬಲ್ಲದ್ದಾದೀತು. ಹೀಗಿರುವಲ್ಲಿ ನಾವು ಹೇಗೆ ತಾನೇ ನಿನ್ನನ್ನು ಸ್ತೋತ್ರಮಾಡ ಬಲ್ಲೆವು? ನಮ್ಮ ಬುದ್ಧಿಗಿಂತ ನಿನ್ನ ಬುದ್ಧಿಯು ಮಿಗಿಲಾದುದು, ನಿಜ. ಆದರೂ ನಿನ್ನ ಸಗುಣರೂಪವು ನಿರ್ಗುಣರೂಪಕ್ಕಿಂತ ಕಡಿಮೆಯಾದುದೆಂಬುದು ಖಚಿತವಾ ದುದು. ಹೀಗಿದ್ದರೂ ಇದರಲ್ಲಿ ವಿರೋಧವಿಲ್ಲವು. ಹೇಗೆಂದರೆ, ಸಮಾನವಾದ ಸತ್ಯ ತೆಯುಳ್ಳ ಎರಡು ಅಂಶಗಳು ಒಂದೆಡೆಯಲ್ಲಿ ಒಂದೇ ಕಾಲದಲ್ಲಿದ್ದರೆ ವಿರೋಧವು. ದೇವಿಯ ಸಗುಣವಾದ ನಾಮರೂಪಶಕ್ತಿಗಳೂ ಅವಳ ನಿರ್ಗುಣಪರತತ್ತ್ವದ ದೃಷ್ಟಿ ಯಿಂದ ವ್ಯಾವಹಾರಿಕವೂ ಮಿಥ್ಯಾಭೂತವೂ ಆಗಿರುತ್ತವೆ. ರಜ್ಜುಸರ್ಪದಂತೆ ಸತ್ಯ-ಮಿಥ್ಯಾ ಎಂಬ ಎರಡು ಬಗೆಯ ಸತ್ಯತೆಯುಳ್ಳವೇ ಒಟ್ಟಿಗಿದ್ದಹಾಗಾಗಿ ವಿರೋಧವಿಲ್ಲ ನೆಂದು ತಾತ್ಪರ್ಯವು. ಈ ವಿಚಾರದಲ್ಲಿ ' ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ ಸೋ ಅಂಗವೇದ ಯದಿವಾ ನವೇದ '' ಇತ್ಯಾದಿ ವೇದವಾಕ್ಯಗಳೇ ಪ್ರಮಾಣಗಳು.

**ನ ಕಿಂ ಜಾನಾಸಿ ತ್ವಂ ಜನನಿ ಮಧುಜಿನ್ಮೌಳಿಪತನಂ**
**ಶಿವೇ ಕಿಂ ವಾ ಜ್ಞಾತ್ವಾ ವಿವಿದಿಷಸಿ ಶಕ್ತಿಂ ಮಧುಜಿತಃ ।**
**ಹರೇಃ ಕಿಂ ವಾ ಮಾತರ್ದುರಿತತತಿರೇಷಾ ಬಲವತೀ**
**ಭವತ್ಯಾಃ ಪಾದಾಬ್ಜೇ ಭಜನನಿಪುಣೇ ಕ್ವಾಸ್ತಿ ದುರಿತಂ** ॥೬೨॥

ಓ ತಾಯಿಯೇ, ನಿನಗೆ ಈ ವಿಷ್ಣುವಿನ ತಲೆಯು ಬಿದ್ದುಹೋಗಿರುವುದು ಗೊತ್ತಿಲ್ಲವೇ ? ಮಂಗಳಕರಳೇ, ತಿಳಿದಿದ್ದರೂ ವಿಷ್ಣುವಿನ ಶಕ್ತಿಯನ್ನು ಪರೀಕ್ಷಿಸುತ್ತಿ ರುವೆಯಾ ? ಹಾಗೆ ಪರೀಕ್ಷಿಸಬೇಡ. ಅವನು ನಿನ್ನ ಅನುಗ್ರಹದಿಂದಲೇ ಮಧು ಎಂಬ ರಾಕ್ಷಸನನ್ನು ಸಂಹಾರಮಾಡಿರುತ್ತಾನೆ. ಹೀಗೆ ನೀನು ಉಪೇಕ್ಷೆಮಾಡುವುದು ಯುಕ್ತ ವಲ್ಲವು. ಅಥವಾ ವಿಷ್ಣುವಿನ ಪಾಪರಾಶಿಯಿಂದಲೇನಾದರೂ ಹೀಗಾಗಿರಬಹುದೇ ಎಂದರೆ ಅದೂ ಯುಕ್ತವಲ್ಲ. ಯಾವಾಗಲೂ ನಿನ್ನ ಪಾದಕಮಲಗಳನ್ನು ಸೇವಿಸುತ್ತಿ ರುವವನಿಗೆ ಪಾಪವೆಂಬುದು ಎಲ್ಲಿರುವುದು ? " ಭಿತ್ವಾ ಭಿತ್ವಾ ಚ ಭೂತಾನಿ ಹತ್ವಾ ಸರ್ವಮಿದಂ ಜಗತ್ । ದೇವೀಂ ನಮತಿ ಭಕ್ತ್ಯಾ ಯೋ ನ ಸ ಪಾಪೈಃ ಪ್ರಲಿಪ್ಯತೇ ॥ '' ಎಂದು ಹೇಳಿರುವುದರಿಂದ ನಿನ್ನ ಭಕ್ತರಿಗೆ ಪಾಪವೆಂಬುದಿಲ್ಲವೇ ಇಲ್ಲವು.

**ಉಪೇಕ್ಷಾ ಕಿಂ ಚೇಯಂ ತವ ಸುರಸಮೂಹೇಽತಿವಿಷಮಾ**
**ಹರೇರ್ಮೂರ್ಧ್ನೋ ನಾಶೋ ಮತಮಿಹ ಮಹಾಶ್ಚರ್ಯಜನಕಂ ।**
**ಮಹದ್ದುಃಖಂ ಮಾತಸ್ತ್ವಮಸಿ ಜನನಚ್ಛೇದಕುಶಲಾ**
**ನ ಜಾನೀಮೋ ಮೌಲೇರ್ವಿಘಟನವಿಲಂಬಃ ಕಥಮಭೂತ್ ॥೬೩॥**

ಓ ತಾಯಿಯೇ, ನೀನು ದೇವತೆಗಳ ಸಮೂಹದಲ್ಲಿ ಉದಾಸೀನಭಾವವನ್ನು ತಾಳಿ ಹೀಗೆ ಸುಮ್ಮನೆ ಇರುವೆಯಾ? ಅಥವಾ ತಲೆಯಿಲ್ಲದ ಶರೀರವನ್ನು ನೋಡಲು ಚಮತ್ಕಾರವಾಗಿರುವುದರಿಂದ ಅದನ್ನು ನೋಡುವುದಕ್ಕಾಗಿ ಹೀಗೆ ಸುಮ್ಮನೆ ಇರುವೆಯಾ? ಯಾವ ರೀತಿಯಿಂದಲೇ ಆಗಲಿ ನೀನು ಸುಮ್ಮನೆ ಇದ್ದು ನಮ್ಮನ್ನು ಉಪೇಕ್ಷೆಮಾಡುವುದು ನಮಗೆ ಬಹಳ ದುಃಖವನ್ನುಂಟುಮಾಡುತ್ತಲಿದೆ. [ನಮ್ಮೆಲ್ಲರಿಗೂ ನೀನೇ ಆಶ್ರಯಳಾಗಿರುತ್ತೀಯೆ. ಹೀಗಿರುವ ನೀನು ಉಪೇಕ್ಷೆಮಾಡಿದರೆ ನಾವು ಬದುಕುವ ಹಾಗೇ ಇಲ್ಲವೆಂದು ತಾತ್ಪರ್ಯವು.] ನೀನಾದರೋ ಎಲ್ಲಾ ಪ್ರಾಣಿಗಳ ಹುಟ್ಟನ್ನೇ ತಪ್ಪಿಸುವಷ್ಟು ಎಂದರೆ ಮೋಕ್ಷವನ್ನೂ ಅನುಗ್ರಹಿಸುವಷ್ಟು ಸಮರ್ಥಳು. ಹೀಗಿದ್ದರೂ ವಿಷ್ಣುವಿನ ಬಿದ್ದುಹೋಗಿರುವ ತಲೆಯನ್ನು ಪುನಃ ಸೇರಿಸಲು ಏಕೆ ಇಷ್ಟು ಸಾವಕಾಶಮಾಡುತ್ತಿರುವಿ, ಎಂಬುದು ನಮಗೆ ತಿಳಿಯುವುದಿಲ್ಲ. [ನೀನು ಈ ಸಮಯದಲ್ಲಿ ಸ್ವಲ್ಪವೂ ಉದಾಸೀನ ಮಾಡುವುದು ಯೋಗ್ಯವಲ್ಲವೆಂದು ಭಾವವು.]

**ಜ್ಞಾತ್ವಾ ದೋಷಂ ಸಕಲಸುರತಾಪಾದಿತಂ ದೇವಿ ಚಿತ್ತೇ**
**ಕಿಂ ವಾ ವಿಷ್ಣಾವಮರಜನಿತಂ ದುಷ್ಕೃತಂ ಪಾತಿತಂ ತೇ ॥**
**ವಿಷ್ಣೋರ್ವಾ ಕಿಂ ಸಮರಜನಿತಃ ಕೋಽಪಿ ಗರ್ವೋಽತಿವೇಗಾ-**
**ಚ್ಛೇತ್ತುಂ ಮಾತಸ್ತವ ವಿಲಸಿತಂ ನೈವ ವಿದ್ಮೋಽತ್ರ ಭಾವಂ ॥೬೪॥**

ಅಥವಾ ನೀನು ದೇವತೆಗಳು ಮಾಡಿರುವ ತಪ್ಪುಗಳನ್ನೆಲ್ಲಾ ಮನಸ್ಸಿನಲ್ಲಿ ಇಟ್ಟುಕೊಂಡಿದ್ದು ಅವರಿಗೆ ಸರಿಯಾದ ಶಿಕ್ಷೆಯನ್ನು ಮಾಡಬೇಕೆಂದು ಉದ್ದೇಶಿಸಿ ಹೀಗೆ ಮಾಡಿರುವೆಯಾ? [ಇಲ್ಲಿ ಪ್ರಜೆಗಳನ್ನು ಕಾಪಾಡುತ್ತಿದ್ದ ರಾಜನನ್ನು ಸಂಹಾರಮಾಡುವುದರಿಂದ ಅಂಥ ರಾಜನಿಲ್ಲದೆ ಪ್ರಜೆಗಳಿಗೆ ಹೇಗೆ ದುಃಖವುಂಟಾಗುತ್ತದೆಯೋ ಅದರಂತೆ ನಮ್ಮ ಪ್ರಭುವಾದ ವಿಷ್ಣುವನ್ನು ನಾಶಮಾಡಿದರೆ ತಪ್ಪಿತಸ್ಥರಾದ ನಮಗೆ ಶಿಕ್ಷೆಮಾಡಿದಹಾಗಾಯಿತು ಎಂದು ಭಾವಿಸಿರುವೆಯಾ? ಎಂದು ಅಭಿಪ್ರಾಯವು]

ಹಾಗಲ್ಲದಿದ್ದರೆ "ಪ್ರಜಾಕೃತಂ ಪಾಪಂ ರಾಜನಿ" ಎಂಬ ನ್ಯಾಯದಂತೆ ನಾವು ಮಾಡಿದ ತಪ್ಪನ್ನು ವಿಷ್ಣುವಿನ ಮೇಲೆ ಹೊರಿಸಿ ಅವನನ್ನು ಸಂಹರಿಸಿರುವೆಯಾ? ಅಥವಾ ವಿಷ್ಣುವಿಗೆ ನಾನು ಯುದ್ಧದಲ್ಲಿ ಜಯಿಸಿದೆನು ಎಂಬುದಾಗಿ ಬಂದಿರುವ ಅಹಂಕಾರವನ್ನು ಪರಿಹಾರಮಾಡುವುದಕ್ಕಾಗಿ ಹೀಗೆ ಮಾಡಿರುವೆಯಾ? ಹೇಗಾದರೂ ನೀನು ವಿಷ್ಣುವಿನ ತಲೆಯನ್ನು ಕತ್ತರಿಸುವುದಕ್ಕೆ ಕಾರಣವಾಗಿರುವ ನಿನ್ನ ಉದ್ದೇಶವನ್ನು ನಾವು ತಿಳಿಯಲಾರೆವು.

**ಕಿಂ ವಾ ದೈತ್ಯೈಃ ಸಮರವಿಜಿತೈಸ್ತೀರ್ಥದೇಶೇ ಸುರಮ್ಯೇ**
**ಘೋರಂ ತಪ್ತ್ವಾ ಭಗವತಿ ವರಂ ಲಬ್ಧವದ್ಭಿರ್ಭವತ್ಯಾಃ ।**
**ಅಂತರ್ಧಾನಂ ಗಮಿತಮಧುನಾ ವಿಷ್ಣುಶೀರ್ಷಂ ಭವಾನಿ**
**ದ್ರಷ್ಟುಂ ಕಿಂ ವಾ ವಿಗತಶಿರಸಂ ವಾಸುದೇವಂ ವಿನೋದಃ** ॥೬೫॥

ಓ ಪೂಜ್ಯಳಾದ ದೇವಿಯೇ, ಯುದ್ಧಮಾಡಿ ಸೋತಿರುವ ರಾಕ್ಷಸರು ಬಹಳ ಮನೋಹರವಾದ ಪರಿಶುದ್ಧವಾದ ಕ್ಷೇತ್ರದ ಸ್ಥಳದಲ್ಲಿ ತಪಸ್ಸುಮಾಡಿ ನಿನ್ನಿಂದ ವರವನ್ನು ಪಡೆದು ಅದರ ಮಹಿಮೆಯಿಂದ ಆ ರಾಕ್ಷಸರು ಬಂದು ಈ ವಿಷ್ಣುವಿನ ತಲೆಯನ್ನೇನಾದರೂ ಕಾಣದಹಾಗೆ ಅಪಹಾರಮಾಡಿರುವರೇ? ಅಥವಾ ತಲೆಯಿಲ್ಲದ ಈ ವಿಷ್ಣುವನ್ನು ನೋಡುವುದು ನಿನಗೆ ಆಟವಾಗಿ ಇದೆಯೇ?

**ಸಿಂಧೋಃ ಪುತ್ರ್ಯಾಂ ರೋಷಿತಾ ಕಿಂ ತ್ವಮಾದ್ಯೇ**
**ಕಸ್ಮಾದೇನಾಂ ಪ್ರೇಕ್ಷಸೇ ನಾಥಹೀನಾಂ ।**
**ಕ್ಷಂತವ್ಯಸ್ತೇ ಸ್ವಾಂಶಜಾತಾಪರಾಧೋ**
**ವ್ಯುತ್ಥಾಪ್ಯೈನಂ ಮೋದಿತಾಂ ಮಾಂ ಕುರುಷ್ವ** ॥೬೬॥

ಎಲ್ಲಾ ವಸ್ತುಗಳಿಗೂ ಆದಿಯಾದವಳೇ, ನೀನು ಸಮುದ್ರರಾಜನ ಮಗಳಾದ ಲಕ್ಷ್ಮಿಯಲ್ಲಿ ಕೋಪಗೊಂಡು ಹೀಗೆ ಮಾಡಿರುವೆಯಾ? ಏಕೆಂದರೆ, ಪತಿಹೀನಳಾದ ಅವಳನ್ನು ನೀನು ಈಗ ನೋಡುತ್ತಿರುವೆಯಲ್ಲಾ! ಹಾಗೆ ಲಕ್ಷ್ಮಿಯು ಮಾಡಿರಬಹುದಾದ ಅಪರಾಧವಾದರೂ ಏನು? ಹಾಗೆ ಮಾಡಿದ್ದರೂ ನಿನ್ನ ಅಂಶಭೂತಳಾದ ಅವಳಲ್ಲಿ ಕೋಪಮಾಡುವುದು ನಿನಗೆ ಯುಕ್ತವಲ್ಲವು. ಆದುದರಿಂದ ಈಗ ಅವಳ ಅಪರಾಧವನ್ನು ಕ್ಷಮಿಸಿ ವಿಷ್ಣುವನ್ನು ಎಬ್ಬಿಸಿ ಆ ಲಕ್ಷ್ಮಿಯನ್ನು ಸಂತೋಷವುಳ್ಳವಳನ್ನಾಗಿ ಮಾಡು.

ಏತೇ ಸುರಾಸ್ತ್ವಾಂ ಸತತಂ ನಮಂತಿ
ಕಾರ್ಯೇಷು ಮುಖ್ಯಾಃ ಪ್ರಥಿತಪ್ರಭಾವಾಃ ।
ಶೋಕಾರ್ಣವಾತ್ತಾರಯ ದೇವಿ ದೇವಾ-
ಸುತ್ಥಾಪ್ಯ ದೇವಂ ಸಕಲಾಧಿನಾಥಂ ॥೬೭॥

ಹೇ ದೇವಿ, ನಿನ್ನ ಸೃಷ್ಟಿಕಾರ್ಯದಲ್ಲಿ ಮುಖ್ಯ ಅಧಿಕಾರಿಗಳಾದ ಈ ದೇವತೆಗಳು ನಿನಗೆ ಯಾವಾಗಲೂ ನಮಸ್ಕಾರಮಾಡಿ ವಿಧೇಯರಾಗಿರುತ್ತಾರೆ. ಅವರು ನಿನ್ನ ಅನುಗ್ರಹದಿಂದಲೇ ಪ್ರಸಿದ್ಧವಾದ ಮಹಿಮೆಯುಳ್ಳವರಾಗಿರುತ್ತಾರೆ. ಎಲ್ಲಾ ವಸ್ತುಗಳಿಗೂ ಒಡೆಯನಾದ ವಿಷ್ಣುವನ್ನು ಎಬ್ಬಿಸಿ ದೇವತೆಗಳನ್ನು ದುಃಖಸಮುದ್ರದಿಂದ ದಾಟಿಸುವವಳಾಗು.

ಮೂರ್ಧಾ ಗತಃ ಕ್ವಾಂಬ ಹರೇರ್ನ ವಿದ್ಮೋ
ನಾನ್ಯೋಽಸ್ತ್ಯುಪಾಯಃ ಖಲು ಜೀವನೇಽದ್ಯ ।
ಯಥಾ ಸುಧಾ ಜೀವನಕರ್ಮದಕ್ಷಾ
ತಥಾ ಜಗಜ್ಜೀವಿತದಾಽಸಿ ದೇವಿ ॥೬೮॥

ಓ ತಾಯಿಯೇ, ವಿಷ್ಣುವಿನ ತಲೆಯು ಎಲ್ಲಿ ಹೋಯಿತೆಂಬುದೇ ನಮಗೆ ಗೊತ್ತಿಲ್ಲವು. ಹೀಗಿರುವಲ್ಲಿ ಅದು ತಿಳಿದಹೊರತು ಬೇರೆ ಉಪಾಯವನ್ನು ಮಾಡಿ ನಾವು ಈಗ ವಿಷ್ಣುವನ್ನು ಬದುಕಿಸುವುದೆಂಬುದು ನಮಗೆ ಸಾಧ್ಯವೇ ಅಲ್ಲವು. ಆ ವಿಷ್ಣುವು ಬದುಕಿದ ವಿನಾ ನಾವು ಬದುಕುವ ಹಾಗಿಲ್ಲ. ಆದುದರಿಂದ ಹೇ ದೇವಿ, ಅಮೃತವು ಹೇಗೆ ದೇವತೆಗಳಿಗೆ ಪ್ರಾಣವನ್ನು ಕೊಡುವುದರಲ್ಲಿ, ಬದುಕಿಸುವುದರಲ್ಲಿ, ಸಾಮರ್ಥ್ಯವುಳ್ಳದ್ದೋ ಅದರಂತೆಯೇ ಲೋಕವನ್ನೇ ಬದುಕಿಸುವ ಸಾಮರ್ಥ್ಯವುಳ್ಳವಳಾದ ನೀನೇ ಈ ವಿಷ್ಣುವನ್ನೂ ಬದುಕಿಸಲು ಸಮರ್ಥಳೂ ಆಗಿರುತ್ತೀಯೆ, ಎಂದು ತಾತ್ಪರ್ಯವು.

॥ ಸೂತ ಉವಾಚ ॥

ಏವಂ ಸ್ತುತಾ ತದಾ ದೇವೀ ಗುಣಾತೀತಾ ಮಹೇಶ್ವರೀ ।
ಪ್ರಸನ್ನಾ ಪರಮಾ ಮಾಯಾ ವೇದೈಃ ಸಾಂಗೈಶ್ಚ ಸಾಮಗೈಃ ॥೬೯॥

ತಾನುವಾಚ ತದಾ ವಾಣೀ ಚಾಕಾಶಸ್ಥಾಽಶರೀರಿಣೀ ।
ದೇವಾನ್ ಪ್ರತಿ ಸುಖೈಃ ಶಬ್ದೈರ್ಜನಾನಂದಕರೀ ಶುಭಾ ॥೭೦॥

ಸೂತನು ಹೇಳುತ್ತಾನೆ--- ಓ ಋಷಿಗಳಿರಾ ಈ, ರೀತಿಯಾಗಿ ಶಿಕ್ಷಾ ಮುಂತಾದ ಅಂಗಗಳಿಂದ ಸಹಿತವಾದ ವೇದದ ಮಂತ್ರಗಳಿಂದಲೂ, ಸಾಮಮಂತ್ರಗಳ ಗಾನಗಳಿಂದಲೂ, ಸ್ತೋತ್ರಮಾಡಲ್ಪಟ್ಟ, ಸತ್ತ್ವಾದಿಗುಣಗಳಿಗೆ ಮೀರಿ ಅವುಗಳ ಲೇಪವಿಲ್ಲದ, ಎಲ್ಲ ಪ್ರಪಂಚಕ್ಕೂ ದೊಡ್ಡ ಒಡೆಯಳಾದ, ಮಹಾಮಾಯಾಸ್ವರೂಪಳಾದ ಆ ದೇವಿಯು ಸಂತೋಷಪಟ್ಟವಳಾದಳು. ಅನಂತರದಲ್ಲಿ ಜನಗಳಿಗೆ ಸಂತೋಷವನ್ನುಂಟುಮಾಡುವ ಮಂಗಳಕರಳಾದ ಆ ವಾಗ್ದೇವತೆಯು ಶರೀರವನ್ನು ಧರಿಸದೆ ಆಕಾಶದಲ್ಲಿಯೇ ಇದ್ದು ದೇವತೆಗಳನ್ನು ಕುರಿತು ಕೇಳಲು ಹಿತವಾಗಿರುವ ಶಬ್ದಗಳಿಂದ ಕೂಡಿರುವಂತೆ ಶರೀರವಿಲ್ಲದ ಆಕಾಶವಾಣಿಯಿಂದ ಈ ರೀತಿಯಾಗಿ ಹೇಳಿದಳು.

**ಮಾ ಕುರುಧ್ವಂ ಸುರಾಶ್ಚಿಂತಾಂ ಸ್ವಸ್ಥಾಸ್ತಿಷ್ಠಂತು ಚಾಮರಾಃ ।**
**ಸ್ತುತಾಹಂ ನಿಗಮೈಃ ಕಾಮಂ ಸಂತುಷ್ಟಾಸ್ಮಿ ನ ಸಂಶಯಃ ॥೭೧॥**

ಓ ದೇವತೆಗಳಿರಾ, ನೀವು ಸ್ವಲ್ಪವೂ ಯೋಚನೆಯನ್ನು ಮಾಡಬೇಡಿರಿ. ಮೊದಲಿನಂತೆಯೇ ಸುಖವಾಗಿ ಇರಿ. ಈ ವೇದಾರ್ಥವನ್ನೇ ತಿಳಿಸುವ ವಾಕ್ಯಗಳಿಂದ ನೀವು ಮಾಡಿದ ಸ್ತೋತ್ರದಿಂದ ನಾನು ಸಂತೋಷಪಟ್ಟಿರುವೆನು. ಈ ಅಂಶದಲ್ಲಿ ಸಂದೇಹವಿಲ್ಲವು.

**ಯಃ ಪುಮಾನ್ ಮಾನುಷೇ ಲೋಕೇ ಸ್ತೌತ್ಯೇತಾಂ ಮಾಮಕೀಂ ಸ್ತುತಿಂ ।**
**ಪಠಿಷ್ಯತಿ ಸದಾ ಭಕ್ತ್ಯಾ ಸರ್ವಾನ್ಕಾಮಾನವಾಪ್ನುಯಾತ್ ॥೭೨॥**

ಭೂಲೋಕದಲ್ಲಿ ವಾಸಮಾಡುವ ಯಾವ ಮನುಷ್ಯನು ಈ ನನ್ನ ಸ್ತೋತ್ರವನ್ನು ಭಕ್ತಿಯಿಂದ ಸದಾ ಪಠನಮಾಡುತ್ತಿರುತ್ತಾನೆಯೋ ಅವನು ತನ್ನ ಎಲ್ಲಾ ಇಷ್ಟಾರ್ಥಗಳನ್ನೂ ಹೊಂದುತ್ತಾನೆ.

**ಶೃಣೋತಿ ವಾ ಸ್ತೋತ್ರಮಿದಂ ಮದೀಯಂ**
**ಭಕ್ತ್ಯಾ ತ್ರಿಕಾಲಂ ಸತತಂ ನರೋ ಯಃ ।**
**ವಿಮುಕ್ತದುಃಖಃ ಸ ಭವೇತ್ಸುಖೀ ಚ**
**ವೇದೋಕ್ತಮೇತನ್ನನು ವೇದತುಲ್ಯಂ ॥೭೩॥**

ವೇದಗಳಲ್ಲಿ ಹೇಳಿರುವುದರಿಂದ ವೇದಗಳಿಗೆ ಸಮಾನವಾದ ಈ ನನ್ನ ಸ್ತೋತ್ರವನ್ನು ಯಾರು ಬೆಳಗ್ಗೆ ಮಧ್ಯಾಹ್ನ ಸಾಯಂಕಾಲಗಳಲ್ಲಿ ಭಕ್ತಿಯಿಂದ ಕೇಳುತ್ತಾರೆಯೋ ಅವರು ಎಲ್ಲಾ ದುಃಖಗಳಿಂದಲೂ ಬಿಡಲ್ಪಟ್ಟು ಸುಖವುಳ್ಳವರಾಗುತ್ತಾರೆ.

**ಶೃಣ್ವಂತು ಕಾರಣಂ ಚಾದ್ಯ ಯದ್ಗತಂ ವದನಂ ಹರೇಃ ।**
**ಅಕಾರಣಂ ಕಥಂ ಕಾರ್ಯಂ ಸಂಸಾರೇಽತ್ರ ಭವಿಷ್ಯತಿ ॥೭೪॥**

ಆ ವಿಷ್ಣುವಿನ ತಲೆಯು ಹೋಗುವುದಕ್ಕೆ ಕಾರಣವನ್ನು ಈಗ ಹೇಳುತ್ತೇನೆ, ಕೇಳಿರಿ. ಈ ಪ್ರಪಂಚದಲ್ಲಿ ಕಾರಣವಿಲ್ಲದೆ ಯಾವ ಕಾರ್ಯವೂ ಹೇಗುಂಟಾದೀತು?

**ಉದಧೇಸ್ತನಯಾಂ ವಿಷ್ಣುಃ ಸಂಸ್ಥಿತಾಮಂತಿಕೇ ಪ್ರಿಯಾಂ ।**
**ಜಹಾಸ ವದನಂ ವೀಕ್ಷ್ಯ ತಸ್ಯಾಸ್ತತ್ರ ಮನೋರಮಂ ॥೭೫॥**

ಹಿಂದೆ ಒಂದು ದಿನದಲ್ಲಿ ಈ ವಿಷ್ಣುವು ತನಗೆ ಪ್ರಿಯಳಾಗಿ ಸಮೀಪದಲ್ಲಿರುವ ಸಮುದ್ರರಾಜನ ಮಗಳಾದ ಲಕ್ಷ್ಮಿಯ ಸುಂದರವಾದ ಮುಖವನ್ನು ನೋಡಿ ನಕ್ಕನು.

**ತಯಾ ಜ್ಞಾತಂ ಹರಿರ್ನೂನಂ ಕಥಂ ಮಾಂ ಹಸತಿ ಪ್ರಭುಃ ।**
**ವಿರೂಪಂ ಹರಿಣಾ ದೃಷ್ಟಂ ಮುಖಂ ಮೇ ಕೇನ ಹೇತುನಾ ॥೭೬॥**

ಆಗ ಆ ಲಕ್ಷ್ಮಿಯು ಅದನ್ನು ತಿಳಿದಳು ಮತ್ತು ಹೀಗೆ ಯೋಚಿಸಿದಳು. ಈ ವಿಷ್ಣುವು ನನ್ನನ್ನು ನೋಡಿ ನಗುತ್ತಿದ್ದಾನೆ, ಇದು ನಿಜವು. ಹಾಗಿಲ್ಲದಿದ್ದರೆ ನನ್ನ ಮುಖವನ್ನು ಅಣಕಿಸುವ ಹಾಗೆ ಏಕೆ ನೋಡಿದನು? ಇದುವರೆಗೆ ಎಂದೂ ನನ್ನ ಮುಖವನ್ನು ನೋಡಿ ನಗದಿದ್ದ ವಿಷ್ಣುವು ಈಗ ನನ್ನನ್ನು ನೋಡಿ ಏತಕ್ಕೆ ನಕ್ಕನು? ಯೋಚಿಸಿ ನೋಡಿದರೆ ಏನೋ ವಿಕಾರವನ್ನು ನನ್ನ ಮುಖದಲ್ಲಿ ಕಂಡು ಯಾವುದೋ ಕಾರಣದಿಂದ ಇವನು ನಗುತ್ತಿದ್ದಾನೆ.

**ವಿನಾಪಿ ಕಾರಣೇನಾದ್ಯ ಕಥಂ ಹಾಸ್ಯಸ್ಯ ಸಂಭವಃ ।**
**ಸಪತ್ನೀ ವಾ ಕೃತಾ ತೇನ ಮನ್ಯೇಽನ್ಯಾ ವರವರ್ಣಿನೀ ॥೭೭॥**

ಯಾವ ಕಾರಣವೂ ಇಲ್ಲದೆ ನಗುವು ಹೇಗೆ ಉಂಟಾಗುವುದು? ಅಥವಾ ನನಗೆ ಸವತಿಯಾಗುವ ಸುಂದರಿಯಾದ ಮತ್ತೊಬ್ಬಳನ್ನು ಹೆಂಡತಿಯಾಗಿ ಮಾಡಿರಬಹುದೇ?

**ತತಃ ಕೋಪಯುತಾ ಜಾತಾ ಮಹಾಲಕ್ಷ್ಮೀಸ್ತಮೋಗುಣಾ ।**
**ತಾಮಸೀ ತು ತದಾ ಶಕ್ತಿಸ್ತಸ್ಯಾ ದೇಹೇ ಸಮಾವಿಶತ್ ॥೭೮॥**

ಅನಂತರದಲ್ಲಿ ಲಕ್ಷ್ಮಿಯು ತಮೋಗುಣದ ಆವೇಶದಿಂದ ಕೂಡಿದವಳಾಗಿ ಬಹಳ ಕೋಪಗೊಂಡಳು. ಅವಳು ಕೋಪಗೊಂಡಿದ್ದ ಸಮಯದಲ್ಲಿ ತಮೋಗುಣವೇ ಮುಂದಾಗಿರುವ ಮಾಯಾಶಕ್ತಿಯು ಅವಳ ಶರೀರವನ್ನು ಆವರಿಸಿತು.

**ಕೇನಚಿತ್ಕಾಲಯೋಗೇನ ದೇವಕಾರ್ಯಾರ್ಥಸಿದ್ಧಯೇ ।**
**ಪ್ರವಿಷ್ಟಾ ತಾಮಸೀ ಶಕ್ತಿಸ್ತಸ್ಯಾ ದೇಹೇಽತಿದಾರುಣಾ ॥೭೯॥**

ದೇವತೆಗಳ ಕಾರ್ಯವನ್ನು ಸಾಧಿಸುವುದಕ್ಕಾಗಿ ಯಾವದೋ ಒಂದು ಕಾಲ ಸಂಬಂಧದಿಂದ ಬಹಳ ಕ್ರೂರವಾದ, ತಮೋಗುಣಪ್ರಧಾನವಾದ ಆದಿಶಕ್ತಿಯು ಅವಳ ಶರೀರದಲ್ಲಿ ಪ್ರವೇಶಿಸಿ ಅಧಿಕಾರಮಾಡತೊಡಗಿತು.

**ತಾಮಸ್ಯಾವಿಷ್ಟದೇಹಾ ಸಾ ಚುಕೋಪಾತಿಶಯಂ ತದಾ ।**
**ಶನಕೈಃ ಸಮುವಾಚೇದಮಿದಂ ಪತತು ತೇ ಶಿರಃ ॥೮೦॥**

ತಮೋಗುಣವೇ ಹೆಚ್ಚು ಪ್ರಬಲವಾಗಿರುವ ಆ ಶಕ್ತಿಯಿಂದ ಆವಿಷ್ಟವಾದ ಶರೀರವುಳ್ಳ ಲಕ್ಷ್ಮಿಯು ಬಹಳ ಕೋಪವುಳ್ಳವಳಾದಳು. ಅಲ್ಲದೆ ಆ ಕೋಪದಿಂದ ಈ ನಿನ್ನ ತಲೆಯು ಬಿದ್ದುಹೋಗಲಿ ಎಂದೂ ಮೆಲ್ಲಗೆ ನುಡಿದಳು.

**ಸ್ತ್ರೀಸ್ವಭಾವಾಚ್ಚ ಭಾವಿತ್ವಾತ್ಕಾಲಯೋಗಾದ್ವಿನಿರ್ಗತಃ ।**
**ಅವಿಚಾರ್ಯ ತದಾ ದತ್ತಃ ಶಾಪಃ ಸ್ವಸುಖನಾಶನಃ ॥೮೧॥**

ಹೆಂಗಸರ ಸ್ವಭಾವದಿಂದಲೂ [ಎಂದರೆ ವಿಚಾರಮಾಡದೆ ಕೆಲಸಕ್ಕೆ ಮುಂದು ವರಿಯುವುದು ಹೆಂಗಸರ ಸ್ವಭಾವ] ಮುಂದೆ ಕಾಲಾನುಸಾರವಾಗಿ ಆಗಬೇಕಾಗಿದ್ದು ದಕ್ಕೆ ಅನುಗುಣವಾಗಿಯೂ, ತನ್ನ ಸುಖವನ್ನೇ ನಾಶಮಾಡುವ ಇಂತಹ ಶಾಪ ವಾಕ್ಯವು ಹಿಂದುಮುಂದು ವಿಚಾರಿಸದೆ ಪರವಶಳಾಗಿದ್ದ ಆ ಲಕ್ಷ್ಮಿಯಿಂದ ಹೊರಟಿತು.

**ಸಪತ್ನೀಸಂಭವಂ ದುಃಖಂ ವೈಧವ್ಯಾದಧಿಕಂ ಸ್ಮೃತಿ ।**
**ವಿಚಿಂತ್ಯ ಮನಸೇತ್ಯುಕ್ತಂ ತಾಮಸೀಶಕ್ತಿಯೋಗತಃ ॥೮೨॥**

ಸವತಿಯರಿಂದುಂಟಾಗುವ ದುಃಖವು ವೈಧವ್ಯದುಃಖ [ಗಂಡನು ಸಾಯುವಾಗಲೂ ಸತ್ತಮೇಲೂ ಆಗುವ ದುಃಖ] ಕ್ಕಿಂತಲೂ ಹೆಚ್ಚಾದುದೆಂದು ತಿಳಿದಿದ್ದುದರಿಂದಲೂ, ತಮೋಗುಣದ ಆವೇಶದಿಂದ ಕೂಡಿದ ಆಶಕ್ತಿಯ ಸಂಬಂಧದಿಂದಲೂ ಆ ಲಕ್ಷ್ಮಿಯು ಈ ರೀತಿಯಾಗಿ ಯೋಚಿಸಿ ಮನಸ್ಸಿನಿಂದ ಮೆಲ್ಲಗೆ ಹೇಳಿದಳು.

**ಅನೃತಂ ಸಾಹಸಂ ಮಾಯಾ ಮೂರ್ಖತ್ವಮತಿಲೋಭತಾ ।**
**ಅಶೌಚಂ ನಿರ್ದಯತ್ವಂ ಚ ಸ್ತ್ರೀಣಾಂ ದೋಷಾಃ ಸ್ವಭಾವಜಾಃ ॥೮೩॥**

ಸುಳ್ಳನ್ನು ಹೇಳುವುದು, ತನ್ನ ಶಕ್ತಿಯೋಗ್ಯತೆಗಳಿಗೆ ಮೀರಿದುದನ್ನು ಮಾಡಲು ತೊಡಗುವುದು, ಫಲಾಫಲಗಳನ್ನು ವಿಮರ್ಶಿಸಿ ಗೊತ್ತುಮಾಡಿಕೊಳ್ಳದೇ ತನ್ನನ್ನೂ ಇತರರನ್ನೂ ಮೋಸಕ್ಕೆ ಗುರಿಮಾಡುವುದು, ತಕ್ಕಷ್ಟು ತಿಳಿವಳಿಕೆ ಇಲ್ಲದಿರುವುದು, ಹಿಡಿದುದನ್ನು ಬಿಡದೆ ಹಟಮಾಡುವುದು, ಅವಶ್ಯಕವಾದ ವೆಚ್ಚವನ್ನು ಶಕ್ತಿಯಿದ್ದರೂ ಮಾಡದಿರುವುದು, ಯೋಚನೆ ಮಾತು ವ್ಯಾಪಾರಗಳಲ್ಲಿ ಪರಿಶುದ್ಧವಾಗಿಲ್ಲದಿರುವುದು, ಸಾಹಸವು, ವಂಚನೆ, ದಡ್ಡತನ, ಹೆಚ್ಚಾದ ದುರಾಶೆ, ಕರುಣೆಯಿಲ್ಲದಿರುವುದು, ಈ ದೋಷಗಳು ಹೆಂಗಸರಿಗೆ ಸ್ವಭಾವವಾಗಿ ಉಂಟಾಗುತ್ತವೆ.

**ಸಶೀರ್ಷಂ ವಾಸುದೇವಂ ತಂ ಕರೋಮ್ಯದ್ಯ ಯಥಾಪುರಾ ।**
**ಶಿರೋಽಸ್ಯ ಶಾಪಯೋಗೇನ ನಿಮಗ್ನಂ ಲವಣಾಂಬುಧೌ ॥೮೪॥**

ಈ ವಿಷ್ಣುವಿನ ತಲೆಯು ಲಕ್ಷ್ಮಿಯ ಶಾಪದಿಂದ ಹಾರಿಹೋಗಿ ಲವಣಸಮುದ್ರದಲ್ಲಿ ಮುಳುಗಿರುವುದು. ಈಗ ಅವನನ್ನು ಮೊದಲಿನಂತೆ ತಲೆಯುಳ್ಳವನನ್ನಾಗಿ ಮಾಡುತ್ತೇನೆ.

**ಅನ್ಯಚ್ಚ ಕಾರಣಂ ಕಿಂಚಿದ್ವರ್ತತೇ ಸುರಸತ್ತಮಾಃ ।**
**ಭವತಾಂ ಚ ಮಹತ್ಕಾರ್ಯಂ ಭವಿಷ್ಯತಿ ನ ಸಂಶಯಃ ॥೮೫॥**

ಓ ದೇವಶ್ರೇಷ್ಠರೇ, ಈ ಸಂಗತಿಯಲ್ಲಿ ಇನ್ನೂ ಒಂದು ಕಾರಣವು ಇದೆ. ಅದನ್ನು ನಿಮಗೆ ಹೇಳುತ್ತೇನೆ. ನಿಮ್ಮ ದೊಡ್ಡದಾದ ಈ ಕೆಲಸವೂ ನಡೆಯುವುದರಲ್ಲಿ ಸಂದೇಹವಿಲ್ಲವು.

**ಪುರಾ ದೈತ್ಯೋ ಮಹಾಬಾಹುರ್ಹಯಗ್ರೀವೋಽತಿವಿಶ್ರುತಃ ।**
**ತಪಶ್ಚಕ್ರೇ ಸರಸ್ವತ್ಯಾಸ್ತೀರೇ ಪರಮದಾರುಣಂ ॥೮೬॥**

ಲೋಕದಲ್ಲಿ ತುಂಬಾ ಹೆಚ್ಚಾದ ಬಾಹುಬಲವುಳ್ಳವನಾಗಿ ಪ್ರಸಿದ್ಧನಾಗಿದ್ದ, ಹಯಗ್ರೀವನೆಂಬ ಒಬ್ಬ ರಾಕ್ಷಸನು ಪೂರ್ವಕಾಲದಲ್ಲಿ ಸರಸ್ವತೀನದೀ ತೀರದಲ್ಲಿ ಬಹಳ ಘೋರವಾದ ತಪಸ್ಸನ್ನು ಮಾಡಿದನು.

**ಜಪನ್ನೇಕಾಕ್ಷರಂ ಮಂತ್ರಂ ಮಾಯಾಬೀಜಾತ್ಮಕಂ ಮಮ ।**
**ನಿರಾಹಾರೋ ಜಿತಾತ್ಮಾ ಚ ಸರ್ವಭೋಗವಿವರ್ಜಿತಃ ॥೮೭॥**

ಆ ರಾಕ್ಷಸನು ಮಾಯಾಬೀಜವಾದ ಒಂದೇ ಅಕ್ಷರವುಳ್ಳ ನನ್ನನ್ನು ಧ್ಯಾನಿಸುವ ಮಂತ್ರವನ್ನು ಜಪಮಾಡುತ್ತಾ, ಆಹಾರವನ್ನೂ ಕೂಡ ತೆಗೆದುಕೊಳ್ಳದೇ ಇಂದ್ರಿಯ

ಗಳನ್ನು ಜಯಿಸಿ, ಹತೋಟಿಯಲ್ಲಿಟ್ಟುಕೊಂಡು, ಎಲ್ಲಾ ವಿಧವಾದ ಭೋಗ್ಯವಸ್ತುಗಳ ಅನುಭವದಿಂದ ಉಂಟಾಗುವ ಸುಖಗಳನ್ನು ಬಿಟ್ಟು ತಪಸ್ಸನ್ನುಮಾಡಿದನು.

**ಧ್ಯಾಯನ್ಮಾಂ ತಾಮಸೀಂ ಶಕ್ತಿಂ ಸರ್ವಭೂಷಣಭೂಷಿತಾಂ ।**
**ಏವಂ ವರ್ಷಸಹಸ್ರಂ ಚ ತಪಶ್ಚಕ್ರೇಽತಿದಾರುಣಂ ॥೮೮॥**

ಅಲ್ಲದೆ, ಅವನು ತಮೋಗುಣದ ಪ್ರಾಬಲ್ಯದಿಂದ ಸಹಿತಳಾದ ಮಾಯಾಶಕ್ತಿ ಸ್ವರೂಪಳಾದ ಎಲ್ಲಾ ವಿಧವಾದ ಅಲಂಕಾರಗಳಿಂದ ಶೃಂಗರಿಸಲ್ಪಟ್ಟ ನನ್ನನ್ನು ಧ್ಯಾನಮಾಡುತ್ತಾ ಒಂದು ಸಾವಿರವರ್ಷಗಳವರೆಗೆ ಉಗ್ರವಾದ ತಪಸ್ಸನ್ನು ಮಾಡಿದನು.

**ತದಾಹಂ ತಾಮಸಂ ರೂಪಂ ಕೃತ್ವಾ ತತ್ರ ಸಮಾಗತಾ ।**
**ದರ್ಶನೇ ಪುರತಸ್ತಸ್ಯ ಧ್ಯಾತಂ ತತ್ತೇನ ಯಾದೃಶಂ ॥೮೯॥**

ಆಗ ನಾನು ತಮೋಗುಣದಿಂದ ಕೂಡಿದ, ಯಾವರೀತಿಯಾದ ಆಕಾರವನ್ನು ಆ ರಾಕ್ಷಸನು ಧ್ಯಾನಮಾಡುತ್ತಿದ್ದನೋ ಅಂಥಾ ರೂಪವನ್ನೇ ಧರಿಸಿ ಅವನ ಎದುರಿಗೆ ಗೋಚರಳಾದೆನು.

**ಸಿಂಹೋಪರಿ ಸ್ಥಿತಾ ತತ್ರ ತಮವೋಚಂ ದಯಾನ್ವಿತಾ ।**
**ವರಂ ಬ್ರೂಹಿ ಮಹಾಭಾಗ ದದಾಮಿ ತವ ಸುವ್ರತ ॥೯೦॥**

ಅಲ್ಲಿ ನಾನು ಸಿಂಹವಾಹನದ ಮೇಲೆ ಇರುವವಳೂ, ಕರುಣೆಯಿಂದ ಕೂಡಿದವಳೂ ಆಗಿ ಅವನನ್ನು ಕುರಿತು ಎಲೈ ನಿಯಮನಿಷ್ಠನಾದ ಪುಣ್ಯಶಾಲಿಯೇ, ನಿನಗೆ ಬೇಕಾದ ವರವನ್ನು ಕೇಳು. ನಾನು ಅದನ್ನು ನಿನಗೆ ಕೊಡುತ್ತೇನೆ ಎಂದು ಹೇಳಿದೆನು.

**ಇತಿ ಶ್ರುತ್ವಾ ವಚೋ ದೇವ್ಯಾ ದಾನವಃ ಪ್ರೇಮಪೂರಿತಃ ।**
**ಪ್ರದಕ್ಷಿಣಂ ಪ್ರಣಾಮಂ ಚ ಚಕಾರ ತ್ವರಿತಸ್ತದಾ ॥೯೧॥**

ಹೀಗೆ ಹೇಳಿದ ದೇವಿಯಾದ ನನ್ನ ಮಾತನ್ನು ಕೇಳಿ ಆ ರಾಕ್ಷಸನು ಪ್ರೀತಿಯಿಂದ ಕೂಡಿದವನಾಗಿ ಜಾಗ್ರತೆಯಾಗಿ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿದನು.

**ದೃಷ್ಟ್ವಾ ರೂಪಂ ಮದೀಯಂ ಸ ಪ್ರೇಮೋತ್ಫುಲ್ಲವಿಲೋಚನಃ ।**
**ಹರ್ಷಾಶ್ರುಪೂರ್ಣನಯನಸ್ತುಷ್ಟಾವ ಸ ಚ ಮಾಂ ತದಾ ॥೯೨॥**

ಆಗ ಪ್ರೀತಿಯಿಂದ ಅರಳಿದ ಕಣ್ಣುಗಳುಳ್ಳವನಾಗಿ ಆ ರಾಕ್ಷಸನು ನನ್ನ ರೂಪವನ್ನು ನೋಡಿ ಆನಂದಬಾಷ್ಪದಿಂದ ತುಂಬಿರುವ ಕಣ್ಣುಗಳುಳ್ಳವನಾಗಿ ನನ್ನ ಸ್ತೋತ್ರವನ್ನು ಮಾಡಿದನು.

॥ ಹಯಗ್ರೀವ ಉವಾಚ ॥

**ನಮೋ ದೇವ್ಯೈ ಮಹಾಮಾಯೇ ಸೃಷ್ಟಿಸ್ಥಿತ್ಯಂತಕಾರಿಣಿ ।**
**ಭಕ್ತಾನುಗ್ರಹಚತುರೇ ಕಾಮದೇ ಮೋಕ್ಷದೇ ಶಿವೇ ॥೯೩॥**

ಓ ದೇವಿ, ನಿನಗೆ ನಮಸ್ಕಾರವು. ನೀನು ಈ ಪ್ರಪಂಚವೆಲ್ಲವನ್ನೂ ಆವರಿಸಿರುವ ಮೂಲಾವಿದ್ಯಾರೂಪಳಾದ ಮಹಾಮಾಯೆಯು. ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ಮಾಡುವವಳೂ, ಭಕ್ತರಿಗೆ ಅನುಗ್ರಹಮಾಡುವುದರಲ್ಲಿ ಕುಶಲಳೂ, ಇಷ್ಟಾರ್ಥವನ್ನು ಕೊಡುವವಳೂ ಆಗಿರುತ್ತೀಯೆ. ಮಂಗಳಸ್ವರೂಪಳಾಗಿಯೂ ಮೋಕ್ಷವನ್ನೂ ಅನುಗ್ರಹಿಸುವವಳಾಗಿಯೂ ಇರುವೆ. ಇಂತಹ ನಿನಗೆ ನಮಸ್ಕಾರವು.

**ಧರಾಂಬುತೇಜಃಪವನಖಪಂಚಾನಾಂ ಚ ಕಾರಣಂ ।**
**ತ್ವಂ ಗಂಧರಸರೂಪಾಣಾಂ ಕಾರಣಂ ಸ್ಪರ್ಶಶಬ್ದಯೋಃ ॥೯೪॥**

ಓ ದೇವಿಯೇ, ನೀನು ಪೃಥಿವೀ ಅಂದರೆ ಘನರೂಪವಸ್ತುವಾದ ಭೂಮಿ, ಜಲ ಅಂದರೆ ದ್ರವರೂಪವಾದ ನೀರು, ತೇಜಸ್ಸು ಅಂದರೆ ಶಾಖವಾಗಿಯೂ ಪ್ರಕಾಶವಾಗಿಯೂ ಇರುವ ಬೆಳಕು, ವಾಯು ಅಂದರೆ ಚಲಿಸುವ ಗಾಳಿ ಮತ್ತು ಆಕಾಶ ಇವುಗಳೆಂಬ ಸೂಕ್ಷ್ಮ ಮತ್ತು ಸ್ಥೂಲಪಂಚಭೂತಗಳಿಗೂ, ಗಂಧ ರಸ ರೂಪ ಸ್ಪರ್ಶ ಶಬ್ದ ಎಂಬ ಐದು ಗುಣಗಳೆಂಬ ವಿಷಯಗಳಿಗೂ ಕಾರಣಳಾಗಿರುತ್ತೀಯೆ.

**ಘ್ರಾಣಂ ಚ ರಸನಾ ಚಕ್ಷುಸ್ತ್ವಕ್‌ಶ್ರೋತ್ರಮಿಂದ್ರಿಯಾಣಿ ಚ ।**
**ಕರ್ಮೇಂದ್ರಿಯಾಣಿ ಚಾನ್ಯಾನಿ ತ್ವತ್ತಃ ಸರ್ವಂ ಮಹೇಶ್ವರಿ ॥೯೫॥**

ಮೂಗು, ನಾಲಗೆ, ಕಣ್ಣು, ಚರ್ಮ, ಕಿವಿಗಳೆಂಬ ಐದು ಜ್ಞಾನೇಂದ್ರಿಯಗಳೂ, ಉಪಸ್ಥ, ಪಾಯು, ಪಾದ, ಪಾಣಿ, ವಾಕ್ ಎಂಬ ಐದು ಕರ್ಮೇಂದ್ರಿಯಗಳೂ ಮತ್ತು ಇತರ ಎಲ್ಲ ವಸ್ತುಗಳೂ ಸರ್ವಶಕ್ತಳಾದ ಮತ್ತು ಎಲ್ಲ ದೇವತೆಗಳಿಗಿಂತಲೂ ದೊಡ್ಡ ಒಡೆಯಳಾದ ನಿನ್ನಿಂದಲೇ ಉತ್ಪನ್ನವಾದವುಗಳು.

॥ ಶ್ರೀದೇವ್ಯುವಾಚ ॥

**ಕಿಂ ತೇಽಭೀಷ್ಟಂ ವರಂ ಬ್ರೂಹಿ ವಾಂಛಿತಂ ಯದ್ದದಾಮಿ ತತ್ ।**
**ಪರಿತುಷ್ಟಾಸ್ಮಿ ಭಕ್ತ್ಯಾ ತೇ ತಪಸಾ ಚಾದ್ಭುತೇನ ಚ ॥೯೭॥**

ದೇವಿಯು ಹೇಳುತ್ತಾಳೆ—ಓ ಹಯಗ್ರೀವನೇ, ನಿನ್ನ ಭಕ್ತಿಯಿಂದಲೂ ಆಶ್ಚರ್ಯಕರವಾದ ತಪಸ್ಸಿನಿಂದಲೂ ನಾನು ಸಂತೋಷವುಳ್ಳವಳಾಗಿರುತ್ತೇನೆ. ನಿನಗೆ ಇಷ್ಟವಾಗಿರುವ ವರವು ಯಾವುದು ಹೇಳು. ಅದನ್ನು ನಿನಗೆ ಕೊಡುತ್ತೇನೆ.

॥ ಹಯಗ್ರೀವ ಉವಾಚ ॥

**ಯಥಾ ಮೇ ಮರಣಂ ಮಾತರ್ನ ಭವೇತ್ತತ್ತಥಾ ಕುರು ।**
**ಭವೇಯಮಮರೋ ಯೋಗೀ ತಥಾಽಜೇಯಃ ಸುರಾಸುರೈಃ ॥೯೭॥**

ಓ ತಾಯಿಯೇ, ನನಗೆ ಮರಣವುಂಟಾಗದಿರುವಂತೆಯೂ, ದೇವತೆಗಳಿಂದಲೂ ರಾಕ್ಷಸರಿಂದಲೂ ಸೋಲದೇ ಇರುವ ಹಾಗೂ, ನಾಶವಿಲ್ಲದೆ ಯೋಗಿಯಾಗುವಂತೆಯೂ, ಅನುಗ್ರಹಮಾಡು ಎಂದು ಹಯಗ್ರೀವನು ಕೇಳಿಕೊಂಡನು.

॥ ದೇವ್ಯುವಾಚ ॥

**ಜಾತಸ್ಯ ಹಿ ಧ್ರುವಂ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ಮರ್ಯಾದಾ ಚೇದೃಶೀ ಲೋಕೇ ಭವೇಚ್ಚ ಕಥಮನ್ಯಥಾ ॥೯೮॥**

ಲೋಕದಲ್ಲಿ, ಹುಟ್ಟಿದವನಿಗೆ ಮರಣವೂ, ಮರಣಹೊಂದಿದವನಿಗೆ ಪುನಃ ಹುಟ್ಟುವಿಕೆಯೂ ಲೋಕನಿಯಮವು. ಸ್ಥಿತಿಯು ಹೀಗಿರುವಲ್ಲಿ ಇದಕ್ಕೆ ವಿರುದ್ಧವಾಗಿ ಹೇಗೆ ಆದೀತು ?

**ಏವಂ ತ್ವಂ ನಿಶ್ಚಯಂ ಕೃತ್ವಾ ಮರಣೇ ರಾಕ್ಷಸೋತ್ತಮ ।**
**ವರಂ ವರಯ ಚೇಷ್ಟಂ ತೇ ವಿಚಾರ್ಯ ಮನಸಾ ಕಿಲ ॥೯೯॥**

ಓ ರಾಕ್ಷಸಶ್ರೇಷ್ಠನೇ, ಲೋಕಮರ್ಯಾದೆಯು ಹೀಗಿರುವುದೆಂಬುದನ್ನು ನೀನು ಮರಣವಿಷಯದಲ್ಲಿಯೂ ವಿಚಾರಮಾಡಿ ಮನಗಂಡು ನಿನಗೆ ಇಷ್ಟವಾದ ಬೇರೆ ವರವನ್ನು ಕೇಳು. ಎಂದು ದೇವಿಯು ಹೇಳಿದಳು.

॥ ಹಯಗ್ರೀವ ಉವಾಚ ॥

**ಹಯಗ್ರೀವಾಚ್ಚ ಮೇ ಮೃತ್ಯುರ್ನಾನ್ಯಸ್ಮಾಜ್ಜಗದಂಬಿಕೇ ।**
**ಇತಿ ಮೇ ವಾಂಛಿತಂ ಕಾಮಂ ಪೂರಯಸ್ವ ಮನೋಗತಂ ॥೧೦೦॥**

ಹಯಗ್ರೀವನು ಹೇಳುತ್ತಾನೆ. ಓ ಜಗತ್ತಿನ ತಾಯಿಯೇ, ಹಾಗಿದ್ದಲ್ಲಿ ನನಗೆ ಕುದುರೆಯ ಮುಖದಂತೆ ಮುಖವುಳ್ಳವನಿಂದಲೇ ಮರಣವುಂಟಾಗಬೇಕು. ಬೇರೆ ಯಾರಿಂದಲೂ ನನಗೆ ಸಾವುಂಟಾಗದಿರಬೇಕು. ಹೀಗೆಂಬುದೇ ನನ್ನ ಮನಸ್ಸಿನ ಬಯಕೆಯು. ಅದನ್ನು ನೀನು ನೆರವೇರಿಸು ಎಂದು ಕೇಳಿಕೊಂಡನು.

॥ ದೇವ್ಯುವಾಚ ॥

**ಗೃಹಂ ಗಚ್ಛ ಮಹಾಭಾಗ ಕುರು ರಾಜ್ಯಂ ಯಥಾಸುಖಂ ।**
**ಹಯಗ್ರೀವಾದೃತೇ ಮೃತ್ಯುರ್ನ ತೇ ನೂನಂ ಭವಿಷ್ಯತಿ ॥೧೦೧॥**

ದೇವಿಯು ಹೇಳುತ್ತಾಳೆ—ಎಲೈ ಪುಣ್ಯಶಾಲಿಯೇ, ನಿನಗೆ ಕುದುರೆಯ ಮುಖದಂತೆ ಮುಖವುಳ್ಳವನಿಂದಲೇ ನಿಶ್ಚಯವಾಗಿಯೂ ಮರಣವುಂಟಾಗುತ್ತದೆ. ಬೇರೆ ಯಾರಿಂದಲೂ ನಿನಗೆ ಸಾವು ಉಂಟಾಗುವುದಿಲ್ಲವು. ಆದುದರಿಂದ ಮನೆಗೆ ಹೋಗಿ ಸುಖವಾಗಿ ರಾಜ್ಯಭಾರಮಾಡುತ್ತಿರು.

**ಇತಿ ದತ್ವಾ ವರಂ ತಸ್ಮೈ ಅಂತರ್ಧಾನಂ ಗತಾ ತದಾ ।**
**ಮುದಂ ಪರಮಿಕಾಂ ಪ್ರಾಪ್ಯ ಸೋಽಪಿ ಸ್ವಭವನಂ ಗತಃ ॥೧೦೨॥**

ಈ ರೀತಿಯಾಗಿ ಹಯಗ್ರೀವನಿಗೆ ವರವನ್ನು ಕೊಟ್ಟು ಆ ದೇವಿಯು ಕಣ್ಮರೆಯಾದಳು. ಆ ಹಯಗ್ರೀವನೂ ಕೂಡ ಬಹಳ ಸಂತೋಷವನ್ನು ಹೊಂದಿ ತನ್ನ ಮನೆಗೆಹೋದನು.

**ಸ ಪೀಡಯತಿ ದುಷ್ಟಾತ್ಮಾ ಮುನೀನ್ವೇದಾಂಶ್ಚ ಸರ್ವಶಃ ।**
**ನ ಕೋಽಪಿ ವಿದ್ಯತೇ ತಸ್ಯ ಹಂತಾದ್ಯ ಭುವನತ್ರಯೇ ॥೧೦೩॥**

ಹೀಗೆ ವರವನ್ನು ಹೊಂದಿದ, ದುಷ್ಟನಾದ, ಕಾಮ್ಯವೂ, ತಾಮಸವೂ ಆದ ಉಪಾಸನೆಯಿಂದ ಸಿದ್ಧಿಯನ್ನು ಪಡೆದ ಆ ರಾಕ್ಷಸನು ಸ್ವಾಭಾವಿಕವಾದ ತನ್ನ ಕೆಟ್ಟ

ತನದಿಂದ ವೇದಗಳನ್ನೂ ಋಷಿಗಳನ್ನೂ ಹಿಂಸಿಸುವುದಕ್ಕೆ ಪ್ರಾರಂಭಿಸಿದನು. ಈ ಮೂರು ಲೋಕಗಳಲ್ಲಿಯೂ ಅವನನ್ನು ಸಂಹಾರಮಾಡಬಲ್ಲವರು ಯಾರೂ ಇಲ್ಲವು.

**ತಸ್ಮಾಚ್ಛೀರ್ಷಂ ಹಯಸ್ಯಾಸ್ಯ ಸಮುದ್ಧೃತ್ಯ ಮನೋಹರಂ ।**
**ದೇಹೇsತ್ರ ವಿಶಿರೋವಿಷ್ಣೋಸ್ತ್ವಷ್ಟಾ ಸಂಯೋಜಯಿಷ್ಯತಿ ॥೧೦೪॥**

ಆದುದುವರಿಂದ ಸುಂದರವಾದ ಒಂದು ಕುದುರೆಯ ತಲೆಯನ್ನು ತೆಗೆದು ತಂದು ತ್ವಷ್ಟೃಬ್ರಹ್ಮನು ತಲೆಯಿಲ್ಲದ ಈ ವಿಷ್ಣುವಿನ ಶರೀರದಲ್ಲಿ ಸೇರಿಸುವನು.

**ಹಯಗ್ರೀವೋsಥ ಭಗವಾನ್ ಹನಿಷ್ಯತಿ ತಮಾಸುರಂ ।**
**ಪಾಪಿಷ್ಠಂ ದಾನವಂ ಕ್ರೂರಂ ದೇವಾನಾಂ ಹಿತಕಾಮ್ಯಯಾ ॥೧೦೫॥**

ಅನಂತರದಲ್ಲಿ ಹಯಗ್ರೀವ ಸ್ವರೂಪನಾದ ಭಗವಂತನು, ಎಂದರೆ ಮಹಾ ಮಹಿಮನಾದ ವಿಷ್ಣುವು ಪಾಪಿಯೂ ಕ್ರೂರಿಯೂಆದ ಆ ರಾಕ್ಷಸನನ್ನು ದೇವತೆಗಳಿಗೆ ಹಿತವನ್ನು ಮಾಡುವುದಕ್ಕಾಗಿ ಸಂಹಾರ ಮಾಡುವನು.

॥ ಸೂತ ಉವಾಚ ॥

**ಏವಂ ಸುರಾಂಸ್ತದಾಭಾಷ್ಯ ಶರ್ವಾಣೀ ವಿರರಾಮ ಹ ।**
**ದೇವಾಸ್ತದಾತಿಸಂತುಷ್ಟಾಸ್ತಮೂಚುರ್ದೇವಶಿಲ್ಪಿನಂ ॥೧೦೬॥**

ಸೂತನು ಹೇಳುತ್ತಾನೆ — ಈ ರೀತಿಯಾಗಿ ಆ ಶರ್ವಾಣಿಯು ದೇವತೆಗಳಿಗೆ ಹೇಳಿ ಸುಮ್ಮನಾದಳು. ಆಗ ದೇವತೆಗಳು ಸಂತೋಷವುಳ್ಳವರಾಗಿ ದೇವಶಿಲ್ಪಿಯಾದ ತ್ವಷ್ಟೃಬ್ರಹ್ಮನಿಗೆ ಹೀಗೆ ಹೇಳಿದರು.

॥ ದೇವಾ ಊಚುಃ ॥

**ಕುರು ಕಾರ್ಯಂ ಸುರಾಣಾಂ ವೈ ವಿಷ್ಣೋಃ ಶೀರ್ಷಾಭಿಯೋಜನಂ ।**
**ದಾನವಪ್ರವರಂ ದೈತ್ಯಂ ಹಯಗ್ರೀವೋ ಹನಿಷ್ಯತಿ ॥೧೦೭॥**

ದೇವತೆಗಳು ಹೇಳುತ್ತಾರೆ — ಓ ತ್ವಷ್ಟೃಬ್ರಹ್ಮನೇ, ನೀನು ದೇವತೆಗಳ ಕೆಲಸ ಕ್ಕಾಗಿ, ವಿಷ್ಣುವಿನ ಶರೀರಕ್ಕೆ ಕುದುರೆಯ ತಲೆಯನ್ನು ತಂದು ಸೇರಿಸು. ಅನಂತರ ದಲ್ಲಿ ಕುದುರೆಯ ಕತ್ತಿನಂತಿರುವ ಕತ್ತನ್ನು ಪಡೆದಿರುವ ವಿಷ್ಣುವು ರಾಕ್ಷಸರಲ್ಲೆಲ್ಲಾ ಗಟ್ಟಿಗನಾದ ಹಯಗ್ರೀವನನ್ನು ಸಂಹಾರಮಾಡುವನು.

|| ಸೂತ ಉವಾಚ ||

**ಇತಿ ಶ್ರುತ್ವಾ ವಚಸ್ತೇಷಾಂ ತ್ವಷ್ಟಾ ಚಾತಿತ್ವರಾನ್ವಿತಃ ।**
**ವಾಜಿಶೀರ್ಷಂ ಚಕರ್ತಾಶು ಖಡ್ಗೇನ ಸುರಸನ್ನಿಧೌ ॥೧೦೯॥**

ಹೀಗೆ ಹೇಳಿದ ದೇವತೆಗಳ ಮಾತನ್ನು ಕೇಳಿ ತ್ವಷ್ಟೃವು ಬಹು ಜಾಗ್ರತೆಯಾಗಿ ಕತ್ತಿಯಿಂದ ಒಂದು ಕುದುರೆಯ ತಲೆಯನ್ನು ದೇವತೆಗಳ ಎದುರಿಗೇ ಕತ್ತರಿಸಿದನು.

**ವಿಷ್ಣೋಃ ಶರೀರೇ ತೇನಾಶು ಯೋಜಿತಂ ವಾಜಿಮಸ್ತಕಂ ।**
**ಹಯಗ್ರೀವೋ ಹರಿರ್ಜಾತೋ ಮಹಾಮಾಯಾಪ್ರಸಾದತಃ ॥೧೦೯॥**

ಅನಂತರದಲ್ಲಿ ತ್ವಷ್ಟೃಬ್ರಹ್ಮನು ಆ ತಲೆಯನ್ನು ತಂದು ವಿಷ್ಣುವಿನ ಶರೀರದಲ್ಲಿ ಸೇರಿಸಿದನು. ಆಗ ವಿಷ್ಣುವು ಮಹಾಮಾಯಾಸ್ವರೂಪಳಾದ ದೇವಿಯ ಅನುಗ್ರಹದಿಂದ ಹಯಗ್ರೀವನಾಗಿ ಅವತರಿಸಿದ ವಿಷ್ಣುವು ಎಂದು ಪ್ರಸಿದ್ಧನಾದನು.

**ಕಿಯತಾ ತೇನ ಕಾಲೇನ ದಾನವೋ ಮದದರ್ಪಿತಃ ।**
**ನಿಹತಸ್ತರಸಾ ಸಂಖ್ಯೇ ದೇವಾನಾಂ ರಿಪುರೋಜಸಾ ॥೧೧೦॥**

ಕೆಲವು ಕಾಲದ ಮೇಲೆ ಪರಾಕ್ರಮಶಾಲಿಯಾದ ಆ ವಿಷ್ಣುವು ಮದದಿಂದ ಕೊಬ್ಬಿದ, ದೇವತೆಗಳಿಗೆ ಶತ್ರುವಾದ ಆ ರಾಕ್ಷಸನನ್ನು ಯುದ್ಧದಲ್ಲಿ ಜಾಗ್ರತೆಯಾಗಿ ಶಕ್ತಿಯ ಮಹಿಮೆಯಿಂದ ಸಂಹಾರಮಾಡಿದನು.

**ಯ ಇದಂ ಶುಭಮಾಖ್ಯಾನಂ ಶೃಣ್ವಂತಿ ಭುವಿ ಮಾನವಾಃ ।**
**ಸರ್ವದುಃಖವಿನಿರ್ಮುಕ್ತಾಸ್ತೇ ಭವಂತಿ ನ ಸಂಶಯಃ ॥೧೧೧॥**

ಮಂಗಳಕರವಾದ ಈ ಕಥೆಯನ್ನು ಈ ಭೂಲೋಕದಲ್ಲಿ ಯಾರುಕೇಳುತ್ತಾರೆಯೋ ಅವರು ಎಲ್ಲಾ ವಿಧವಾದ ದುಃಖಗಳಿಂದಲೂ ಬಿಡುಗಡೆಯನ್ನು ಹೊಂದುತ್ತಾರೆ. ಈ ವಿಷಯದಲ್ಲಿ ಸಂದೇಹವುವಿಲ್ಲವು.

**ಮಹಾಮಾಯಾಚರಿತ್ರಂ ಚ ಪವಿತ್ರಂ ಪಾಪನಾಶನಂ ।**
**ಪಠತಾಂ ಶೃಣ್ವತಾಂ ಚೈವ ಸರ್ವಸಂಪತ್ತಿಕಾರಕಂ ॥೧೧೨॥**

ಈ ಮಹಾಮಾಯಾಚರಿತ್ರೆಯು ಪುಣ್ಯವನ್ನುಂಟುಮಾಡುವುದೂ ಪಾಪವನ್ನು ನಾಶಮಾಡುವುದೂ ಆಗಿರುತ್ತದೆ. ಹೇಳುವವರಿಗೂ, ಕೇಳುವವರಿಗೂ ಎಲ್ಲಾ ವಿಧವಾದ ಸಂಪತ್ತನ್ನೂ ಉಂಟುಮಾಡುವುದು.

ಶ್ರೀ ಹಯಗ್ರೀವನ ಕಥೆಯನ್ನೇ ತಿಳಿಸುವ ಅನೇಕ ಮಂತ್ರಗಳು ವೇದಗಳಲ್ಲಿವೆ. ಹಯಗ್ರೀವೋಪನಿಷತ್ ಎಂಬ ಒಂದು ಉಪನಿಷತ್ತಿನಲ್ಲೂ ಈ ಅಂಶವನ್ನು ಸೂಚಿಸಿದೆ. ಹೀಗೆ ವೈದಿಕ ಸಾಹಿತ್ಯದಲ್ಲಿ ಸೂಚಿತವಾಗಿರುವ ಕಥೆಯನ್ನು ಈ ಮಹಾಪುರಾಣದಲ್ಲೂ ವಿಸ್ತಾರವಾಗಿ ಹೆಚ್ಚು ವಿವರಗಳೊಡನೆ ವರ್ಣಿಸಿದೆ. ಹಯಗ್ರೀವನ ಕಥೆಯನ್ನು ಅನೇಕ ಪುರಾಣಗಳಲ್ಲೂ ಇತಿಹಾಸಗಳಲ್ಲೂ ಓದಬಹುದಾಗಿದೆ. ಒಟ್ಟಿನಲ್ಲಿ " ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।" ಎಂಬ ವಚನಕ್ಕೆ ಈ ಪುರಾಣದಲ್ಲಿಯೂ ಒಂದು ನಿದರ್ಶನವು ದೊರೆತಹಾಗಾಯಿತು. ಈ ಕಥೆಗಳನ್ನು ಪರಿಶೀಲಿಸಿದರೆ ವಿವರಗಳಲ್ಲಿ ವ್ಯತ್ಯಾಸಗಳಿರುವುದೂ ಕಂಡುಬರುತ್ತದೆ. ಹೇಗೂ ಶ್ರೀ ಮಹಾವಿಷ್ಣುವು ನೆರವೇರಿಸಿದ ಹಯಗ್ರೀವಾವತಾರದ ಈ ಕಥೆಯು ಬಹುಮಾನ್ಯವಾದುದೆಂಬುದರಲ್ಲಿ ಸಂದೇಹವಿಲ್ಲವು. ವಿಸ್ತಾರಭಯದಿಂದ ವಿವರಗಳನ್ನು ಕೊಡಲಾಗದೆ ಇದೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಹಯಗ್ರೀವಾವತಾರಕಥನಂ ನಾಮ**
**ಪಂಚಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹಯಗ್ರೀವಾವತಾರಕಥಾನಿರೂಪಣವುಳ್ಳ ಐದನೆಯ
ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ಷಷ್ಠೋಽಧ್ಯಾಯಃ ||

### ಆರನೆಯ ಅಧ್ಯಾಯವು

|| ಋಷಯ ಊಚುಃ ||

**ಸೌಮ್ಯ ಯಚ್ಚ ತ್ವಯಾ ಪ್ರೋಕ್ತಂ ಶೌರೇರ್ಯುದ್ಧಂ ಮಹಾರ್ಣವೇ ।**
**ಮಧುಕೈಟಭಯೋಃ ಸಾರ್ಧಂ ಪಂಚವರ್ಷಸಹಸ್ರಕಂ ॥೧॥**

ಶೌನಕಾದಿ ಋಷಿಗಳು ಸೂತಪುರಾಣಿಕರನ್ನು ಪ್ರಶ್ನೆಮಾಡಿದರು— ಪ್ರಿಯದರ್ಶನನಾದ ಎಲೈ, ಸೂತಮುನಿಯೇ ; ನೀನು ಹಿಂದೆ, ಮಧುಕೈಟಭರೊಡನೆ ಶ್ರೀಮಹಾವಿಷ್ಣುವು ಅಪಾರಸಮುದ್ರದಲ್ಲಿ ಐದುಸಾವಿರವರ್ಷಗಳವರೆಗೆ ಬಿಡುವಿಲ್ಲದೆ ಯುದ್ಧಮಾಡಿದನೆಂದು ಹೇಳಿದೆಯಲ್ಲವೇ ?

**ಕಸ್ಮಾತ್ತೌ ದಾನವೌ ಜಾತೌ ತಸ್ಮಿನ್ನೇಕಾರ್ಣವೇ ಜಲೇ ।**
**ಮಹಾವೀರ್ಯೌ ದುರಾಧರ್ಷೌ ದೇವೈರಪಿ ಸುದುರ್ಜಯೌ ॥೨॥**

ಜಲಮಯವಾಗಿ ಒಂದೇಸಮುದ್ರದಂತಿದ್ದ ಆ ಪ್ರದೇಶದಲ್ಲಿ ಬಹುಪರಾಕ್ರಮಿಗಳಾಗಿಯೂ, ಯಾರಿಂದಲೂ ತಡೆಯಲಶಕ್ಯರಾಗಿಯೂ ದೇವತೆಗಳಿಗೂ ಅಜೇಯರಾಗಿದ್ದ ಆ ಮಧುಕೈಟಭರು ಯಾರಿಂದ ಹುಟ್ಟಿದರು ?

**ಕಥಂ ತಾವಸುರೌ ಜಾತೌ ಕಥಂ ಚ ಹರಿಣಾ ಹತೌ ।**
**ತದಾಚಕ್ಷ್ವ ಮಹಾಭಾಗ ಚರಿತಂ ಪರಮಾದ್ಭುತಂ ॥೩॥**

ಎಲೈ ಮಹಾಮಹಿಮಶಾಲಿಯಾದ ಸೂತಮುನಿಯೇ, ಆ ದೈತ್ಯರು ರಾಕ್ಷಸರಾಗಿ ಹುಟ್ಟಿದುದಾದರೂ ಹೇಗೆ? ಶ್ರೀವಿಷ್ಣುವು ಅವರನ್ನು ಹೇಗೆ ಸಂಹರಿಸಿದನು ? ಅತ್ಯಾಶ್ಚರ್ಯಕರವಾದ ಆ ವೃತ್ತಾಂತವನ್ನು ನಮಗೆ ಹೇಳು.

**ಶ್ರೋತುಕಾಮಾ ವಯಂ ಸರ್ವೇ ತ್ವಂ ಚ ವಕ್ತಾ ಬಹುಶ್ರುತಃ ।**
**ದೈವಾಚ್ಚಾತ್ರೈವ ಸಂಜಾತಃ ಸಂಯೋಗಶ್ಚ ತಥಾವಯೋಃ ॥೪॥**

ನಾವೆಲ್ಲರೂ ಕೇಳಲಿಚ್ಛೆಯುಳ್ಳವರಾಗಿರುತ್ತೇವೆ. ಹೇಳತಕ್ಕ ನೀನಾದರೋ ತುಂಬಾ ತಿಳಿವಳಿಕೆಯುಳ್ಳವನು. ದೈವಯೋಗದಿಂದ ನಮಗೂ ನಿನಗೂ ಇಲ್ಲಿಯೇ ಸಮಾಗಮವೂ ಉಂಟಾಗಿರುತ್ತದೆ.

**ಮೂರ್ಖೇಣ ಸಹ ಸಂಯೋಗೋ ವಿಷಾದಪಿ ಸುದುರ್ಜರಃ ।**
**ವಿಜ್ಞೇನ ಸಹ ಸಂಯೋಗಃ ಸುಧಾರಸಸಮಃ ಸ್ಮೃತಃ ॥೫॥**

ಮೂರ್ಖರೊಡನೆ ಸೇರುವಿಕೆಯು ವಿಷಕ್ಕಿಂತಲೂ ಕೆಟ್ಟದು, ಮತ್ತು ಅಜೀರ್ಣವಾದ ವಸ್ತುವಿನಂತೆ ಅಸಹ್ಯವಾದ ಪರಿಣಾಮವುಳ್ಳದ್ದಾಗುತ್ತದೆ. ತಿಳಿದವರೊಡನಾದ ಭೇಟಿಯು ಅಮೃತರಸದಂತೆ ಒಳ್ಳೆಯದನ್ನುಂಟುಮಾಡುತ್ತದೆ ಎಂದು ಹೇಳಿದೆ.

**ಜೀವಂತಿ ಪಶವಃ ಸರ್ವೇ ಖಾದಂತಿ ಮೋಹಯಂತಿ ಚ ।**
**ಜಾನಂತಿ ವಿಷಯಾಕಾರಂ ವ್ಯವಾಯಸುಖಮದ್ಭುತಂ ॥೬॥**

ಎಲ್ಲಾ ಪಶುಗಳೂ ಜೀವಿಸುತ್ತವೆ, ಹಸಿವಾದರೆ ಆಹಾರವನ್ನು ತಿನ್ನುತ್ತವೆ. ಶೃಂಗಾರಚೇಷ್ಟೆಗಳನ್ನು ಮಾಡುತ್ತವೆ. ಇಂದಿದ್ದು ನಾಳೆ ಅಳಿಯತಕ್ಕ ವಿಷಯಾನುಗುಣವಾದ ಸುಖಗಳನ್ನೇ ಅತಿಶಯವಾಗಿ ಆಶ್ಚರ್ಯಕರವಾದ ಮಹಾಫಲವೆಂದು ತಿಳಿಯುತ್ತವೆ.

**ನ ತೇಷಾಂ ಸದಸಜ್ಜ್ಞಾನಂ ವಿವೇಕೋ ನ ಚ ಮೋಕ್ಷದಃ ।**
**ಪಶುಭಿಸ್ತೇ ಸಮಾ ಜ್ಞೇಯಾ ಯೇಷಾಂ ನ ಶ್ರವಣಾದರಃ ॥೭॥**

ಅವುಗಳಿಗೆ ಇದು ಕೆಟ್ಟದು, ಇದು ಒಳ್ಳೆಯದು ಎಂಬ ತಿಳಿವಳಿಕೆಯಿಲ್ಲವು. ಮುಕ್ತಿಯನ್ನು ಕೊಡುವ ನಿತ್ಯಾನಿತ್ಯವಿವೇಚನೆಯೂ ಅವಕ್ಕೆ ಇರುವುದಿಲ್ಲವು. ಹಾಗೆಯೇ ಪರಮಾತ್ಮನ ಕಥೆಯನ್ನು ಕೇಳಬೇಕೆಂದು ಯಾರಿಗೆ ಆಸಕ್ತಿ ಇರುವುದಿಲ್ಲವೋ ಅವರೂ ಮೇಲೆ ಹೇಳಿದ ಪಶುಗಳಿಗೆ ಸಮಾನರು.

**ಮೃಗಾದ್ಯಾಃ ಪಶವಃ ಕೇಚಿಜ್ಜಾನಂತಿ ಶ್ರಾವಣಂ ಸುಖಂ ।**
**ಅಶ್ರೋತ್ರಾಃ ಫಣಿನಶ್ಚೈವ ಮುಮುಹುರ್ನಾದಪಾನತಃ ॥೮॥**

ಹುಲ್ಲೆಯೇ ಮೊದಲಾದ ಕೆಲವು ಪ್ರಾಣಿಗಳೂ ಸಹ ಕರ್ಣಾನಂದವನ್ನು ಅನುಭವಿಸುವವು. ಪ್ರತ್ಯೇಕವಾಗಿ ಕಿವಿಗಳಿಲ್ಲದ ಹಾವುಗಳೂ ಸಹ ಗಾನಮಾಧುರ್ಯ ವನ್ನು ಸವಿದು ಮದಿಸುತ್ತವೆ.

**ಪಂಚಾನಾಮಿಂದ್ರಿಯಾಣಾಂ ವೈ ಶುಭೇ ಶ್ರವಣದರ್ಶನೇ ।**
**ಶ್ರವಣಾದ್ವಸ್ತುವಿಜ್ಞಾನಂ ದರ್ಶನಾಚ್ಚಿತ್ತರಂಜನಂ ॥೯॥**

ನಮಗಿರುವ ಜ್ಞಾನವನ್ನುಂಟುಮಾಡುವ ಐದು ಇಂದ್ರಿಯಗಳ ಪೈಕಿ ಕಣ್ಣು ಮತ್ತು ಕಿವಿ, ಇವುಗಳೇ ಒಳ್ಳೆಯವು. ಅವುಗಳಲ್ಲಿಯೂ ಶ್ರವಣದಿಂದ ಪದಾರ್ಥದ ತಿಳಿವಳಿಕೆಯೂ, ದರ್ಶನದಿಂದ ಮನೋರಂಜನೆಯೂ ಆಗುವುವು.

**ಶ್ರವಣಂ ತ್ರಿವಿಧಂ ಪ್ರೋಕ್ತಂ ಸಾತ್ತ್ವಿಕಂ ರಾಜಸಂ ತಥಾ ।**
**ತಾಮಸಂ ಚ ಮಹಾಭಾಗಾಃ ಸುಜ್ಞೋಕ್ತಂ ನಿಶ್ಚಯಾನ್ವಿತಂ ॥೧೦॥**

ಓ ಪುಣ್ಯಶಾಲಿಗಳಿರಾ, ಕಿವಿಯಿಂದುಂಟಾಗುವ ತಿಳಿವಳಿಕೆಯು, ಸಾತ್ವಿಕ, ರಾಜಸ, ತಾಮಸವೆಂಬ ಮೂರುಬಗೆಯೆಂದು ಚೆನ್ನಾಗಿ ತಿಳಿವಳಿಕೆಯುಳ್ಳವರು ಹೇಳುತ್ತಾರೆ.

**ಸಾತ್ತ್ವಿಕಂ ವೇದಶಾಸ್ತ್ರಾದಿ ಸಾಹಿತ್ಯಂ ಚೈವ ರಾಜಸಂ ।**
**ತಾಮಸಂ ಯುದ್ಧವಾರ್ತಾ ಚ ಪರದೋಷಪ್ರಕಾಶನಂ ॥೧೧॥**

ಅದರಲ್ಲಿಯೂ ವೇದಶಾಸ್ತ್ರಾದಿಗಳಿಂದ ಆಗುವ ತಿಳಿವಳಿಕೆಯು ಸಾತ್ತ್ವಿಕ ವಾದುದು ; ಪುರಾಣಕಾವ್ಯ ಮುಂತಾದ ಸಾಹಿತ್ಯದಿಂದ ದೊರೆಯುವ ತಿಳಿವಳಿಕೆಯು ರಾಜಸವಾದುದು ; ಯುದ್ಧಸಮಾಚಾರ ಮುಂತಾದವು ಇನ್ನೊಬ್ಬರ ದೋಷಗಳನ್ನು ಪ್ರಕಟಿಸುವುದರಿಂದ ತಾಮಸವೆನಿಸುತ್ತದೆ.

**ಸಾತ್ತ್ವಿಕಂ ತ್ರಿವಿಧಂ ಪ್ರೋಕ್ತಂ ಪ್ರಜ್ಞಾವದ್ಭಿಶ್ಚ ಪಂಡಿತೈಃ ।**
**ಉತ್ತಮಂ ಮಧ್ಯಮಂ ಚೈವ ತಥೈವಾಧಮಮಿತ್ಯುತ ॥೧೨॥**

ಆ ಸಾತ್ತ್ವಿಕಶ್ರವಣವನ್ನು ಉತ್ತಮ ಮಧ್ಯಮ ಅಧಮವೆಂದು ಮೂರು ವಿಧವಾಗಿ ಬುದ್ಧಿಶಾಲಿಗಳಾದ ಪಂಡಿತರು ವಿಂಗಡಿಸಿರುತ್ತಾರೆ.

**ಉತ್ತಮಂ ಮೋಕ್ಷಫಲದಂ ಸ್ವರ್ಗದಂ ಮಧ್ಯಮಂ ತಥಾ ।**
**ಅಧಮಂ ಭೋಗದಂ ಪ್ರೋಕ್ತಂ ನಿರ್ಣೀಯ ವಿದಿತಂ ಬುಧೈಃ ॥೧೩॥**

ಯಾವುದರ ಶ್ರವಣದಿಂದ ಮೋಕ್ಷವು ದೊರಕಬಹುದೋ ಅದು ಉತ್ತಮ ಶ್ರವಣವು; ಸ್ವರ್ಗಸಾಧನವಾದ ಕರ್ಮಕಾಂಡಶ್ರವಣವು ಮಧ್ಯಮವು; ಸ್ತ್ರೀಪುತ್ರಾದಿ ವಿಷಯಗಳ ಸುಖಕ್ಕೆ ಸಾಧನವಾದ ಶ್ರವಣವು ಅಧಮವು.

**ಸಾಹಿತ್ಯಂ ಚೈವ ತ್ರಿವಿಧಂ ಸ್ವೀಯಾಯಾಂ ಚೋತ್ತಮಂ ಸ್ಮೃತಂ ।**
**ಮಧ್ಯಮಂ ವಾರಯೋಷಾಯಾಂ ಪರೋಢಾಯಾಂ ತಥಾಧಮಂ ॥೧೪॥**

ಅಧಮವಾದ ನವರಸಶೃಂಗಾರಾತ್ಮಕವಾದ ಸಾತ್ತ್ವಿಕಶ್ರವಣವು ಮೂರು ವಿಧವು. ಸ್ವಸ್ತ್ರೀಯಲ್ಲಿಯ ಶೃಂಗಾರದ ಶ್ರವಣವು ಉತ್ತಮವು. ಸೂಳೆಯರೊಡನಾದ ಶೃಂಗಾರವನ್ನು ಕೇಳುವಿಕೆಯು ಮಧ್ಯಮವು. ಪರಸ್ತ್ರೀಯೊಡನಾದುದನ್ನು ಕೇಳುವುದು ಅಧಮವು.

**ತಾಮಸಂ ತ್ರಿವಿಧಂ ಜ್ಞೇಯಂ ವಿದ್ವದ್ಭಿಃ ಶಾಸ್ತ್ರದರ್ಶಿಭಿಃ ।**
**ಆತತಾಯಿನಿ ಯುದ್ಧಂ ಯತ್ತದುತ್ತಮಮುದಾಹೃತಂ ॥೧೫॥**

**ಮಧ್ಯಮಂ ಚಾಪಿ ವಿದ್ವೇಷಾತ್ಪಾಂಡವಾನಾಂ ಯಥಾರಿಭಿಃ ।**
**ಅಧಮಂ ನಿರ್ನಿಮಿತ್ತಂ ತು ವಿವಾದೇ ಕಲಹೇ ತಥಾ ॥೧೬॥**

ತಾಮಸಶ್ರವಣವನ್ನು ಮೂರುಬಗೆಯೆಂದು ಶಾಸ್ತ್ರಜ್ಞರಾದ ಪಂಡಿತರುಗಳು ತಿಳಿಯಬೇಕು. ಹತ್ಯಾಕಾರ್ಯದಲ್ಲಿ ನಿರತನಾದವನೊಡನೆ ಆದ ಯುದ್ಧದ ಶ್ರವಣವು ಉತ್ತಮವು; ವೈರದಿಂದ ಕೌರವರು ಪಾಂಡವರೊಂದಿಗೆ ಮಾಡಿದಂತಹ ಯುದ್ಧದ ಶ್ರವಣವು ಮಧ್ಯಮವು; ಕಾರಣವಿಲ್ಲದೆ ವಿವಾದವನ್ನಾಗಲೀ ಜಗಳವನ್ನಾಗಲೀ ಮಾಡುವುದರ ಕೇಳುವಿಕೆಯು ಅಧಮವು.

**ತದತ್ರ ಶ್ರವಣಂ ಮುಖ್ಯಂ ಪುರಾಣಸ್ಯ ಮಹಾಮತೇ ।**
**ಬುದ್ಧಿಪ್ರವರ್ಧನಂ ಪುಣ್ಯಂ ತತಃ ಪಾಪಪ್ರಣಾಶನಂ ॥೧೭॥**

ಈ ಮೇಲೆ ಹೇಳಿದ ಕಾರಣಗಳಿಂದ, ಮಹಾಬುದ್ಧಿಶಾಲಿಯಾದ ಸೂತನೇ, ಈಗ ಸಾತ್ತ್ವಿಕವಾದ ಪುರಾಣಶ್ರವಣವು ಮುಖ್ಯವು. ಜ್ಞಾನವು ಅದರಿಂದ ಇನ್ನೂ

ಹೆಚ್ಚುವುದು, ಮತ್ತು ಅದು ಎಲ್ಲಾ ಪಾಪಗಳನ್ನೂ ಹೋಗಲಾಡಿಸಲು, ಮನಸ್ಸು ಶುದ್ಧವಾಗಿ ಪುಣ್ಯವನ್ನು ಪಡೆಯುವುದು.

**ತದಾಖ್ಯಾಹಿ ಮಹಾಬುದ್ಧೇ ಕಥಾಂ ಪೌರಾಣಿಕೀಂ ಶುಭಾಂ ।**
**ಶ್ರುತಾಂ ದ್ವೈಪಾಯನಾತ್ಪೂರ್ವಂ ಸರ್ವಾರ್ಥಸ್ಯ ಪ್ರಸಾಧಿನೀಂ ॥೧೮॥**

ಆದುದರಿಂದ ಮಹಾಬುದ್ಧಿಯುಳ್ಳ ಸೂತನೇ, ನೀನು ಪೂರ್ವದಲ್ಲಿ ವ್ಯಾಸ ಮುನಿಯಿಂದ ಕೇಳಿ ತಿಳಿದುಕೊಂಡಿರುವ, ಸಮಸ್ತ ಇಷ್ಟಾರ್ಥಗಳನ್ನೂ ಕೊಡುವ, ಮಂಗಳಕರವಾದ ಪುರಾಣಕಥೆಯನ್ನು ಹೇಳು.

॥ ಸೂತ ಉವಾಚ ॥

**ಯೂಯಂ ಧನ್ಯಾ ಮಹಾಭಾಗಾ ಧನ್ಯೋಽಹಂ ಪೃಥಿವೀತಲೇ ।**
**ಯೇಷಾಂ ಶ್ರವಣಬುದ್ಧಿಶ್ಚ ಮಮಾಪಿ ಕಥನೇ ಕಿಲ ॥೧೯॥**

ಈ ರೀತಿಯಾಗಿ ಶೌನಕಾದಿಋಷಿಗಳಿಂದ ಪ್ರಾರ್ಥಿಸಲ್ಪಟ್ಟ ಸೂತಮುನಿಯು ಹೇಳುತ್ತಾನೆ— ಎಲೈ ಮಹಾಪುಣ್ಯಶಾಲಿಗಳೇ, ಈ ಸಾತ್ತ್ವಿಕಪುರಾಣವನ್ನು ಕೇಳ ಬೇಕೆಂಬ ಬುದ್ಧಿಯು ನಿಮಗೆ ಉಂಟಾಗಿರುವುದರಿಂದ ನೀವು ಧನ್ಯರು. ಇದನ್ನು ಹೇಳಲು ನನಗೆ ಅವಕಾಶ ದೊರೆತದ್ದರಿಂದ ಈ ಭೂಮಿಯಲ್ಲಿ ನಾನೇ ಧನ್ಯನೆಂದು ಭಾವಿಸುವೆನು.

**ಪುರಾ ಚೈಕಾರ್ಣವೇ ಜಾತೇ ವಿಲೀನೇ ಭುವನತ್ರಯೇ ।**
**ಶೇಷಪರ್ಯಂಕಸುಪ್ತೇ ಚ ದೇವದೇವೇ ಜನಾರ್ದನೇ ॥೨೦॥**

ಹಿಂದೆ ಪ್ರಳಯಕಾಲದಲ್ಲಿ ಪ್ರಪಂಚವೆಲ್ಲಾ ನೀರಿನಿಂದ ಸಮುದ್ರಮಯ ವಾಗಲಾಗಿ ಆ ಮಹಾಸಮುದ್ರದಲ್ಲಿ ಮೂರು ಲೋಕಗಳೂ ಅಡಗಿಹೋದುವು. ದೇವತೆ ಗಳಿಗೂ ದೇವನಾದ ಶ್ರೀಮಹಾವಿಷ್ಣುವು ಆಗ ಶೇಷಶಯ್ಯೆಯಲ್ಲಿ ಮಲಗಿ ನಿದ್ರಿಸು ತ್ತಿದ್ದನು.

**ವಿಷ್ಣುಕರ್ಣಮಲೋದ್ಭೂತೌ ದಾನವೌ ಮಧುಕೈಟಭೌ ।**
**ಮಹಾಬಲೌ ಚ ತೌ ದೈತ್ಯೌ ವಿವೃದ್ಧೌ ಸಾಗರೇ ಜಲೇ ॥೨೧॥**

**ಕ್ರೀಡಮಾನೌ ಸ್ಥಿತೌ ತತ್ರ ವಿಚರಂತಾವಿತಸ್ತತಃ ।**

ಆಗ ಆ ವಿಷ್ಣುವಿನ ಕಿವಿಯ ಕೊಳೆಯಿಂದ ಮಹಾಪರಾಕ್ರಮಿಗಳಾದ ರಾಕ್ಷಸರಿಬ್ಬರು ಹುಟ್ಟಿದರು. ಅವರೇ ಮಧುಕೈಟಭರು. ಅವರು ಆ ಜಲದಲ್ಲಿ ದೊಡ್ಡದಾಗಿ ಬೆಳೆದು ಅಲ್ಲಲ್ಲಿ ಸಂಚರಿಸುತ್ತಾ ಕ್ರೀಡಿಸುತ್ತಿದ್ದರು.

**ತಾವೇಕದಾ ಮಹಾಕಾಯೌ ಕ್ರೀಡಾಸಕ್ತೌ ಮಹಾರ್ಣವೇ ॥೨೨॥**
**ಚಿಂತಾಮವಾಪತುಶ್ಚಿತ್ತೇ ಭ್ರಾತರಾವಿವ ಸಂಸ್ಥಿತೌ ।**

ಆ ಮಹಾ ಸಮುದ್ರದಲ್ಲಿ ಆಟವಾಡುತ್ತಲಿದ್ದ, ದೊಡ್ಡ ಶರೀರವನ್ನು ಹೊಂದಿದ್ದ ಅಣ್ಣತಮ್ಮಂದಿರಂತಿರತಕ್ಕ ಅವರಿಗೆ ಒಂದು ದಿವಸ ಮನಸ್ಸಿನಲ್ಲಿ ಆಲೋಚನೆಯೊಂದುಂಟಾಯಿತು.

**ನಾಕಾರಣಂ ಭವೇತ್ಕಾರ್ಯಂ ಸರ್ವತ್ರೈಷಾ ಪರಂಪರಾ ॥೨೩॥**

**ಆಧೇಯಂ ತು ವಿನಾಧಾರಂ ನ ತಿಷ್ಠತಿ ಕಥಂಚನ ।**
**ಆಧಾರಾಧೇಯಭಾವಸ್ತು ಭಾತಿ ನೋ ಚಿತ್ತಗೋಚರಃ ॥೨೪॥**

ಕಾರಣವಿಲ್ಲದೆ ಯಾವ ಕಾರ್ಯವೂ ಆಗಲಾರದು. ಇದು ಎಲ್ಲೆಡೆಗಳಲ್ಲಿಯೂ ಇರುವ ಪ್ರಕೃತಿನಿಯಮವು. ಅಂತೆಯೇ ಆಧಾರವೊಂದಿಲ್ಲದೆ ಯಾವ ಪದಾರ್ಥವೂ ಇರಲಾರದು. ಈಗಲಾದರೋ ಆಧಾರಾಧೇಯಭಾವವೇ ಮನಸ್ಸಿಗೆ ಕಾಣಿಸುವುದಿಲ್ಲ !

**ಕ್ವ ತಿಷ್ಠತಿ ಜಲಂ ಚೇದಂ ಸುಖರೂಪಂ ಸುವಿಸ್ತರಂ ।**
**ಕೇನ ಸೃಷ್ಟಂ ಕಥಂ ಜಾತಂ ಮಗ್ನಾವಾವಾಂ ಜಲೇ ಸ್ಥಿತೌ ॥೨೫॥**

ಇಷ್ಟು ವಿಸ್ತಾರವಾದ ಈ ಜಲವು ಯಾವ ತೊಂದರೆಯೂ ಇಲ್ಲದೆ ಯಾವುದರ ಮೇಲೆ ನಿಂತಿದೆ ? ಯಾರಿಂದ ಸೃಷ್ಟಿಸಲ್ಪಟ್ಟಿತು ? ಹೇಗಾಯಿತು ? ನಾವಾದರೂ ಈ ಜಲದಲ್ಲಿ ಹೇಗೆ ಮುಳುಗದೆ ನಿಂತಿರುತ್ತೇವೆ ?

**ಆವಾಂ ವಾ ಕಥಮುತ್ಪನ್ನೌ ಕೇನ ವೋತ್ಪಾದಿತಾವುಭೌ ।**
**ಪಿತರೌ ಕ್ವೇತಿ ವಿಜ್ಞಾನಂ ನಾಸ್ತಿ ಕಾಮಂ ತಥಾವಯೋಃ ॥೨೬॥**

ಅಲ್ಲದೆ ನಾವು ಹೇಗೆ ಹುಟ್ಟಿದೆವು ? ಯಾರಿಂದ ಹುಟ್ಟಿದೆವು ? ನಮಗೆ ತಂದೆ ತಾಯಿಗಳಾರು ? ಅವರು ಎಲ್ಲಿ ಇದ್ದಾರೆ ? ಎಂಬುದೇ ಸ್ವಲ್ಪವೂ ತಿಳಿಯದಾಗಿದೆ.

|| ಸೂತ ಉವಾಚ ||

**ಏವಂ ಕಾಮಯಮಾನೌ ತೌ ಜಗ್ಮತುರ್ನ ವಿನಿಶ್ಚಯಂ ।**
**ಉವಾಚ ಕೈಟಭಸ್ತತ್ರ ಮಧುಂ ಪಾರ್ಶ್ವೇ ಸ್ಥಿತಂ ಜಲೇ ॥೨೭॥**

ಸೂತಮುನಿಯು ಹೇಳುತ್ತಾನೆ—ಈ ರೀತಿಯಾಗಿ ಎಷ್ಟು ಯೋಚಿಸಿದರೂ ಆ ಮಧುಕೈಟಭರಿಗೆ ಯಾವುದೊಂದು ನಿಶ್ಚಯವೂ ಆಗಲಿಲ್ಲ. ಆಗ ಕೈಟಭನು ಹತ್ತಿರದಲ್ಲಿದ್ದ ಮಧುರಾಕ್ಷಸನನ್ನು ಕುರಿತು ಮುಂದೆ ಹೇಳುವಂತೆ ನುಡಿದನು.

|| ಕೈಟಭ ಉವಾಚ ||

**ಮಧೋ ವಾಮತ್ರ ಸಲಿಲೇ ಸ್ಥಾತುಂ ಶಕ್ತಿರ್ಮಹಾಬಲಾ ।**
**ವರ್ತತೇ ಭ್ರಾತರಚಲಾ ಕಾರಣಂ ಸಾ ಹಿ ಮೇ ಮತಾ ॥೨೮॥**

ಕೈಟಭನು ಹೇಳಿದನು—ಎಲೈ ಸಹೋದರನಾದ ಮಧುವೇ, ನೀರಿನಲ್ಲಿ ಯಾರೂ ಮುಳುಗದೆ ಇರಲಾರರು. ನಮಗಾದರೋ ಈ ಜಲದಲ್ಲಿ ನಿಲ್ಲುವ ಮಹಾ ಬಲಿಷ್ಠವಾದ ಶಕ್ತಿಯು ಸ್ವಲ್ಪವೂ ಚಲಿಸದೆ ಇರುತ್ತದೆ. ಬಹುಶಃ ಇದೇ ಇವೆಲ್ಲಕ್ಕೂ ಕಾರಣವಿರಬಹುದಾಗಿ ತೋರುತ್ತದೆ.

**ತಯಾ ತತಮಿದಂ ತೋಯಂ ತದಾಧಾರಂ ಚ ತಿಷ್ಠತಿ ।**
**ಸಾ ಏವ ಪರಮಾ ದೇವೀ ಕಾರಣಂ ಚ ತಥಾವಯೋಃ ॥೨೯॥**

ಆ ಶಕ್ತಿಯಿಂದಲೇ ಈ ಜಲವು ಆವರಿಸಲ್ಪಟ್ಟಿದೆ. ಹಾಗೂ ಆ ಶಕ್ತಿಯ ಆಧಾರದಿಂದಲೇ ಇರುತ್ತದೆ. ಆ ಶಕ್ತಿಯೇ ಪೂಜ್ಯಳಾದ ದೇವಿಯು; ಜಗತ್ತಿಗೆಲ್ಲಾ ಕಾರಣಳು; ನಮಗೂ ಕಾರಣಳು.

**ಏವಂ ವಿಬುಧ್ಯಮಾನೌ ತೌ ಚಿಂತಾವಿಷ್ಟೌ ಯದಾಽಸುರೌ ।**
**ತದಾಕಾಶೇ ಶ್ರುತಂ ತಾಭ್ಯಾಂ ವಾಗ್ಬೀಜಂ ಸುಮನೋಹರಂ ॥೩೦॥**

ಹೀಗೆ ಆ ಮಧುಕೈಟಭರು ಯೋಚಿಸುತ್ತಿರಲಾಗಿ ಆಗ ಆಕಾಶದಲ್ಲಿ ಮನೋಹರವಾದ ಸರಸ್ವತೀ ಮಂತ್ರದ ಬೀಜಾಕ್ಷರವು ಕೇಳಿಸಿತು.

**ಗೃಹೀತಂ ಚ ತತಸ್ತಾಭ್ಯಾಂ ತಸ್ಯಾಭ್ಯಾಸೋ ದೃಢಃ ಕೃತಃ ।**
**ತದಾ ಸೌದಾಮಿನೀ ದೃಷ್ಟಾ ತಾಭ್ಯಾಂ ಖೇ ಚೋತ್ಥಿತಾ ಶುಭಾ ॥೩೧॥**

ಅವರು ಆ ಬೀಜಮಂತ್ರವನ್ನು ಉಪದೇಶವಂತೆ ಸ್ವೀಕರಿಸಿದರು. ಅದರ ಅಭ್ಯಾಸವನ್ನು ಪುನಃ ಎಂದರೆ ಪುನಃ ಧ್ಯಾನವನ್ನು ಚನ್ನಾಗಿ ಮಾಡಿದರು. ಆಗ ಅವರಿಗೆ ಗಗನದಲ್ಲಿ ಮಂಗಳಕರವಾದ ವಿದ್ಯುತ್ತು ಹೊಳೆದುದು ಕಾಣಿಸಿತು.

**ತಾಭ್ಯಾಂ ವಿಚಾರಿತಂ ತತ್ರ ಮಂತ್ರೋಽಯಂ ನಾತ್ರ ಸಂಶಯಃ ।**
**ತಥಾ ಧ್ಯಾನಮಿದಂ ದೃಷ್ಟಂ ಗಗನೇ ಸಗುಣಂ ಕಿಲ ॥೩೨॥**

ತಿರುಗಿ ಅವರು ಆಲೋಚಿಸಿದರು—ನಾವು ಜಪಿಸಿರತಕ್ಕದ್ದು ಬೀಜಮಂತ್ರವೇ ಆಗಿರುತ್ತದೆ. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಏಕೆಂದರೆ, ಪಾಶ, ಅಂಕುಶ, ಜಪ ಮಾಲಾ ಇವುಗಳನ್ನು ಧರಿಸಿರತಕ್ಕ ಸರಸ್ವತೀಧ್ಯಾನವೇ ವಿದ್ಯುತ್ತಿನ ರೂಪವಾಗಿ ಈಗ ನಮಗೆ ಹೊಳೆದಿರುತ್ತದೆ.

**ನಿರಾಹಾರೌ ಜಿತಾತ್ಮಾನೌ ತನ್ಮನಸ್ಕೌ ಸಮಾಹಿತೌ ।**
**ಬಭೂವತುರ್ವಿಚಿಂತ್ಯೈವಂ ಜಪಧ್ಯಾನಪರಾಯಣೌ ॥೩೩॥**

ಹೀಗೆ ಅವರು ಆಲೋಚಿಸಿ, ಆಹಾರವನ್ನು ಸೇವಿಸದೆ, ಜಿತೇಂದ್ರಿಯರಾಗಿ ಜಪಮಾಡುತ್ತಲೂ, ಆ ಸಗುಣದೇವಿಯಲ್ಲಿ ನಟ್ಟದೃಷ್ಟಿಯುಳ್ಳವರಾಗಿ ಧ್ಯಾನವನ್ನು ಮಾಡುತ್ತಾ ಸಮಾಧಿಯಲ್ಲಿ ಕುಳಿತರು.

**ಏವಂ ವರ್ಷಸಹಸ್ರಂ ತು ತಾಭ್ಯಾಂ ತಪ್ತಂ ಮಹತ್ತಪಃ ।**
**ಪ್ರಸನ್ನಾ ಪರಮಾ ಶಕ್ತಿರ್ಜಾತಾ ಸಾ ಪರಮಾ ತಯೋಃ ॥೩೪॥**

ಹೀಗೆ ಮಧುಕೈಟಭರು ಸಾವಿರವರ್ಷಗಳವರೆಗೆ ದೊಡ್ಡದಾಗಿ ತಪಸ್ಸನ್ನು ಆಚರಿಸಿದರು. ಆಗ ಶ್ರೇಷ್ಠಳಾದ ಪರಾಶಕ್ತಿದೇವಿಯು ಅವರಿಗೆ ಪ್ರಸನ್ನಳಾದಳು.

**ಖಿನ್ನೌ ತೌ ದಾನವೌ ದೃಷ್ಟ್ವಾ ತಪಸೇ ಕೃತನಿಶ್ಚಯೌ ।**
**ತಯೋರನುಗ್ರಹಾರ್ಥಾಯ ವಾಗುವಾಚಾಶರೀರಿಣೀ ॥೩೫॥**

ಸಾವಿರವರ್ಷಗಳವರೆಗೆ ತಪಸ್ಸನ್ನು ಮಾಡಿ ಬಹಳ ಆಯಾಸಗೊಂಡ, ಆದರೂ ತಿರುಗಿ ತಪಸ್ಸಿಗೆ ಸಿದ್ಧರಾಗುತ್ತಿದ್ದ ಆ ರಾಕ್ಷಸರನ್ನು ನೋಡಿ ಆ ದೇವಿಯು ಅವರನ್ನು ಅನುಗ್ರಹಿಸುವುದಕ್ಕೋಸ್ಕರ ಅವರಿಗೆ ಕಾಣಿಸದೆ ಅಂತರ್ಹಿತಳಾಗಿದ್ದು ಕೊಂಡೇ ಆಕಾಶವಾಣಿಯಲ್ಲಿ ಅವರಿಗೆ ಕೇಳಿಸುವಂತೆ ಹೇಳಿದಳು.

**ವರಂ ವಾ ವಾಂಛಿತಂ ದೈತ್ಯೌ ಬ್ರೂತಾಂ ಪರಮಸಂಮತಂ ।**
**ದದಾಮಿ ಪರಿತುಷ್ಟಾಸ್ಮಿ ಯುವಯೋಸ್ತಪಸಾ ಕಿಲ ॥೩೬॥**

ಎಲೈ ರಾಕ್ಷಸರೇ, ನಿಮಗೆ ಅತ್ಯಂತ ಇಷ್ಟವಾದ ವರವನ್ನು ಕೇಳಿಕೊಳ್ಳಿರಿ, ಕೊಡುತ್ತೇನೆ. ನಾನು ನಿಮ್ಮ ತಪಸ್ಸಿನಿಂದ ಸಂತುಷ್ಟಳಾಗಿರುತ್ತೇನೆ.

**ಇತಿ ಶ್ರುತ್ವಾ ತು ತಾಂ ವಾಣೀಂ ದಾನವಾವೂಚತುಸ್ತದಾ ।**
**ಸ್ವೇಚ್ಛಯಾ ಮರಣಂ ದೇವಿ ವರಂ ನೌ ದೇಹಿ ಸುವ್ರತೇ ॥೩೭॥**

ಸೂತಮುನಿಯು ಹೇಳುತ್ತಾನೆ. ಅವರು ದೇವಿಯ ಆ ಮಾತನ್ನು ಕೇಳಿ ಹೀಗೆ ಹೇಳಿದರು. ಸತ್ಯಪರಳಾದ ಎಲೌ ದೇವಿಯೇ, ನಮಗೆ ನಾವು ಇಷ್ಟಪಟ್ಟಾಗ ಸಾವು ಬರುವಂತೆ ಅನುಗ್ರಹಿಸು.

|| ವಾಗುವಾಚ ||

**ವಾಂಛಿತಂ ಮರಣಂ ದೈತ್ಯೌ ಭವೇತಾಂ ಮತ್ಪ್ರಸಾದತಃ ।**
**ಅಜೇಯೌ ದೇವದೈತ್ಯೈಶ್ಚ ಭ್ರಾತರೌ ನಾತ್ರ ಸಂಶಯಃ ॥೩೮॥**

ಅಶರೀರವಾಣಿಯಿಂದ ದೇವಿಯು ಹೇಳಿದಳು—ಎಲೈ ದೈತ್ಯರೇ, ನಿಮಗೆ ನನ್ನ ಅನುಗ್ರಹದಿಂದ ನೀವು ಇಷ್ಟಪಟ್ಟಾಗ ಮರಣವುಂಟಾಗುತ್ತದೆ. ಹಾಗೂ ಅಣ್ಣತಮ್ಮಂದಿರಾದ ನಿಮ್ಮನ್ನು ದೇವತೆಗಳಾಗಲೀ ರಾಕ್ಷಸರಾಗಲೀ ಯಾರೂ ಜಯಿಸಲಾರರು. ನಿಮಗೆ ಈ ವರಗಳನ್ನು ಕೊಟ್ಟಿದ್ದೇನೆ, ಸಂದೇಹವಿಲ್ಲವು.

|| ಸೂತ ಉವಾಚ ||

**ಇತಿ ದತ್ತವರೌ ದೇವ್ಯಾ ದಾನವೌ ಮುದದರ್ಪಿತೌ ।**
**ಚಕ್ರತುಃ ಸಾಗರೇ ಕ್ರೀಡಾಂ ಯಾದೋಗಣಸಮನ್ವಿತೌ ॥೩೯॥**

ಸೂತಮುನಿಯು ಹೇಳುತ್ತಾನೆ—ಹೀಗೆ ಆ ರಾಕ್ಷಸರು ದೇವಿಯಿಂದ ವರವನ್ನು ಪಡೆದು, ಬಹಳ ಕೊಬ್ಬಿಕೊಂಡು, ಜಲಜಂತುಗಳೊಡನೆ ಸಮುದ್ರದಲ್ಲಿ ಆಟವಾಡತೊಡಗಿದರು.

**ಕಾಲೇನ ಕಿಯತಾ ವಿಪ್ರಾ ದಾನವಾಭ್ಯಾಂ ಯದೃಚ್ಛಯಾ ।**
**ದೃಷ್ಟಃ ಪ್ರಜಾಪತಿರ್ಬ್ರಹ್ಮಾ ಪದ್ಮಾಸನಗತಃ ಪ್ರಭುಃ ॥೪೦॥**

ಕೆಲವು ಕಾಲದ ಮೇಲೆ ಆ ಮಧುಕೈಟಭರು ಆ ಸಮುದ್ರದಲ್ಲಿ ತಿರುಗುತ್ತಾ ಅಕಸ್ಮಾತ್ತಾಗಿ ವಿಷ್ಣುವಿನ ನಾಭಿಕಮಲದಲ್ಲಿರತಕ್ಕ ಜಗತ್ಪ್ರಭುವಾದ ಪಿತಾಮಹನನ್ನು ನೋಡಿದರು.

**ದೃಷ್ಟ್ವಾ ತು ಮುದಿತಾವಾಸ್ತಾಂ ಯುದ್ಧಕಾಮೌ ಮಹಾಬಲೌ ।**
**ತಮೂಚತುಸ್ತದಾ ತತ್ರ ಯುದ್ಧಂ ನೌ ದೇಹಿ ಸುವ್ರತ ॥೪೧॥**

ಆ ಬ್ರಹ್ಮನನ್ನು ನೋಡಿ ರಾಕ್ಷಸರು ಅವನೊಡನೆ ಯುದ್ಧಮಾಡಬೇಕೆಂಬ ಇಚ್ಛೆಯಿಂದ ತುಂಬಾ ಸಂತುಷ್ಟರಾದರು. ಹಾಗೂ ಬ್ರಹ್ಮನನ್ನು ಕುರಿತು ಎಲೈ ಸತ್ಯ ಪರನಾದ ಬ್ರಹ್ಮನೇ, ನೀನು ನಮ್ಮೊಡನೆ ಯುದ್ಧವನ್ನು ಮಾಡು ಎಂದು ಹೇಳಿದರು.

**ನೋ ಚೇತ್ಪದ್ಮಂ ಪರಿತ್ಯಜ್ಯ ಯಥೇಷ್ಟಂ ಗಚ್ಛ ಮಾಚಿರಂ ।**
**ಯದಿ ತ್ವಂ ನಿರ್ಬಲಶ್ಚಾಸಿ ಕ್ವ ಯೋಗ್ಯಂ ಶುಭಮಾಸನಂ ॥೪೨॥**

ನೀನು ಯುದ್ಧಮಾಡಲಸಮರ್ಥನಾದರೆ ಕೂಡಲೇ ಈ ಪದ್ಮವನ್ನು ಬಿಟ್ಟು ಹೊರಡು. ತಡಮಾಡಬೇಡ. ನೀನು ದುರ್ಬಲನಾಗಿದ್ದರೆ ನಿನಗೆ ಈ ಮಂಗಳಕರ ವಾದ ಕಮಲಾಸನವು ಯೋಗ್ಯವಾದುದಲ್ಲವು.

**ವೀರಭೋಗ್ಯಮಿದಂ ಸ್ಥಾನಂ ಕಾತರೋಽಸಿ ತ್ಯಜಾಶು ವೈ ।**
**ತಯೋರಿತಿ ವಚಃ ಶ್ರುತ್ವಾ ಚಿಂತಾಮಾಪ ಪ್ರಜಾಪತಿಃ ॥೪೩॥**

ಈ ಸ್ಥಾನವು ವೀರರಿಗೆ ಮಾತ್ರ ತಕ್ಕುದು. ನೀನು ಅಂಜುಪುರಕನಾಗಿರುತ್ತೀಯೆ. ಜಾಗ್ರತೆ ಈ ಸ್ಥಾನವನ್ನು ಬಿಟ್ಟೇಳು ಎಂದು ಹೆದರಿಸಿದರು. ಅವರ ಈ ರೀತಿಯಾದ ಮಾತನ್ನು ಕೇಳಿ ಜಗತ್ತಿಗೆ ಒಡೆಯನಾದ ಬ್ರಹ್ಮನು ತುಂಬಾ ಯೋಚನೆಗೊಳಗಾದನು.

**ದೃಷ್ಟ್ವಾ ಚ ಬಲಿನೌ ವೀರೌ ಕಿಂ ಕರೋಮೀತಿ ತಾಪಸಃ ।**
**ಚಿಂತಾವಿಷ್ಟಸ್ತದಾ ತಸ್ಥೌ ಚಿಂತಯನ್ಮನಸಾ ತದಾ ॥೪೪॥**

ಹೀಗೆ ತಪಸ್ವಿಯಾದ ಬ್ರಹ್ಮನು ಬಲಶಾಲಿಗಳೂ ಮತ್ತು ವೀರರೂ ಆದ ಆ ದೈತ್ಯರನ್ನು ನೋಡಿ "ಏನು ಮಾಡಲಿ" ಎಂದು ದೀನತೆಯಿಂದ ಬಹಳ ಚಿಂತೆ ಗೊಳಗಾಗಿ ಮನಸ್ಸಿನಲ್ಲಿಯೇ ಉಪಾಯವನ್ನು ಯೋಚಿಸಹತ್ತಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಷಷ್ಠೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಮೊದಲನೆಯ ಸ್ಕಂಧದಲ್ಲಿ ಆರನೆಯ ಅಧ್ಯಾಯವು ಮುಗಿದುದು

॥ ಶ್ರೀರಸ್ತು ॥

|| ಶ್ರೀಃ ||

# ಅಥ ದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ಸಪ್ತಮೋಽಧ್ಯಾಯಃ ||

### ಏಳನೆಯ ಅಧ್ಯಾಯವು

|| ಸೂತ ಉವಾಚ ||

**ತೌ ವೀಕ್ಷ್ಯ ಬಲಿನೌ ಬ್ರಹ್ಮಾ ತದೋಪಾಯಾನಚಿಂತಯತ್ ।**
**ಸಾಮದಾನಭಿದಾದೀಂಶ್ಚ ಯುದ್ಧಾಂತಾನ್ ಸರ್ವತಂತ್ರವಿತ್ ॥೧॥**

ಸೂತಮುನಿಯು ಹೇಳುತ್ತಾನೆ—ಬಲಶಾಲಿಗಳಾದ ಆ ಮಧುಕೈಟಭರನ್ನು ನೋಡಿ, ಎಲ್ಲಾ ನೀತಿಶಾಸ್ತ್ರಗಳ ಸಿದ್ಧಾಂತಗಳನ್ನೂ ತಿಳಿದವನಾದ ಬ್ರಹ್ಮನು, ಆಗ ಸಾಮ, ದಾನ, ಭೇದ, ದಂಡವೆಂಬ ನಾಲ್ಕು ಉಪಾಯಗಳನ್ನೂ ಅವರ ಸಂಹಾರಕ್ಕಾಗಿ ಯೋಚಿಸಿದನು.

**ನ ಜಾನೇಽಹಂ ಬಲಂ ನೂನಮೇತಯೋರ್ವಾ ಯಥಾತಥಂ ।**
**ಅಜ್ಞಾತೇ ತು ಬಲೇ ಕಾಮಂ ನೈವ ಯುದ್ಧಂ ಪ್ರಶಸ್ಯತೇ ॥೨॥**

ನಾನು ನಿಶ್ಚಯವಾಗಿಯೂ ಇವರುಗಳಿಗಿರುವ ಸಾಮರ್ಥ್ಯವನ್ನು ಸರಿಯಾಗಿ ತಿಳಿದಿಲ್ಲವು. ಅವರ ಸಾಮರ್ಥ್ಯವನ್ನು ತಿಳಿಯದೆ ಅವನೊಡನೆ ಯುದ್ಧಮಾಡುವುದು ಸರಿಯಾದುದಲ್ಲವು.

**ಸ್ತುತಿಂ ಕರೋಮಿ ಚೇದದ್ಯ ದುಷ್ಟಯೋರ್ಮದಮತ್ತಯೋಃ ।**
**ಪ್ರಕಾಶಿತಂ ಭವೇನ್ನೂನಂ ನಿರ್ಬಲತ್ವಂ ಮಯಾ ಸ್ವಯಂ ॥೩॥**

ಈಗ ನಾನು ಇವರನ್ನು ಹೊಗಳಿದ್ದೇ ಆದರೆ ಮದದಿಂದ ಕೊಬ್ಬಿರುವ ದುಷ್ಟರಾದ ಇವರು ನಾನು ಬಲವಿಲ್ಲದವನೆಂದು ತಿಳಿಯುವರಲ್ಲದೆ ಆ ವಿಷಯವನ್ನು ನಾನಾಗಿಯೇ ಪ್ರಕಟಮಾಡಿದ ಹಾಗಾಗುವುದರಲ್ಲಿ ಸಂದೇಹವಿಲ್ಲವು.

**ವಧಿಷ್ಯತಿ ತದೈಕೋಽಪಿ ನಿರ್ಬಲತ್ವೇ ಪ್ರಕಾಶಿತೇ ।**
**ದಾನಂ ನೈವಾದ್ಯ ಯೋಗ್ಯಂ ವಾ ಭೇದಃ ಕಾರ್ಯೋ ಮಯಾ ಕಥಂ ॥೪॥**

ನಾನು ಹಾಗೆ ಬಲವಿಲ್ಲದವನೆಂದು ಪ್ರಕಟಮಾಡಿದರೆ ಇವರಲ್ಲಿ ಒಬ್ಬನೇ ನನ್ನನ್ನು ಕೊಂದುಬಿಡುತ್ತಾನೆ. ಆದುದರಿಂದ ಯುದ್ಧಮಾಡುವುದು ಯುಕ್ತವಲ್ಲವು. ಭೇದೋಪಾಯವನ್ನು ಮಾಡೋಣವೆಂದರೆ ನಾನು ಅದನ್ನು ಹೇಗೆ ಮಾಡಲಿ ? ಎಂದರೆ ಅದೂ ಸಾಧ್ಯವಿಲ್ಲ. ಈ ಸಮಯದಲ್ಲಿ ದಾನೋಪಾಯವು ಮಾಡಲು ಅರ್ಹವಾದುದಲ್ಲ. ದುಷ್ಟರಾದುದರಿಂದ ಸಾಮವಂತೂ ಪ್ರಯೋಜನವಿಲ್ಲವೆಂದು ಅರ್ಥಾತ್ ಸಿದ್ಧವು. 'ದುಷ್ಟೇ ದುಷ್ಟಂ ಸಮಾಚರೇತ್' ಎಂದು ನೀತಿಶಾಸ್ತ್ರವು ಬೋಧಿಸುತ್ತಿದೆ.

**ವಿಷ್ಣುಂ ಪ್ರಬೋಧಯಾಮ್ಯದ್ಯ ಶೇಷೇ ಸುಪ್ತಂ ಜನಾರ್ದನಂ ।**
**ಚತುರ್ಭುಜಂ ಮಹಾವೀರ್ಯಂ ದುಃಖಹಾ ಸ ಭವಿಷ್ಯತಿ ॥೫॥**

ಆದುದರಿಂದ ನಾಲ್ಕು ತೋಳುಗಳುಳ್ಳವನಾಗಿಯೂ, ಬಹಳ ಪರಾಕ್ರಮಶಾಲಿಯಾಗಿಯೂ, ಆದಿಶೇಷನ ಮೇಲೆ ಮಲಗಿದವನಾಗಿಯೂ ಇರುವ ವಿಷ್ಣುವನ್ನು ಈ ಸಮಯದಲ್ಲಿ ಎಚ್ಚರಗೊಳಿಸುತ್ತೇನೆ. ಅವನು ನನ್ನ ದುಃಖವನ್ನು ಪರಿಹಾರ ಮಾಡುವನು.

**ಇತಿ ಸಂಚಿಂತ್ಯ ಮನಸಾ ಪದ್ಮನಾಳಗತೋಽಬ್ಜಜಃ ।**
**ಜಗಾಮ ಶರಣಂ ವಿಷ್ಣುಂ ಮನಸಾ ದುಃಖನಾಶಕಂ ॥೬॥**

ಈ ರೀತಿಯಾಗಿ ಮನಸ್ಸಿನಲ್ಲಿ ಯೋಚಿಸಿ ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮನು, ಎಲ್ಲಾ ದುಃಖಗಳನ್ನು ಪರಿಹಾರಮಾಡುವ ವಿಷ್ಣುವನ್ನು ಮನಸ್ಸಿನಿಂದಲೇ ಶರಣುಹೊಂದಿದನು, ಅಂದರೆ ಧ್ಯಾನಮಾಡಿದನು.

**ತುಷ್ಟಾವ ಬೋಧನಾರ್ಥಂ ತಂ ಶುಭೈಃ ಸಂಬೋಧನೈರ್ಹರಿಂ ।**
**ನಾರಾಯಣಂ ಜಗನ್ನಾಥಂ ನಿಸ್ಸ್ಪಂದಂ ಯೋಗನಿದ್ರಯಾ ॥೭॥**

ಯೋಗನಿದ್ರೆಯಲ್ಲಿ ಅಲುಗಾಡದೆ ಮಲಗಿರುವ, ಜಗತ್ತಿಗೆಲ್ಲಾ ಒಡೆಯನಾದ ನಾರಾಯಣನನ್ನು ಎಚ್ಚರಗೊಳಿಸುವುದಕ್ಕಾಗಿ ಅನೇಕ ವಿಧವಾದ ಸಂಬೋಧನೆ [ಎಚ್ಚರವನ್ನುಂಟುಮಾಡುವ ವಾಕ್ಯ]ಗಳಿಂದ ಸ್ತೋತ್ರಮಾಡಿದನು.

॥ ಬ್ರಹ್ಮೋವಾಚ ॥

**ದೀನನಾಥ ಹರೇ ವಿಷ್ಣೋ ವಾಮನೋತ್ತಿಷ್ಠ ಮಾಧವ ।**
**ಭಕ್ತಾರ್ತಿಹೃದ್ಧೃಷೀಕೇಶ ಸರ್ವಾವಾಸ ಜಗತ್ಪತೇ ॥೮॥**

ದುಃಖಿತರನ್ನು ಕಾಪಾಡುವ, ಪಾಪವನ್ನು ನಾಶಗೊಳಿಸುವ, ವ್ಯಾಪಕನಾದ ವಾಮನವತಾರವನ್ನು ಮಾಡಿದ, ಲಕ್ಷ್ಮೀಪತಿಯಾದ, ಭಕ್ತರ ಸಂಕಟಗಳನ್ನು ಪರಿಹರಿಸುವ, ಎಲ್ಲಾ ಇಂದ್ರಿಯಗಳಿಗೂ ಒಡೆಯನಾದ, ಎಲ್ಲಾ ವಸ್ತುಗಳಿಗೆ ಆಶ್ರಯನಾದ, ಜಗತ್ತನ್ನೇ ರಕ್ಷಿಸುವ ಓವಿಷ್ಣುವೇ, ಏಳು.

**ಅಂತರ್ಯಾಮಿನ್ನಮೇಯಾತ್ಮನ್ ವಾಸುದೇವ ಜಗತ್ಪತೇ ।**
**ದುಷ್ಟಾರಿನಾಶನೈಕಾಗ್ರಚಿತ್ತ ಚಕ್ರಗದಾಧರ ॥೯॥**

**ಸರ್ವಜ್ಞ ಸರ್ವಲೋಕೇಶ ಸರ್ವಶಕ್ತಿಸಮನ್ವಿತ ।**
**ಉತ್ತಿಷ್ಠೋತ್ತಿಷ್ಠ ದೇವೇಶ ದುಃಖನಾಶನ ಪಾಹಿ ಮಾಂ ॥೧೦॥**

ಎಲ್ಲಾ ಪ್ರಾಣಿಗಳ ಹೃದಯದಲ್ಲಿ ವಾಸಮಾಡುತ್ತಾ, ಕೆಟ್ಟಕೆಲಸಗಳನ್ನು ಮಾಡದಂತೆಯೂ, ಒಳ್ಳೆಯ ಕೆಲಸವನ್ನು ಮಾಡುವಂತೆಯೂ ಪ್ರೇರಿಸುತ್ತಿರುವವನೇ, ಅಳತೆಗೆ ನಿಲುಕದ ಶರೀರವುಳ್ಳವನೇ, ಎಲ್ಲಾ ಭೂತಗಳಿಗೂ ಆಶ್ರಯನೂ ಎಲ್ಲಾ ಪ್ರಾಣಿಗಳಲ್ಲಿ ವಾಸಮಾಡುವವನೂ ಆದವನೇ, ದುಷ್ಟರಾದ ಶತ್ರುಗಳನ್ನು ನಾಶಮಾಡುವುದರಲ್ಲಿ ಆಸಕ್ತವಾದ ಮನಸ್ಸುಳ್ಳವನೇ, ಚಕ್ರ, ಗದೆ ಎಂಬ ಆಯುಧಗಳನ್ನು ಧರಿಸಿರುವವನೇ, ಎಲ್ಲವನ್ನೂ ತಿಳಿದಿರುವವನೇ, ಎಲ್ಲಾ ಲೋಕಗಳಿಗೂ ಒಡೆಯನೇ ಎಲ್ಲಾ ಶಕ್ತಿಗಳಿಂದಲೂ ಕೂಡಿರುವವನೇ, ದೇವತೆಗಳ ರಕ್ಷಕನೇ, ಏಳು. ಭಕ್ತರ ದುಃಖಗಳನ್ನು ನಿವಾರಿಸುವ ವಿಷ್ಣುವೇ, ಎದ್ದು ನನ್ನನ್ನು ಕಾಪಾಡು.

**ವಿಶ್ವಂಭರ ವಿಶಾಲಾಕ್ಷ ಪುಣ್ಯಶ್ರವಣಕೀರ್ತನ ।**
**ಜಗದ್ಯೋನೇ ನಿರಾಕಾರ ಸರ್ಗಸ್ಥಿತ್ಯಂತಕಾರಕ ॥೧೧॥**

ಜಗತ್ತನ್ನು ಕಾಪಾಡುವವನೇ, ವಿಸ್ತಾರವಾದ ಕಣ್ಣುಳ್ಳವನೇ, ನಿನ್ನ ನಾಮಗಳನ್ನು ಕೇಳುವುದರಿಂದಲೂ ನಿನ್ನ ಕಥೆಯನ್ನು ಓದುವುದರಿಂದಲೂ ಕೇಳುವುದರಿಂದಲೂ ಪುಣ್ಯವನ್ನುಂಟುಮಾಡುವವನೇ, ಆಕಾರವಿಲ್ಲದವನೇ, ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವವನೇ

**ಇಮೌ ದೈತ್ಯೌ ಮಹಾರಾಜ ಹಂತುಕಾಮೌ ಮದೋದ್ಧತೌ ।**
**ನ ಜಾನಾಸ್ಯಖಿಲಾಧಾರ ಕಥಂ ಮಾಂ ಸಂಕಟೇ ಗತಂ ॥೧೨॥**

ಓ ಮಹಾರಾಜನೇ, ಮದದಿಂದ ಕೊಬ್ಬಿರುವ ಈ ರಾಕ್ಷಸರು ನನ್ನನ್ನು ಕೊಲ್ಲಲು ಪ್ರಯತ್ನಮಾಡುತ್ತಿದ್ದಾರೆ. ನೀನು ಎಲ್ಲಾ ವಸ್ತುಗಳಿಗೂ ಆಧಾರವಾದವನು· ಆದರೂ ಈರೀತಿಯಾದ ಸಂಕಟಕ್ಕೊಳಗಾದ ನನ್ನನ್ನು ನೀನು ಹೇಗೆ ತಿಳಿಯದೇ ಇರುವೆ ?

**ಉಪೇಕ್ಷಸೇಽತಿದುಃಖಾರ್ತಂ ಯದಿ ಮಾಂ ಶರಣಂ ಗತಂ ।**
**ಪಾಲಕತ್ವಂ ಮಹಾವಿಷ್ಣೋ ನಿರಾಧಾರಂ ಭವೇತ್ತ್ವತಃ ॥೧೩॥**

ಬಹಳ ದುಃಖಪೀಡಿತನೂ ಶರಣಾಗತನೂ ಆದ ನನ್ನನ್ನು ನೀನು ರಕ್ಷಿಸದೆ ಉಪೇಕ್ಷೆಮಾಡಿದರೆ ' ನೀನು ಎಲ್ಲವನ್ನೂ ಕಾಪಾಡುವವನು ' ಎಂದು ಹೇಳುವ ಮಾತು ನಿರಾಧಾರವಾದುದಾಗುವುದು.

**ಏವಂ ಸ್ತುತೋಽಪಿ ಭಗವಾನ್ನ ಬುಬೋಧ ಯದಾ ಹರಿಃ ।**
**ಯೋಗನಿದ್ರಾಸಮಾಕ್ರಾಂತಸ್ತದಾ ಬ್ರಹ್ಮಾ ಹ್ಯಚಿಂತಯತ್ ॥೧೪॥**

ಈ ರೀತಿಯಾಗಿ ಸ್ತೋತ್ರಮಾಡಿದಾಗ್ಯೂ ಯೋಗನಿದ್ರೆಯಿಂದ ಆಕ್ರಮಿಸಲ್ಪಟ್ಟಿದ್ದ ವಿಷ್ಣುವು ಎಚ್ಚರಗೊಳ್ಳದಿರಲು ಬ್ರಹ್ಮನು ಈರೀತಿಯಾಗಿ ಯೋಚಿಸಿದನು.

**ನೂನಂ ಶಕ್ತಿಸಮಾಕ್ರಾಂತೋ ವಿಷ್ಣುರ್ನಿದ್ರಾವಶಂ ಗತಃ ।**
**ಜಜಾಗಾರ ನ ಧರ್ಮಾತ್ಮಾ ಕಿಂಕರೋಮ್ಯದ್ಯ ದುಃಖಿತಃ ॥೧೫॥**

ಈ ವಿಷ್ಣುವು ನಿಶ್ಚಯವಾಗಿಯೂ ಶಕ್ತಿಗೆ ಅಧೀನನಾಗಿ ನಿದ್ರೆಮಾಡುತ್ತಲಿದ್ದಾನೆ. ಆದುದರಿಂದಲೇ ಧರ್ಮಿಷ್ಠನಾದ ವಿಷ್ಣುವು, ನಾನು ಸ್ತೋತ್ರಮಾಡಿದರೂ ಕೂಡ ಎಚ್ಚರಗೊಳ್ಳುವುದಿಲ್ಲ. ದುಃಖಿತನಾದ ನಾನು ಈಗ ಏನು ಮಾಡಲಿ ?

**ಹಂತುಕಾಮಾವುಭೌ ಪ್ರಾಪ್ತೌ ದಾನವೌ ಮದಗರ್ವಿತೌ ।**
**ಕಿಂ ಕರೋಮಿ ಕ್ವ ಗಚ್ಛಾಮಿ ನಾಸ್ತಿ ಮೇ ಶರಣಂ ಕ್ವಚಿತ್ ॥೧೬॥**

**ಇತಿ ಸಂಚಿಂತ್ಯ ಮನಸಾ ನಿಶ್ಚಯಂ ಪ್ರತಿಪದ್ಯ ಚ ।**
**ತುಷ್ಟಾವ ಯೋಗನಿದ್ರಾಂ ತಾಮೇಕಾಗ್ರಹೃದಯಸ್ಥಿತಃ ॥೧೭॥**

ಮದದಿಂದ ದುರಹಂಕಾರವುಳ್ಳವರಾದ ಈ ಇಬ್ಬರು ರಾಕ್ಷಸರೂ ನನ್ನನ್ನು ಕೊಲ್ಲಲಪೇಕ್ಷಿಸಿ ಬರುತ್ತಿದ್ದಾರೆ. ನನಗೆ ಯಾರೂ ರಕ್ಷಕರಿಲ್ಲವಲ್ಲ. ಈಗ ನಾನು ಏನನ್ನು ಮಾಡಲಿ? ಎಲ್ಲಿ ಹೋಗಲಿ? ಎಂಬುದಾಗಿ ಯೋಚಿಸಿ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು, ಯೋಗನಿದ್ರಾಸ್ವರೂಪಳಾದ ಆ ಶಕ್ತಿಯನ್ನು ನಿಶ್ಚಲವಾದ ಮನಸ್ಸಿನಿಂದ ಸ್ತೋತ್ರಮಾಡಿದನು.

**ವಿಚಾರ್ಯ ಮನಸಾಪ್ಯೇವಂ ಶಕ್ತಿರ್ಮೇ ರಕ್ಷಣೇ ಕ್ಷಮಾ ।**
**ಯಯಾ ಹ್ಯಚೇತನೋ ವಿಷ್ಣುಃ ಕೃತೋಽಸ್ತಿ ಸ್ಪಂದವರ್ಜಿತಃ ॥೧೮॥**

ಯಾವ ಯೋಗನಿದ್ರೆಯ ಶಕ್ತಿಯಿಂದ ವಿಷ್ಣುವು ಚಲನಾದಿಗಳಿಲ್ಲದೆ ಅಚೇತನ ವಸ್ತುವಿನ ಹಾಗೆ ಮಾಡಲ್ಪಟ್ಟಿದ್ದಾನೆಯೋ, ಆ ನಿದ್ರಾರೂಪವಾದ ಶಕ್ತಿಯೇ ನನ್ನನ್ನು ಕಾಪಾಡಲು ಸಮರ್ಥಳು ಎಂದು ಮನಸ್ಸಿನಲ್ಲಿ ಆಲೋಚಿಸಿದನು.

**ವ್ಯಸುರ್ಯಥಾ ನ ಜಾನಾತಿ ಗುಣಾನ್ ಶಬ್ದಾದಿಕಾನಿಹ ।**
**ತಥಾ ಹರಿರ್ನ ಜಾನಾತಿ ನಿದ್ರಾಮೀಲಿತಲೋಚನಃ ॥೧೯॥**

ಪ್ರಾಣವಿಲ್ಲದವನು ಹೇಗೆ ಶಬ್ದಸ್ಪರ್ಶ ಮೊದಲಾದ ಗುಣಗಳನ್ನು ತಿಳಿಯಲಾರನೋ ಹಾಗೆ ನಿದ್ರೆಯಿಂದ ಕವಿಯಲ್ಪಟ್ಟ ಕಣ್ಣುಳ್ಳ ವಿಷ್ಣುವೂ ಕೂಡ ಶಬ್ದಾದಿಗಳನ್ನು ತಿಳಿಯಲಾರದವನಾಗಿರುತ್ತಾನೆ.

**ನ ಜಹಾತಿ ಯತೋ ನಿದ್ರಾಂ ಬಹುಧಾ ಸಂಸ್ತುತೋಽಪ್ಯಸೌ ।**
**ಮನ್ಯೇ ನಾಸ್ಯ ವಶೇ ನಿದ್ರಾ ನಿದ್ರಯಾಯಂ ವಶೀಕೃತಃ ॥೨೦॥**

ಎಷ್ಟುವಿಧವಾಗಿ ಸ್ತೋತ್ರಮಾಡಿದರೂ ಈ ವಿಷ್ಣುವು ನಿದ್ರೆಯನ್ನು ಬಿಡದೆ ಇದ್ದಾನೆ. ಆದುದರಿಂದ ನಿದ್ರೆಯು ಇವನ ಅಧೀನವಾಗಿಲ್ಲ. ಇವನೇ ನಿದ್ರೆಯ ವಶನಾಗಿರುತ್ತಾನೆಂದು ನಾನು ಊಹಿಸುತ್ತೇನೆ.

**ಯೋ ಯಸ್ಯ ವಶಮಾಪನ್ನಃ ಸ ತಸ್ಯ ಕಿಂಕರಃ ಕಿಲ ।**
**ತಸ್ಮಾಚ್ಚ ಯೋಗನಿದ್ರೇಯಂ ಸ್ವಾಮಿನೀ ಮಾಪತೇರ್ಹರೇಃ ॥೨೧॥**

ಯಾರು ಯಾರ ಅಧೀನವಾಗಿರುತ್ತಾರೋ ಅವರು ಅವರ ಸೇವಕರಾಗಿರುತ್ತಾರಷ್ಟೆ. ಆದುದರಿಂದ ಯೋಗನಿದ್ರೆಗೆ ಅಧೀನನಾಗಿರುವುದರಿಂದ ಲಕ್ಷ್ಮೀಪತಿಯಾದ ಈ ವಿಷ್ಣುವಿಗೆ ಯೋಗನಿದ್ರೆಯು ಒಡೆಯಳಾಗಿರುತ್ತಾಳೆ.

**ಸಿಂಧುಜಾಯಾ ಅಪಿ ವಶೇ ಯಯಾ ಸ್ವಾಮೀ ವಶೀಕೃತಃ ।**
**ನೂನಂ ಜಗದಿದಂ ಸರ್ವಂ ಭಗವತ್ಯಾ ವಶೀಕೃತಂ ॥೨೨॥**

ಈ ವಿಷ್ಣುವು ಸಮುದ್ರರಾಜನ ಮಗಳಾದ ಲಕ್ಷ್ಮಿಗೇ ಅಧೀನನಾಗಿರುವುದ ರಿಂದ, ನಿದ್ರಾರೂಪಿಣಿಯಾದ ಶಕ್ತಿಗೆ ಅಧೀನನಾಗಿದ್ದಾನೆಂಬುದೇನಾಶ್ಚರ್ಯವು? ವಿಷ್ಣುವಿರಲಿ, ಈ ಜಗತ್ತೆಲ್ಲವೂ ಪೂಜ್ಯಳಾದ ಆ ಶಕ್ತಿಯಿಂದ ವಶಮಾಡಿಕೊಳ್ಳಲ್ಪಟ್ಟಿದೆ.

**ಅಹಂ ವಿಷ್ಣುಸ್ತಥಾ ಶಂಭುಃ ಸಾವಿತ್ರೀ ಚ ರಮಾಪ್ಯುಮಾ ।**
**ಸರ್ವೇ ವಯಂ ವಶೇಽಸ್ಯಾಸ್ಯಾ ನಾತ್ರ ಕಿಂಚಿದ್ವಿಚಾರಣಾ ॥೨೩॥**

ನಾನು, ವಿಷ್ಣುವು, ಶಂಭುವು, ಸಾವಿತ್ರೀ, ಲಕ್ಷ್ಮೀ, ಪಾರ್ವತೀ ಇವರೇ ಮೊದಲಾದ ನಾವೆಲ್ಲರೂ ಈ ಶಕ್ತಿಗೆ ಅಧೀನರಾಗಿದ್ದೇವೆ. ಈ ವಿಚಾರದಲ್ಲಿ ಸಂದೇಹವೇ ಇಲ್ಲವು. ವಿಚಾರವನ್ನೂ ಮಾಡಬೇಕಾಗಿಲ್ಲವು.

**ಹರಿರಪ್ಯವಶಃ ಶೇತೇ ಯಥಾನ್ಯಃ ಪ್ರಾಕೃತೋ ಜನಃ ।**
**ಯಯಾಭಿಭೂತಃ ಕಾ ವಾರ್ತಾ ಕಿಲಾನ್ಯೇಷಾಂ ಮಹಾತ್ಮನಾಂ ॥೨೪॥**

ವಿಷ್ಣುವೂ ಕೂಡ ಸಾಮಾನ್ಯಜನಗಳಂತೆ ಆ ಶಕ್ತಿಗೆ ಅಧೀನನಾಗಿ ಮಲಗಿ ಕೊಂಡಿರುತ್ತಾನೆ. ಹೀಗಿರುವಲ್ಲಿ ಇತರರು ಅವಳಿಗೆ ಅಧೀನರಾಗಿರುತ್ತಾರೆಂಬು ದೇನಾಶ್ಚರ್ಯವು?

**ಸ್ತೌಮ್ಯದ್ಯ ಯೋಗನಿದ್ರಾಂ ವೈ ಯಯಾ ಮುಕ್ತೋ ಜನಾರ್ದನಃ ।**
**ಘಟಯಿಷ್ಯತಿ ಯುದ್ಧೇ ಚ ವಾಸುದೇವಃ ಸನಾತನಃ ॥೨೫॥**

ಈಗ ನಾನು ಆ ಯೋಗನಿದ್ರೆಯನ್ನು ಸ್ತೋತ್ರಮಾಡುತ್ತೇನೆ. ಹೀಗೆ ಸ್ತೋತ್ರಮಾಡಿದರೆ ನಿದ್ರೆಯು ಅವನನ್ನು ಬಿಡುತ್ತಾಳೆ. ಅನಂತರದಲ್ಲಿ ಅನಾದಿಯಾದ ಜಗದ್ರಕ್ಷಕನಾದ ವಿಷ್ಣುವು ಈ ರಾಕ್ಷಸರನ್ನು ಸಂಹರಿಸುವ ಯುದ್ಧದಲ್ಲಿ ತೊಡಗುತ್ತಾನೆ.

**ಇತಿ ಕೃತ್ವಾ ಮತಿಂ ಬ್ರಹ್ಮಾ ಪದ್ಮನಾಲಸ್ಥಿತಸ್ತದಾ ।**
**ತುಷ್ಟಾವ ಯೋಗನಿದ್ರಾಂ ತಾಂ ವಿಷ್ಣೋರಂಗೇಷು ಸಂಸ್ಥಿತಾಂ ॥೨೬॥**

ವಿಷ್ಣುವಿನ ನಾಭಿಕಮಲದಲ್ಲಿರುವ ಬ್ರಹ್ಮನು ಈರೀತಿಯಾಗಿ ಯೋಚಿಸಿ ವಿಷ್ಣುವಿನ ಶರೀರದಲ್ಲಿ ವ್ಯಾಪಿಸಿರುವ ಆ ಯೋಗನಿದ್ರೆಯನ್ನು ಸ್ತೋತ್ರಮಾಡಿದನು.

॥ ಬ್ರಹ್ಮೋವಾಚ ॥

**ದೇವಿ ತ್ವಮಸ್ಯ ಜಗತಃ ಕಿಲ ಕಾರಣಂ ಹಿ**
**ಜ್ಞಾತಂ ಮಯಾ ಸಕಲವೇದವಚೋಭಿರಂಬ ।**
**ಯದ್ವಿಷ್ಣುರಪ್ಯಖಿಲಲೋಕವಿವೇಕಕರ್ತಾ**
**ನಿದ್ರಾವಶಂ ಚ ಗಮಿತಃ ಪುರುಷೋತ್ತಮೋಽದ್ಯ ॥೨೭॥**

ಬ್ರಹ್ಮನು ಹೇಳುತ್ತಾನೆ—ಓ ಕಾಂತಿಯುಕ್ತಳಾದ ತಾಯಿಯೇ, ನೀನೇ ಎಲ್ಲಾ ಜಗತ್ತಿಗೂ ಕಾರಣಳು ಎಂಬುದನ್ನು ನಾನು ಎಲ್ಲಾ ವೇದವಾಕ್ಯಗಳಿಂದಲೂ ತಿಳಿದೆನು. ಅಲ್ಲದೆ ಎಲ್ಲಾ ಲೋಕಗಳನ್ನೂ ವಿವೇಕದಿಂದ ರಕ್ಷಿಸುವ, ಪುರುಷರಲ್ಲಿ ಉತ್ತಮನಾದ ವಿಷ್ಣುವೂ ಕೂಡ ನಿನ್ನ ಮಹಿಮೆಯಿಂದ ನಿದ್ರೆಗೆ ಈಗ ಅಧೀನ ನಾಗಿರುತ್ತಾನೆ. ಅದರಿಂದಲೂ ಕೂಡ ಸರ್ವವೂ ನಿನ್ನ ಅಧೀನವೆಂಬುದನ್ನು ನಾನು ತಿಳಿದಿರುತ್ತೇನೆ.

**ಕೋ ವೇದ ತೇ ಜನನಿ ಮೋಹವಿಲಾಸಲೀಲಾಂ**
**ಮೂಢೋಽಸ್ಮ್ಯಹಂ ಹರಿರಯಂ ವಿವಶಶ್ಚ ಶೇತೇ ।**
**ಈದೃಕ್ತಯಾ ಸಕಲಭೂತಮನೋನಿವಾಸೇ**
**ವಿದ್ವತ್ತಮೋ ವಿಬುಧಕೋಟಿಷು ನಿರ್ಗುಣಾಯಾಃ ॥೨೮॥**

ಎಲ್ಲ ಪ್ರಾಣಿಗಳ ಮನಸ್ಸುಗಳಲ್ಲಿ ಅಂತರ್ಯಾಮಿಯಾಗಿ ನಿಯಮಿಸುತ್ತಾ ನೆಲಸಿ ರುವ ಓ ತಾಯಿಯೇ, ನಿನ್ನ ಸ್ವರೂಪವನ್ನು ತಿಳಿಯದಿರುವಿಕೆ ಎಂಬ ನಮ್ಮ ಅಜ್ಞಾನದ ಮಹಿಮೆಯಿಂದ ತೋರುತ್ತಿರುವ ಈ ನಿನ್ನ ಆಟಗಳನ್ನು ಯಾರು ತಾನೇ ವಿವೇಚಿಸಿ ತಿಳಿಯಬಲ್ಲರು ? ನಾನು ಅದನ್ನು ಮಂಕು ಕವಿದವನಾಗಿ ತಿಳಿಯಲು ಸಮ ರ್ಥನಾಗಿಲ್ಲವು. ಈ ವಿಷ್ಣುವಾದರೋ ನಿದ್ರೆಗೆ ಪರಾಧೀನನಾಗಿ ಮಲಗಿರುತ್ತಾನೆ. ವಾಸ್ತವವಾಗಿ ನೀನು ಗುಣಶೂನ್ಯಳಾದರೂ ನಿನ್ನ ಈ ಜಗದ್ವ್ಯವಹಾರದ ಲೀಲೆಗಳಲ್ಲಿ ಇದು ಹೀಗೆಯೇ ಸರಿ ಎಂದು, ಈ ಅನೇಕಕೋಟಿ ದೇವತೆಗಳಲ್ಲಿ ತಿಳಿವಳಿಕೆ ಯುಳ್ಳವರಲ್ಲಿ ಶ್ರೇಷ್ಠರಾದರೂ ಯಾರುತಾನೇ ಚನ್ನಾಗಿ ವಿವೇಚಿಸಿ ತಿಳಿದಿರುತ್ತಾರೆ?

**ಸಾಂಖ್ಯಾ ವದಂತಿ ಪುರುಷಂ ಪ್ರಕೃತಿಂ ಚ ಯಾಂ ತಾಂ**
**ಚೈತನ್ಯಭಾವರಹಿತಾಂ ಜಗತಶ್ಚ ಕರ್ತ್ರೀಂ ।**

**ಕಿಂ ತಾದೃಶಾಸಿ ಕಥಮತ್ರ ಜಗನ್ನಿವಾಸಃ**
**ಚೈತನ್ಯತಾವಿರಹಿತೋ ವಿಹಿತಸ್ತ್ವಯಾದ್ಯ ॥೨೯॥**

ಸಾಂಖ್ಯಮತದಲ್ಲಿ ಪುರುಷನು ತಾವರೇ ಎಲೆಯಂತೆ ನಿರ್ಲೇಪನು, ಜಡವಾದ ಪ್ರಕೃತಿಯೇ ಜಗತ್ತಿನ ಸೃಷ್ಟ್ಯಾದಿಕಾರ್ಯಗಳನ್ನೆಲ್ಲಾ ಮಾಡುವುದು, ಎಂದು ಸಿದ್ಧಾಂತವು. ಓ ತಾಯಿಯೇ, ಸಾಂಖ್ಯರು ನಿನ್ನನ್ನು ಚೈತನ್ಯವಿಲ್ಲದವಳನ್ನಾಗಿಯೂ, ಜಗತ್ತಿನ ಸೃಷ್ಟಿಸ್ಥಿತಿಲಯಗಳನ್ನು ನೆರವೇರಿಸುವವಳನ್ನಾಗಿಯೂ, ಹೇಳುತ್ತಾರೆ. ಆದರೆ ನೀನು ಮಾತ್ರ ಚೈತನ್ಯರಹಿತಳಲ್ಲ. ನೀನು ಜಡಳಾಗಿದ್ದ ಪಕ್ಷದಲ್ಲಿ, ಈ ವಿಷ್ಣುವನ್ನು ಚೈತನ್ಯರಹಿತನನ್ನಾಗಿ ಮಾಡುವುದಕ್ಕಾಗುತ್ತಿರಲಿಲ್ಲ. ಈಗಲಾದರೋ ನೀನು ವಿಷ್ಣುವನ್ನು ಎಚ್ಚರವಿಲ್ಲದವನನ್ನಾಗಿ ಮಾಡಿರುತ್ತೀಯೆ. ಆದುದರಿಂದ ನೀನು ಬ್ರಹ್ಮವಿಷ್ಣುಮಹೇಶ್ವರರನ್ನು ಉಂಟುಮಾಡಿ ನಿಯಮಿಸುವಂಥ ಮಾಯಾವಿಶಿಷ್ಟವೂ ಸ್ವತಂತ್ರವೂ ಆದ ಚೈತನ್ಯಸ್ವರೂಪಳೇ ಆಗಿರುತ್ತೀಯೆ.

**ನಾಟ್ಯಂ ತನೋಷಿ ಸಗುಣಾ ವಿವಿಧಪ್ರಕಾರಂ**
**ನೋ ವೇತ್ತಿ ಕೋಽಪಿ ತವ ಕೃತ್ಯವಿಧಾನಯೋಗಂ ।**
**ಧ್ಯಾಯಂತಿ ಯಾಂ ಮುನಿಗಣಾ ನಿಯತಂ ತ್ರಿಕಾಲಂ**
**ಸಂಧ್ಯೇತಿ ನಾಮ ಪರಿಕಲ್ಪ್ಯ ಗುಣಾನ್ ಭವಾನಿ ॥೩೦॥**

ಓ ಭವನ ಪತ್ನಿಯಾದ ಭವಾನೀದೇವಿಯೇ, ಮುನಿಗಳ ಸಮೂಹವು ನಿನ್ನನ್ನು ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲಗಳೆಂಬ ಮೂರು ಸಂಧ್ಯಾಕಾಲಗಳಲ್ಲಿಯೂ ಉಪಾಸನೆಯಲ್ಲಿ ಸೌಕರ್ಯಕ್ಕಾಗಿ ತಮ್ಮ ತಮ್ಮ ಯೋಗ್ಯತೆ ಅಭಿರುಚಿಗಳಿಗೆ ತಕ್ಕಂತೆ ನಿನ್ನಲ್ಲಿ ಸಂಧ್ಯೆ ಎಂಬ ಹೆಸರನ್ನೂ ಗುಣಗಳನ್ನೂ ಕಲ್ಪನೆಮಾಡಿ ನಿನ್ನನ್ನು ಧ್ಯಾನಮಾಡುತ್ತಾರೆ. ಆದರೂ ನಿನ್ನ ಪಾರಮಾರ್ಥಿಕಸ್ವರೂಪದಲ್ಲಿ ಸತ್ತ್ವಾದಿಗುಣಗಳಿಲ್ಲದವಳಾಗಿರುವೆ. ಹೀಗಿದ್ದರೂ ನೀನು ಈ ಜಗದ್ವ್ಯವಹಾರದಶೆಯಲ್ಲಿ ಈ ಪ್ರಪಂಚದ ಸೃಷ್ಟ್ಯಾದಿಗಳನ್ನು ಮಾಡುತ್ತಾ ಸಗುಣಳಂತೆಯೇ ತೋರುತ್ತಿರುವೆ. ಆದುದರಿಂದ ನಿನ್ನ ಪಾರಮಾರ್ಥಿಕವಾದ ನಿಜಸ್ವರೂಪವನ್ನು ಯಾರೂ ತಿಳಿದಿಲ್ಲವು. ನೀನಾದರೋ ಜಡವಾದ ಗೋಮಯಾದಿಗಳಿಂದ ಸಚೇತನಗಳಾದ ಚೇಳು ಮೊದಲಾದುವುಗಳನ್ನೂ, ಚೇತನರಾದ ಪುರುಷಾದಿಗಳಿಂದ ಜಡಗಳಾದ ಕೇಶನಖಾದಿ [ಕೂದಲು, ಉಗುರು, ಮುಂತಾದುವು] ಗಳನ್ನೂ ಸೃಷ್ಟಿಮಾಡುತ್ತೀಯೆ. ಹೀಗೆ ನೀನು ವಿಚಿತ್ರವಾದ ಶಕ್ತಿ ಮತ್ತು ಸ್ವಭಾವಗಳಿಂದ ಕೂಡದವಳಾಗಿ ಸೃಷ್ಟಿಮಾ

ಡುತ್ತಾ ಸತ್ತ್ವಾದಿಗುಣಗಳ ಉಪಾಧಿಯಿಂದ ನಾನಾ ವಿಧವಾಗಿ ನರ್ತನಮಾಡುತ್ತಿದ್ದೀಯೆ. ಹೀಗಿರುವ ನಿನ್ನ ಸ್ವರೂಪವನ್ನು ಇದು ಹೀಗೆಯೇ ಸರಿ ಎಂದು ನಿಷ್ಕರ್ಷೆಯಿಂದ ಯಾವನೂ ತಿಳಿಯಲಾರನು. ಹೀಗಿರುವುದರಿಂದ ಸಾಂಖ್ಯರೂ ಕೂಡ ನಿನ್ನನ್ನು ಜಡಳೆಂದೂ ಪರಾಧೀನಳೆಂದೂ ಹೇಳುತ್ತಾರೆ. ನಿಜಸ್ವರೂಪವನ್ನೂ ಕಾರ್ಯನಿರ್ವಾಹದ ಪ್ರಕಾರವನ್ನೂ ತಿಳಿಯದೆ ಹೇಳುವ ಅವರ ಮಾತೂ ಸುಳ್ಳಲ್ಲವು.

**ಬುದ್ಧಿರ್ಹಿ ಬೋಧಕರಣಾ ಜಗತಾಂ ಸದಾ ತ್ವಂ**
**ಶ್ರೀಶ್ಚಾಸಿ ದೇವಿ ಸತತಂ ಸುಖದಾ ಸುರಾಣಾಂ ।**
**ಕೀರ್ತಿಸ್ತಥಾ ಮತಿಧೃತೀ ಕಿಲ ಕಾಂತಿರೇವ**
**ಶ್ರದ್ಧಾ ರತಿಶ್ಚ ಸಕಲೇಷು ಜನೇಷು ಮಾತಃ** ॥೩೦॥

ಓ ತಾಯಿಯೇ, ನೀನು ಯಾವಾಗಲೂ ಜಗತ್ತಿನಲ್ಲಿರುವ ಪ್ರಾಣಿಗಳಿಗೆಲ್ಲಾ ತಿಳಿವಳಿಕೆಗೆ ಸಾಧನವಾಗಿರುವ ಬುದ್ಧಿಸ್ವರೂಪಳಾಗಿದ್ದೀಯೆ. ದೇವತೆಗಳಿಗೂ ಯಾವಾಗಲೂ ಸುಖವನ್ನುಂಟುಮಾಡುವ ಲಕ್ಷ್ಮಿಯೂ ಯಶಸ್ಸಿನ ಸ್ವರೂಪಳೂ, ಮತಿ ಎಂದರೆ ಮನನಶಕ್ತಿಯೆಂಬ ಬುದ್ಧಿಯ ಕಾರ್ಯಭೇದ ಸ್ವರೂಪಳೂ, ಧೈರ್ಯಸ್ವರೂಪಳೂ, ಕಾಂತಿ ಎಂದರೆ ಪ್ರತಿಭಾಸ್ವರೂಪಳೂ, ದೊಡ್ಡವರಲ್ಲಿ ಪ್ರೀತಿ ಎಂಬ ಭಕ್ತಿಸ್ವರೂಪಳೂ ಆಗಿ ಆಯಾಯ ಪ್ರಾಣಿಗಳಲ್ಲಿ ಆಯಾಯ ರೂಪದಿಂದ ತೋರುವವಳೂ ನೀನೇ ಆಗಿರುತ್ತೀಯೆ. ಸಾಂಖ್ಯ ಮುಂತಾದ ಸಿದ್ಧಾಂತಗಳಂತೆ ಇದೂ ಏಕೆ ಅಪ್ರಮಾಣವಲ್ಲವು ? ಎಂದರೆ—

**ನಾತಃ ಪರಂ ಕಿಲ ವಿತರ್ಕಶತೈಃ ಪ್ರಮಾಣಂ**
**ಪ್ರಾಪ್ತಂ ಮಯಾ ಯದಿಹ ದುಃಖಗತಿಂ ಗತೇನ ।**
**ತ್ವಂ ಚಾತ್ರ ಸರ್ವಜಗತಾಂ ಜನನೀತಿ ಸತ್ಯಂ**
**ನಿದ್ರಾಲುತಾಂ ವಿತರತಾ ಹರಿಣಾತ್ರ ದೃಷ್ಟಂ** ॥೩೧॥

ಈರೀತಿಯಾದ ಅನುಭವದ ಪ್ರಮಾಣ ಎಂದರೆ ರುಜುವಾತಿಗಿಂತಲೂ ಮಿಗಿಲಾದುದನ್ನು ನಾನಾ ಬಗೆಯ ಊಹೆಗಳಿಂದ ಅನುಮಾನಪ್ರಮಾಣದಿಂದ ಪಡೆಯಲು ಸಾಧ್ಯವಿಲ್ಲ ಎಂಬುದನ್ನು ದುಃಖವನ್ನು ಹೊಂದಿರುವ ನಾನೇ ಪ್ರತ್ಯಕ್ಷವಾಗಿ ನೋಡಿ ತಿಳಿದಿರುತ್ತೇನೆ. ನೀನು ಜಗತ್ತಿಗೆಲ್ಲಾ ತಾಯಿಯಂತೆ ಕಾರಣಳೆಂಬುದು ಸತ್ಯವು. ಏಕೆಂದರೆ ಇದೆಲ್ಲಕ್ಕೂ ಕಾರಣನೆಂದು ನಾನು ತಿಳಿದಿದ್ದ ಮಹಾವಿಷ್ಣುವಿಗೇ ನಿದ್ರೆ

ಮಾಡುವ ಎಂದರೆ ತನ್ನ ಕರ್ತವ್ಯವಾದ ಜಗತ್ಪಾಲನ ಕಾರ್ಯವನ್ನೂ ಮಾಡಲಾಗ ದಂತಿರುವ ಸ್ಥಿತಿಯನ್ನೂ ನೀನೇ ಉಂಟುಮಾಡಿರುವುದರಿಂದ ಹೀಗೆ ತಿಳಿದುಬಂದಿದೆ. ಆದುದರಿಂದ ನೀನೇ ಎಲ್ಲಕ್ಕೂ ಕಾರಣಳೆಂಬುದಕ್ಕೆ ಬೇರೆ ಪ್ರಮಾಣವು ಏನೂ ಬೇಕಾಗಿಲ್ಲವು.

**ತ್ವಂ ದೇವಿ ವೇದವಿದುಷಾಮಪಿ ದುರ್ವಿಭಾವ್ಯಾ**
**ವೇದೋಽಪಿ ನೂನಮಖಿಲಾರ್ಥತಯಾ ನ ವೇದ ।**
**ಯಸ್ಮಾತ್ತ್ವದುದ್ಭವಮಸೌ ಶ್ರುತಿರಾಪ್ನುವಾನಾ**
**ಪ್ರತ್ಯಕ್ಷಮೇವ ಸಕಲಂ ತವ ಕಾರ್ಯಮೇತತ್** ॥೩೩॥

ಓ ದೇವಿಯೇ, ನೀನು ವೇದವನ್ನು ತಿಳಿದವರಿಗೂ ಕೂಡ ತಿಳಿಯಲು ಅಸಾ ಧ್ಯಳಾಗಿದ್ದೀಯೆ. ವೇದವನ್ನು ತಿಳಿದವರ ವಿಷಯವು ಹಾಗಿರಲಿ, ವೇದವೂ ಕೂಡ ಸಂಪೂರ್ಣವಾಗಿ ನಿನ್ನ ಪಾರಮಾರ್ಥಿಕವಾದ ಪರಸ್ವರೂಪವನ್ನು ತಿಳಿದಿಲ್ಲವೆನ್ನಬೇಕು. ನಿನ್ನ ಅನಂತವಾದ ಸಗುಣಸ್ವರೂಪವನ್ನೇ ವಿವರಿಸಿ ಮುಗಿಯಿಸುವುದು ಸಾಧ್ಯವಿಲ್ಲದಿ ರುವಾಗ, ಮಾತಿಗೆ ನಿಲುಕದ ನಿನ್ನ ನಿರ್ಗುಣಸ್ವರೂಪವನ್ನೂ ಪರತತ್ತ್ವರೂಪವನ್ನೂ ಅಂತಹ ಶ್ರುತಿಯು ತಿಳಿಯಬಹುದೆಂದಾಗಲಿ, ತಿಳಿದು ವಿವರಿಸಬಲ್ಲುದೆಂದಾಗಲಿ, ಹೇಳುವುದು ಯುಕ್ತಿ ಅನುಭವಗಳಿಗೆ ವಿರುದ್ಧವಾದುದು. [ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾ ಸಹ । ಎಂಬ ಶ್ರುತಿಯು ಈ ಅಂಶವನ್ನು ತಿಳಿಸು ತ್ತದೆ ಎಂದು ಭಾವವು] ಇಷ್ಟೇ ಅಲ್ಲದೆ ಇನ್ನೂ ಒಂದು ಕಾರಣವೇನೆಂದರೆ, ಆ ಸಮಗ್ರವಾದ ವೇದಸಾಹಿತ್ಯವೂ ನಿನ್ನಿಂದಲೇ ಜನ್ಮವನ್ನು ಪಡೆದು ಉಂಟಾದುದಾ ಗಿದೆ, ಎಂಬ "ಯಸ್ಯ ನಿಃಶ್ವಸಿತಂ ವೇದಾಃ" ಎಂದು ಮುಂತಾದ ಶ್ರುತಿಸ್ಮೃತಿ ಗಳೂ ಈ ಅಂಶವನ್ನು ವಿವರಿಸುತ್ತಿವೆ. ಆದುದರಿಂದ ಓ ತಾಯಿಯೇ, ಕಾಣುವ ಇದೆಲ್ಲವೂ ಎಂದರೆ ವ್ಯಾವಹಾರಿಕವಾಗಿರುವ ಈ ಚರಾಚರ ಪ್ರಪಂಚವೆಲ್ಲವೂ, ಆದಿಶಕ್ತಿ ಮತ್ತು ಮಹಾಮಾಯಾಸ್ವರೂಪಳಾದ ನಿನ್ನಿಂದಲೇ ಉಂಟಾದುದಾಗಿದೆ ಎಂದು ತಾತ್ಪರ್ಯವು.

**ಕಸ್ತೇ ಚರಿತ್ರಮಖಿಲಂ ಭುವಿ ವೇದ ಧೀಮಾ-**
**ನ್ನಾಹಂ ಹರಿರ್ನ ಚ ಭವೋ ನ ಸುರಾಸ್ತಥಾನ್ಯೇ ।**
**ಜ್ಞಾತುಂ ಕ್ಷಮಾಶ್ಚ ಮುನಯೋ ನ ಮಮಾತ್ಮಜಾಶ್ಚ**
**ದುರ್ವಾಚ್ಯ ಏವ ಮಹಿಮಾ ತವ ಸರ್ವಲೋಕೇ** ॥೩೪॥

ಓ ತಾಯಿಯೇ, ಈ ಭೂಲೋಕದಲ್ಲಿ ಬುದ್ಧಿವಂತರಾದವರಲ್ಲೂ ಯಾವನು ತಾನೇ ನಿನ್ನ ಚರಿತ್ರೆಯೆಲ್ಲವನ್ನೂ ಸಮಗ್ರವಾಗಿ ತಿಳಿದಿರುವನು ? ನಾನು ಎಂದರೆ ಚತುರ್ಮುಖಬ್ರಹ್ಮನೂ, ವಿಷ್ಣುವೂ, ಈಶ್ವರನೂ, ಹಾಗೆಯೇ ಇತರ ದೇವತೆಗಳೂ ಈ ನಮ್ಮಲ್ಲಿ ಯಾರೂ ನಿನ್ನ ಚರಿತ್ರೆಯನ್ನು ಪೂರ್ಣವಾಗಿ ತಿಳಿದಿರುವುದಿಲ್ಲವು. ಈ ಲೋಕದಲ್ಲೆಲ್ಲ ಇರುವ ನಿನ್ನ ಮಹಿಮೆಯನ್ನೂ ತತ್ತ್ವವನ್ನೂ ನನ್ನ ಮಾನಸ ಪುತ್ರರಾದ ಋಷಿಶ್ರೇಷ್ಠರೂ ತಿಳಿಯಲು ಶಕ್ತರಾಗಿಲ್ಲವು. ಆದುದರಿಂದ ನಿನ್ನ ಮಹಿಮೆಯು ವರ್ಣನೆಗೆ ಮೀರಿದುದಾಗಿದೆ.

**ಯಜ್ಞೇಷು ದೇವಿ ಯದಿ ನಾಮ ನ ತೇ ವದಂತಿ**
**ಸ್ವಾಹೇತಿ ವೇದವಿದುಷೋ ಹವನೇ ಕೃತೇಽಪಿ ।**
**ನ ಪ್ರಾಪ್ನುವಂತಿ ಸತತಂ ಮಖಭಾಗಧೇಯಂ**
**ದೇವಾಸ್ತ್ವಮೇವ ವಿಬುಧೇಷ್ವಪಿ ವೃತ್ತಿದಾಽಸಿ** ॥೩೫॥

ಓ ದೇವಿಯೇ, ವೇದಗಳನ್ನು ತಿಳಿದವರು ಆಚರಿಸುವ ಯಾಗಗಳಲ್ಲಿ ನಿನ್ನ ಹೆಸರಾದ ಸ್ವಾಹಾ ಎಂಬ ಪದಮಂತ್ರವನ್ನು ಹೇಳದೇ ಹೋದರೆ ದೇವತೆಗಳಿಗಾಗಿ ಹವಿಸ್ಸನ್ನು ಹೋಮಮಾಡಿದ್ದರೂ, ಆ ದೇವತೆಗಳು ಆ ಪುಣ್ಯಕರವಾದ ಹವಿಸ್ಸಿನ ಭಾಗಗಳನ್ನೂ ಯಜಮಾನರು ಆ ಯಾಗದ ಪುಣ್ಯವನ್ನೂ ಪಡೆಯುವುದಿಲ್ಲವು. ಆದುದ ರಿಂದ ದೇವತೆಗಳಿಗೂ ಜೀವಿಕೆಯನ್ನು ಅನುಗ್ರಹಿಸುವವಳೂ ನೀನೇ ಆಗಿದ್ದೀಯೆ.

**ತ್ರಾತಾ ವಯಂ ಭಗವತಿ ಪ್ರಥಮಂ ತ್ವಯಾ ವೈ**
**ದೇವಾರಿಸಂಭವಭಯಾದಧುನಾ ತಥೈವ ।**
**ಭೀತೋಽಸ್ಮಿ ದೇವಿ ವರದೇ ಶರಣಂ ಗತೋಽಸ್ಮಿ**
**ಘೋರಂ ನಿರೀಕ್ಷ್ಯ ಮಧುನಾ ಸಹ ಕೈಟಭಂ ಚ** ॥೩೬॥

ಓ ಮಹಾಮಹಿಮಶಾಲಿನಿಯಾದ ದೇವಿಯೇ, ಮೊದಲು ನೀನು ನಮ್ಮನ್ನು ದೇವತೆಗಳ ಶತ್ರುಗಳಾದ ರಾಕ್ಷಸರಿಂದ ಉಂಟಾಗಿದ್ದ ಭಯದಿಂದ ಕಾಪಾಡಿದೆ. ಹಾಗೆಯೇ ಈಗಲೂ ಭಕ್ತರ ಕೋರಿಕೆಗಳನ್ನು ನೆರವೇರಿಸುವ ಓ ದೇವಿಯೇ ಭಯಂ ಕರನಾದ ಕೈಟಭನೆಂಬ ರಾಕ್ಷಸನನ್ನು ಮಧುವೆಂಬ ರಾಕ್ಷಸನೊಡನೆ ನೋಡಿ ಹೆದರಿ ದೇನೆ. ಮತ್ತು ನಿನ್ನನ್ನು ಮರೆಹೊಕ್ಕಿದೇನೆ.

**ನೋ ವೇತ್ತಿ ವಿಷ್ಣುರಧುನಾ ಮಮ ದುಃಖಮೇತ-**
**ಜ್ಞಾನೇ ತ್ವಯಾತ್ಮವಿವಶೀಕೃತದೇಹಯಷ್ಟಿಃ ।**
**ಮುಂಚಾದಿದೇವಮಥವಾ ಜಹಿ ದಾನವೇಂದ್ರೌ**
**ಯದ್ರೋಚತೇ ತವ ಕುರುಷ್ವ ಮಹಾನುಭಾವೇ** ॥೩೭॥

ಓ ತಾಯಿಯೇ, ವಿಷ್ಣುವು ಈಗ ನನ್ನ ದುಃಖವನ್ನು ತಿಳಿಯಲಾರದೆ ಇದ್ದಾನೆಂದು ನಾನು ತಿಳಿಯುತ್ತೇನೆ. ಏಕೆಂದರೆ ನಿನ್ನ ಶಕ್ತಿಗಳಲ್ಲೊಂದಾದ ಯೋಗ ನಿದ್ರೆಯ ಪ್ರಭಾವದಿಂದ ಅವನು ನಿನಗೆ ಅಧೀನವಾಗಿರುವ ಗಟ್ಟಿಯಾದ ದೇಹವುಳ್ಳವನಾಗಿದ್ದಾನೆ. ಹೆಚ್ಚಾದ ಮಹಿಮೆಗಳುಳ್ಳ ಓ ದೇವಿಯೇ, ದೇವತೆಗಳಿಗೆ ಮೊದಲನೆಯವನಾದ ವಿಷ್ಣುವನ್ನಾದರೂ ಯೋಗನಿದ್ರೆಯಿಂದ ಬಿಡುಗಡೆಯನ್ನು ಪಡೆಯಿಸು. ಅಥವಾ ರಾಕ್ಷಸರಲ್ಲಿ ಗಟ್ಟಿಗರಾದ ಈ ಮಧುಕೈಟಭರನ್ನಾದರೂ ಸಂಹರಿಸು. ಯಾವುದು ನಿನ್ನ ಮನಸ್ಸಿಗೆ ಒಪ್ಪಿಬರುತ್ತದೆಯೋ ಅದನ್ನು ಮಾಡು.

**ಜಾನಂತಿ ಯೇ ನ ತವ ದೇವಿ ಪರಂ ಪ್ರಭಾವಂ**
**ಧ್ಯಾಯಂತಿ ತೇ ಹರಿಹರಾವಪಿ ಮಂದಚಿತ್ತಾಃ ।**
**ಜ್ಞಾತಂ ಮಯಾದ್ಯ ಜನನಿ ಪ್ರಕಟಂ ಪ್ರಮಾಣಂ**
**ಯದ್ವಿಷ್ಣುರಪ್ಯತಿತರಾಂ ವಿವಶೋಽಥ ಶೇತೇ** ॥೩೮॥

ಓ ದೇವಿಯೇ, ಎಲ್ಲರಿಗಿಂತಲೂ ಮಿಗಿಲಾದ ನಿನ್ನ ಮಹಿಮೆಯನ್ನು ಯಾರು ತಿಳಿಯದೇ ಇರುತ್ತಾರೋ, ಸೂಕ್ಷ್ಮ ವಿಷಯವನ್ನು ಗ್ರಹಿಸಲಾರದ ಮನಸ್ಸುಳ್ಳ ಅಂತಹ ದಡ್ಡರು ನಿನ್ನನ್ನು ಬಿಟ್ಟು ವಿಷ್ಣುವನ್ನೂ ಈಶ್ವರನನ್ನೂ ತಮ್ಮ ಇಷ್ಟಾರ್ಥ ಸಿದ್ಧಿಗೋಸ್ಕರ ಧ್ಯಾನಮಾಡಲು ತೊಡಗುತ್ತಾರೆ. ಓ ತಾಯಿಯೇ, ನಾನು ಈಗ ನಿನ್ನ ಹೆಚ್ಚುಗಾರಿಕೆಯ ವಿಷಯದಲ್ಲಿ ಸ್ಪಷ್ಟವಾದ ಪ್ರಮಾಣವನ್ನು ತಿಳಿದೆನು. ಏನೆಂದರೆ, ಲೋಕವನ್ನೆಲ್ಲ ಕಾಪಾಡುವವನೆಂದೂ, ಸರ್ವವ್ಯಾಪಿಯೆಂದೂ ಪ್ರಸಿದ್ಧನಾಗಿರುವ ಆ ವಿಷ್ಣುವೂ ಕೂಡ ನಿನ್ನ ಶಕ್ತಿವಿಶೇಷವಾದ ಯೋಗನಿದ್ರೆಗೆ ಅಧೀನನಾಗಿ ಸಂಪೂರ್ಣವಾಗಿ ಸ್ವಾತಂತ್ರ್ಯವಿಲ್ಲದೇ ಮಲಗಿದ್ದಾನೆ.

**ಸಿಂಧೂದ್ಭವಾಪಿ ನ ಹರಿಂ ಪ್ರತಿಬೋಧಿತುಂ ವೈ**
**ಶಕ್ತಾ ಪತಿಂ ತವ ವಶಾನುಗಮದ್ಯ ಶಕ್ತ್ಯಾ ।**
**ಮನ್ಯೇ ತ್ವಯಾ ಭಗವತಿ ಪ್ರಸಭಂ ರಮಾಪಿ**
**ಪ್ರಸ್ವಾಪಿತಾ ನ ಬುಬುಧೇ ವಿವಶೀಕೃತೇವ** ॥೩೯॥

ಓ ಮಹಾಮಹಿಮಶಾಲಿನಿಯಾದ ದೇವಿಯೇ, ನಿನ್ನ ಮಾಯಾಶಕ್ತಿಗೆ ಪರವಶನಾಗಿರುವ ತನ್ನ ಗಂಡನಾದ ವಿಷ್ಣುವನ್ನು ಸಮುದ್ರರಾಜನ ಮಗಳಾದ ಲಕ್ಷ್ಮಿಯೂ ಕೂಡ ಎಚ್ಚರಗೊಳಿಸಲು ಸಾಮರ್ಥ್ಯವಿಲ್ಲದವಳಾಗಿದಾಳೆ. ಪ್ರಾಯಶಃ ಆ ಲಕ್ಷ್ಮಿಯೂ ಕೂಡ ನಿನ್ನ ಮಾಯಾಶಕ್ತಿಗೆ ಅಧೀನಳಾಗಿ ಬಲಾತ್ಕಾರವಾಗಿ ಪರವಶಳಾಗಿರುವಂತೆ ಮಲಗಿಸಲ್ಪಟ್ಟಿರಬಹುದೆಂದು ನಾನು ಊಹಿಸುತ್ತೇನೆ.

**ಧನ್ಯಾಸ್ತ ಏವ ಭುವಿ ಭಕ್ತಿಪರಾಸ್ತವಾಂಘ್ರೌ**
**ತ್ಯಕ್ತ್ವಾನ್ಯದೇವಭಜನಂ ತ್ವಯಿ ಲೀನಭಾವಾಃ ।**
**ಕುರ್ವಂತಿ ದೇವಿ ಭಜನಂ ಸಕಲಂ ನಿಕಾಮಂ**
**ಜ್ಞಾತ್ವಾ ಸಮಸ್ತಜನನೀಂ ಕಿಲ ಕಾಮಧೇನುಂ ॥೪೦॥**

ಓ ದೇವಿಯೇ, ಈ ಲೋಕದಲ್ಲಿ ನೀನೇ ಎಲ್ಲರನ್ನೂ ತಾಯಿಯಂತೆ ಕಾಪಾಡುವವಳೆಂದೂ, ಭಕ್ತರ ಎಲ್ಲ ಬಗೆಯ ಕೋರಿಕೆಗಳನ್ನೂ ಈಡೇರಿಸುವ ಕಾಮಧೇನುವೆಂದೂ ತಿಳಿದು ಯಾರು ಇತರ ದೇವತೆಗಳ ಸೇವೆಯನ್ನು ಬಿಟ್ಟು ನಿನ್ನನ್ನೇ ಪೂಜೆ, ಸ್ತೋತ್ರ, ನಮಸ್ಕಾರ, ಧ್ಯಾನಗಳಿಂದ ಆರಾಧನೆಯನ್ನು ಮಾಡುತ್ತಾರೋ, ಮತ್ತು ನಿನ್ನಲ್ಲಿಯೇ ಏಕಾಗ್ರತೆಯಿಂದ ನೆಲಸಿರುವ ಅಂತಃಕರಣವುಳ್ಳವರಾಗಿರುತ್ತಾರೋ, ಅಂಥ ನಿನ್ನ ಪಾದಗಳಲ್ಲಿ ಭಕ್ತಿಯನ್ನು ಮಾಡಲು ಆಸಕ್ತಿಯುಳ್ಳವರಾಗಿರುವ ಜನರೇ ಧನ್ಯರೂ, ಕೃತಕೃತ್ಯರೂ ಆಗಿರುತ್ತಾರೆ.

**ಧೀಕಾಂತಿಕೀರ್ತಿಶುಭವೃತ್ತಿಗುಣಾದಯಸ್ತೇ**
**ವಿಷ್ಣೋರ್ಗಣಾಸ್ತು ಪರಿಹೃತ್ಯ ಗತಾಃ ಕ್ವ ವಾದ್ಯ**
**ಬಂದೀಕೃತೋ ಹರಿರಸೌ ನನು ನಿದ್ರಯಾತ್ರ**
**ಶಕ್ತ್ಯಾ ತವೈವ ಭಗವತ್ಯತಿಮಾನವತ್ಯಾಃ ॥೪೧॥**

ಓ ಷಡ್ಗುಣೈಶ್ವರ್ಯಸಂಪನ್ನಳಾಗಿರುವ ತಾಯಿಯೇ, ಬುದ್ಧಿ, ತೇಜಸ್ಸು, ಯಶಸ್ಸು, ಒಳ್ಳೆಯ ಮನೋಭಾವ, ಮಾತು ಮತ್ತು ನಡತೆ ಮುಂತಾದ ಹೆಚ್ಚಾದ ಗೌರವಕ್ಕೆ ಪಾತ್ರಳಾಗಿರುವ ನಿನ್ನ ಗುಣಗಳು ಯಾವವು ಪ್ರಸಿದ್ಧವಾಗಿವೆಯೋ ಅವನ್ನು ಧ್ಯಾನಿಸದೇ ಬಿಟ್ಟು ವಿಷ್ಣುವಿನಲ್ಲಿ ಭಕ್ತರಾಗಿರುವ ಗಣಗಳು ಈಗ ರಕ್ಷಕರಿಲ್ಲದೆ ಎಲ್ಲಿಯೋ ಅಲೆಯುತ್ತಿದಾರೆ. ಏಕೆಂದರೆ, ಆ ವಿಷ್ಣುವೇ ನಿನ್ನ ಶಕ್ತಿವಿಶೇಷವಾದ ಯೋಗನಿದ್ರಾಶಕ್ತಿಯಿಂದ ಸೆರೆಸಿಕ್ಕಿದಂತಾಗಿ ಇಲ್ಲಿ ಇದ್ದಾನೆ.

ತ್ವಂ ಶಕ್ತಿರೇವ ಜಗತಾಮಖಿಲಪ್ರಭಾವಾ
ತ್ವನ್ನಿರ್ಮಿತಂ ಚ ಸಕಲಂ ಖಲು ಭಾವಮಾತ್ರಂ ।
ತ್ವಂ ಕ್ರೀಡಸೇ ನಿಜವಿನಿರ್ಮಿತಮೋಹಜಾಲೇ
ನಾಟ್ಯೇ ಯಥಾ ವಿಹರತೇ ಸ್ವಕೃತೇ ನಟೋ ವೈ ॥೪೨॥

ಓ ದೇವಿಯೇ, ಎಲ್ಲ ಬಗೆಯ ಮಹಿಮೆಗಳಿಂದ ಕೂಡಿರುವ ಈ ಪ್ರಪಂಚಗಳಲ್ಲಿ ಕಾಣಬರುವ ಶಕ್ತಿಯೇ ನೀನಾಗಿದೀಯೆ. ಇದೆಲ್ಲವೂ ನಿನ್ನ ಆಲೋಚನೆ ಮಾತ್ರದಿಂದಲೇ ಉಂಟಾಗಿದೆ. ನಟನು ತಾನೇ ಕಲ್ಪಿಸಿರುವ ನಾನಾ ಬಗೆಯ ಪಾತ್ರಗಳ ವಿವಿಧವಾದ ವೇಷಭಾಷೆಗಳನ್ನು ಅವಲಂಬಿಸಿ ವಿಚಿತ್ರವಾದ ಅಭಿನಯಗಳನ್ನು ಪ್ರದರ್ಶಿಸುತ್ತಿರುವ ಹಾಗೆ ನೀನೂ ಆತ್ಮಸ್ವರೂಪದ ಅಜ್ಞಾನವೆಂಬ ಬಲೆಯಲ್ಲಿ ಈ ಚರಾಚರ ಪ್ರಪಂಚಸ್ವರೂಪದಲ್ಲಿ ವ್ಯವಹರಿಸುತ್ತಾ ನಿನ್ನ ಅದ್ಭುತವಾದ ಲೀಲೆಯನ್ನೂ ಪ್ರಕಟಿಸುತ್ತಿರುವೆ.

ವಿಷ್ಣುಸ್ತ್ವಯಾ ಪ್ರಕಟಿತಃ ಪ್ರಥಮಂ ಯುಗಾದೌ
ದತ್ತಾ ಚ ಶಕ್ತಿರಮಲಾ ಖಲು ಪಾಲನಾಯ ।
ತ್ರಾತಂ ಚ ಸರ್ವಮಖಿಲಂ ವಿವಶೀಕೃತೋಽದ್ಯ
ಯದ್ರೋಚತೇ ತವ ತಥಾಂಬ ಕರೋಷಿ ನೂನಂ ॥೪೩॥

ಓ ತಾಯಿಯೇ, ಈ ಬ್ರಹ್ಮಕಲ್ಪದ ಪ್ರಾರಂಭದಲ್ಲಿ ಮೊದಲು ನೀನೇ ವಿಷ್ಣುವನ್ನುಂಟುಮಾಡಿದೆ. ಆ ವಿಷ್ಣುವಿಗೆ ಈ ಜಗತ್ತಿನ ರಕ್ಷಣೆಗೆ ಬೇಕಾದ ಶಕ್ತಿಯನ್ನೂ ನೀನೇ ಅನುಗ್ರಹಮಾಡಿಕೊಟ್ಟೆ. ಆ ರೀತಿಯಲ್ಲಿ ನೀನೇ ಎಲ್ಲವನ್ನೂ ಇದುವರೆಗೆ ಕಾಪಾಡಿರುವೆ. ಈಗ ಆ ವಿಷ್ಣುವನ್ನು ನೀನೇ ನಿದ್ರೆಗೆ ಪರವಶನನ್ನಾಗಿ ಮಾಡಿರುತ್ತೀಯೆ. ಆದುದರಿಂದ ನಿನ್ನ ಮನಸ್ಸಿಗೆ ಯಾವುದು ಇಷ್ಟವಾಗುತ್ತದೋ ಅದನ್ನು ಹಾಗೆಮಾಡಲು ಸಮರ್ಥಳಾಗಿದೀಯೆ.

ಸೃಷ್ಟ್ವಾತ್ರ ಮಾಂ ಭಗವತಿ ಪ್ರವಿನಾಶಿತುಂ ಚೇ-
ನ್ನೇಚ್ಛಾಸ್ತಿ ತೇ ಕುರು ದಯಾಂ ಪರಿಹೃತ್ಯ ಮೌನಂ ।
ಕಸ್ಮಾದಿಮೌ ಪ್ರಕಟಿತೌ ಕಿಲ ಕಾಲರೂಪೌ
ಯದ್ವಾ ಭವಾನಿ ಹಸಿತುಂ ನು ಕಿಮಿಚ್ಛಸೇ ಮಾಂ ॥೪೪॥

ಓ ಮಹಾತೇಜಸ್ವಿನಿಯಾದ ದೇವಿಯೇ, ಇಲ್ಲಿ ನನ್ನನ್ನೂ ನೀನೇ ಸೃಷ್ಟಿ ಮಾಡಿರುವುದರಿಂದ ನನ್ನನ್ನು ಹಾಳುಮಾಡಲು ನಿನಗೆ ಅಪೇಕ್ಷೆ ಇಲ್ಲದಿದ್ದರೆ, ಈ ನಿನ್ನ ಔದಾಸೀನ್ಯವನ್ನು ಬಿಟ್ಟು ನನ್ನಲ್ಲಿ ದಯೆಯನ್ನು ತೋರು. ಓ ಭವಾನೀದೇವಿಯೇ, ಯಮನಂತಿರುವ ಈ ಮಧುಕೈಟಭರಾಕ್ಷಸರನ್ನು ಏಕೆ ಸೃಜಿಸುವವಳಾದೆ ? ಅಥವಾ ನನ್ನನ್ನು ನಗೆಗೀಡುಮಾಡಲು ಬಯಸುತ್ತಿರುವೆಯಾ ?

**ಜ್ಞಾತಂ ಮಯಾ ತವ ವಿಚೇಷ್ಟಿತಮದ್ಭುತಂ ವೈ**
**ಕೃತ್ವಾಖಿಲಂ ಜಗದಿದಂ ರಮಸೇ ಸ್ವತಂತ್ರಾ ।**
**ಲೀನಂ ಕರೋಷಿ ಸಕಲಂ ಕಿಲ ಮಾಂ ತಥೈವ**
**ಹಂತುಂ ತ್ವಮಿಚ್ಛಸಿ ಭವಾನಿ ಕಿಮತ್ರ ಚಿತ್ರಂ** ॥೪೫॥

ಓ ಭವಾನೀ (ಭವನಪತ್ನೀ) ದೇವಿಯೇ, ನಿನ್ನ ಆಶ್ಚರ್ಯಕರವಾದ ಈ ಪ್ರಪಂಚದ ಲೀಲೆಯನ್ನು ನಾನು ತಿಳಿದಿದೇನೆ. ಇದೆಲ್ಲವನ್ನೂ ಸ್ವತಂತ್ರಳಾಗಿ ಸೃಷ್ಟಿ ಮಾಡಿ ವಿನೋದಪಡುತ್ತಿರುವೆ. ಕಡೆಗೆ ಇದೆಲ್ಲವನ್ನೂ ಅಡಗಿಸುವೆ. ಹಾಗೆಯೇ ಮಹಾಪ್ರಳಯದ ಸಮಯದಲ್ಲಿ ನನ್ನನ್ನೂ ಉಪಸಂಹರಿಸುವೆ. ಇಷ್ಟೆಲ್ಲವನ್ನೂ ಮಾಡಬಲ್ಲ ನೀನು ನನ್ನ ಸಂಹಾರಕ್ಕಾಗಿ ಈ ರಾಕ್ಷಸರನ್ನು ಸೃಷ್ಟಿಮಾಡಬೇಕಾದ ಅವಶ್ಯಕತೆಯೇ ಇರಲಿಲ್ಲವಲ್ಲವೇ ?

**ಕಾಮಂ ಕುರುಷ್ವ ವಧಮದ್ಯ ಮಮೈವ ಮಾತ**
**ರ್ದುಃಖಂ ನ ಮೇ ಮರಣಜಂ ಜಗದಂಬಿಕೇಽತ್ರ ।**
**ಕರ್ತಾ ತ್ವಯೈವ ವಿಹಿತಃ ಪ್ರಥಮಂ ಸ ಚಾಯಂ**
**ದೈತ್ಯಾಹತೋಽಥ ಮೃತ ಇತ್ಯಯಶೋ ಗರಿಷ್ಠಂ** ॥೪೬॥

ಓ ತಾಯಿಯೇ, ನನ್ನನ್ನು ಸಂಹರಿಸಬೇಕೆಂಬ ಇಚ್ಛೆಯು ನಿನಗಿದ್ದರೆ ನೀನೇ ನನ್ನನ್ನು ಈಗಲೇ ಕೊಂದುಬಿಡು. ಜಗತ್ತೆಲ್ಲಕ್ಕೂ ತಾಯಿಯಾದ ದೇವಿಯೇ, ಇಲ್ಲಿ ಸಾವಿನಿಂದ ನನಗೆ ಭಯವಾಗಲಿ, ದುಃಖವಾಗಲಿ, ಸ್ವಲ್ಪವೂ ಇಲ್ಲವು. ಮೊದಲು ಪ್ರಪಂಚದ ಸೃಷ್ಟಿಕಾರ್ಯವನ್ನು ನೆರವೇರಿಸುವವನನ್ನಾಗಿ ನೀನೇ ನನ್ನನ್ನು ಏರ್ಪಡಿಸಿದೆ. ಅಂತಹ ನಾನು ರಾಕ್ಷಸನೊಬ್ಬನಿಂದ ಕೊಲೆಯನ್ನು ಪಡೆದೆನೆಂಬುವ ದೊಡ್ಡ ಕೆಟ್ಟಹೆಸರು ನನಗೆ ಬರದಿರಲಿ.

**ಉತ್ತಿಷ್ಠ ದೇವಿ ಕುರು ರೂಪಮಿಹಾದ್ಭುತಂ ತ್ವಂ**
**ಮಾಂ ವಾ ತ್ವಿಮೌ ಜಹಿ ಯಥೇಚ್ಛಸಿ ಬಾಲಲೀಲೇ**

**ನೋ ಚೇತ್ಪ್ರಬೋಧಯ ಹರಿಂ ನಿಹನೇದಿಮೌ ಯ**
**ಸ್ತ್ವತ್ಸಾಧ್ಯಮೇತದಖಿಲಂ ಕಿಲ ಕಾರ್ಯಜಾತಂ ॥೪೭॥**

ಆದುದರಿಂದ ಓ ತಾಯಿಯೇ, ಈ ಕಾರ್ಯಕ್ಕೆ ತಕ್ಕ ಆಶ್ಚರ್ಯಕರವಾದ ರೂಪವನ್ನು ಧರಿಸಲು ಎದ್ದೇಳು. ನನ್ನನ್ನಾಗಲಿ, ಈ ರಾಕ್ಷಸರನ್ನಾಗಲಿ, ನಿನ್ನ ಇಚ್ಛಾನುಸಾರವಾಗಿ ಸಂಹರಿಸು. ಇದೆಲ್ಲವೂ ನಿನಗೆ ಹುಡುಗರ ಆಟದಂತೆ ಅನಾಯಾಸಕರವಾಗಿದೆ. ಹಾಗಿಲ್ಲದಿದ್ದರೆ ಈ ರಾಕ್ಷಸರನ್ನು ಕೊಲ್ಲಬಲ್ಲ ಈ ವಿಷ್ಣುವನ್ನಾದರೂ ಎಚ್ಚರಗೊಳಿಸು. ಈ ಎಲ್ಲ ಕಾರ್ಯಗಳೂ ನಿನಗೆ ಸಾಧ್ಯವಾಗಿವೆ.

॥ ಸೂತ ಉವಾಚ ॥

**ಏವಂ ಸ್ತುತಾ ತದಾ ದೇವೀ ತಾಮಸೀ ತತ್ರ ವೇಧಸಾ ।**
**ನಿಃಸೃತ್ಯ ಹರಿದೇಹಾತ್ತು ಸಂಸ್ಥಿತಾ ಪಾರ್ಶ್ವತಸ್ತದಾ ॥೪೮॥**

ಸೂತಮುನಿಯು ಹೇಳುತ್ತಾನೆ—ಈ ಪ್ರಕಾರವಾಗಿ ಬ್ರಹ್ಮನಿಂದ ಸ್ತೋತ್ರ ಮಾಡಲ್ಪಟ್ಟ ತಮೋಗುಣಪ್ರಧಾನಳಾದ ಆ ದೇವಿಯು ಆಗ ವಿಷ್ಣುವಿನ ದೇಹದಿಂದ ಹೊರಕ್ಕೆ ಹೊರಟು ಮಗ್ಗುಲಲ್ಲಿ ನಿಂತಳು.

**ತ್ಯಕ್ತ್ವಾಂಗಾನಿ ಚ ಸರ್ವಾಣಿ ವಿಷ್ಣೋರತುಲತೇಜಸಃ ।**
**ನಿರ್ಗತಾ ಯೋಗನಿದ್ರಾ ಸಾ ನಾಶಾಯ ಚ ತಯೋಸ್ತದಾ ॥೪೯॥**

ಅಸದೃಶವಾದ ತೇಜಸ್ಸುಳ್ಳ ಆ ವಿಷ್ಣುವಿನ ಎಲ್ಲ ಅವಯವಗಳ (ಕಣ್ಣು ಬಾಯಿ ಮುಂತಾದುವ)ನ್ನು ಬಿಟ್ಟು ಆಗ ಆ ಮಧುಕೈಟಭರ ಸಂಹಾರಕ್ಕಾಗಿ ಆ ಯೋಗನಿದ್ರಾಶಕ್ತಿಯು ಹೊರಕ್ಕೆ ಬಂದಳು.

**ವಿಸ್ಪಂದಿತಶರೀರೋಽಸೌ ಯದಾ ಜಾತೋ ಜನಾರ್ದನಃ ।**
**ಧಾತಾ ಪರಮಿಕಾಂ ಪ್ರಾಪ್ತೋ ಮುದಂ ದೃಷ್ಟ್ವಾ ಹರಿಂ ತತಃ ॥೫೦॥**

ಆಗ ದುಷ್ಟರನ್ನು ನಾಶಮಾಡುವ ವಿಷ್ಣುವು ಚಟುವಟಿಕೆಯುಳ್ಳ ಅವಯವಗಳುಳ್ಳವನಾದನು. ಅಂತಹ ವಿಷ್ಣುವನ್ನು ನೋಡಿ ಬ್ರಹ್ಮನು ಅತ್ಯಂತ ಸಂತೋಷವನ್ನು ಪಡೆದನು.

**॥ ಇತಿ ಶ್ರೀದೇವೀಭಾಗವತೇ ಪ್ರಥಮಸ್ಕಂಧೇ ಸಪ್ತಮೋಽಧ್ಯಾಯಃ ॥**

ಇಲ್ಲಿಗೆ ಶ್ರೀದೇವೀಭಾಗವತದ ಪ್ರಥಮಸ್ಕಂಧದಲ್ಲಿ ಏಳನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

॥ ಅಷ್ಟಮೋಽಧ್ಯಾಯಃ ॥

### ಎಂಟನೆಯ ಅಧ್ಯಾಯವು

॥ ಋಷಯ ಊಚುಃ ॥

**ಸಂದೇಹೋಽತ್ರ ಮಹಾಭಾಗ ಕಥಾಯಾಂ ತು ಮಹಾದ್ಭುತಃ ।**
**ವೇದಶಾಸ್ತ್ರಪುರಾಣೈಶ್ಚ ನಿಶ್ಚಿತಂ ತು ಸದಾ ಬುಧೈಃ ॥೧॥**

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ತ್ರಯೋ ದೇವಾಃ ಸನಾತನಾಃ ।**
**ನಾತಃ ಪರತರಂ ಕಿಂಚಿದ್ಬ್ರಹ್ಮಾಂಡೇಽಸ್ಮಿನ್ಮಹಾಮತೇ ॥೨॥**

ಋಷಿಗಳು ಸೂತಮುನಿಯನ್ನು ಪ್ರಶ್ನೆ ಮಾಡುವರು—ಓ ಪುಣ್ಯಶಾಲಿಯೂ, ಮೇಲಾದ ಬುದ್ಧಿಯುಳ್ಳವನೂ ಆದ ಮಹರ್ಷಿಯೇ, ಈ ಕಥೆಯಲ್ಲಿ ಬಹಳ ವಿಚಿತ್ರವಾದ ಸಂದೇಹವುಂಟಾಗಿರುತ್ತದೆ. ವೇದಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ, ಪುರಾಣಗಳಲ್ಲಿಯೂ, ಬ್ರಹ್ಮ ವಿಷ್ಣು, ರುದ್ರರೆಂಬ ಮೂವರೂ ಅನಾದಿಯಾದ ದೇವತೆಗಳಾಗಿರುವರು. ಇವರಿಗಿಂತಲೂ ಈ ಬ್ರಹ್ಮಾಂಡದಲ್ಲಿ ಎಲ್ಲ ವಸ್ತುಗಳಿಗೂ ಕಾರಣವು ಇನ್ನೊಂದಿಲ್ಲ ಎಂದು ನಿಶ್ಚಯಿಸಲ್ಪಟ್ಟಿರುತ್ತದೆ. ಅನೇಕ ಪಂಡಿತರೂ ಹಾಗೆಯೇ ನಿಶ್ಚಯಮಾಡಿರುತ್ತಾರೆ.

**ಬ್ರಹ್ಮಾ ಸೃಜತಿ ಲೋಕಾನ್ವೈ ವಿಷ್ಣುಃ ಪಾತ್ಯಖಿಲಂ ಜಗತ್ ।**
**ರುದ್ರಃ ಸಂಹರತೇ ಕಾಲೇ ತ್ರಯ ಏತೇಽತ್ರ ಕಾರಣಂ ॥೩॥**

ಬ್ರಹ್ಮನು ಲೋಕಗಳನ್ನು ಸೃಷ್ಟಿಮಾಡುತ್ತಾನೆ. ವಿಷ್ಣುವು ಆ ಎಲ್ಲಾ ಲೋಕಗಳನ್ನೂ ಕಾಪಾಡುತ್ತಾನೆ. ರುದ್ರನು ಅವುಗಳ ಕಾರ್ಯವಾದ ಮೇಲೆ ಅವನ್ನೆಲ್ಲಾ ಸಂಹಾರಮಾಡುತ್ತಾನೆ. ಆದುದರಿಂದ ಈ ಮೂವರೂ ಈ ಪ್ರಪಂಚದ ಯೋಗ

ಕ್ಷೇಮನಿರ್ವಾಹದಲ್ಲಿ ಕಾರಣರಾಗಿರುತ್ತಾರೆ. ಇವರಿಗಿಂತಲೂ ಬೇರೆ ಕಾರಣವು ಯಾವುದೂ ಇಲ್ಲವು.

**ಏಕಾ ಮೂರ್ತಿಸ್ತ್ರಯೋ ದೇವಾ ಬ್ರಹ್ಮವಿಷ್ಣುಮಹೇಶ್ವರಾಃ ।**
**ರಜಃಸತ್ತ್ವತಮೋಭಿಶ್ಚ ಸಂಯುತಾಃ ಕಾರ್ಯಕಾರಕಾಃ ॥೪॥**

ರಜೋಗುಣ, ಸತ್ತ್ವಗುಣ, ತಮೋಗುಣ ಇವುಗಳೆಂಬ ಉಪಾಧಿಯಿಂದ ಬ್ರಹ್ಮ ವಿಷ್ಣು ರುದ್ರರೆಂಬ ಮೂರು ಹೆಸರುಗಳು ಆಯಾಕಾರ್ಯಗಳನ್ನು ಅವಲಂಬಿಸಿ ಒಬ್ಬನೇ ದೇವರಿಗುಂಟಾಗಿರುತ್ತವೆ. ಒಬ್ಬನೇ ಮೂರು ಹೆಸರುಗಳನ್ನು ಹೊಂದಿ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಾನೆ.

**ತೇಷಾಂ ಮಧ್ಯೇ ಹರಿಃ ಶ್ರೇಷ್ಠೋ ಮಾಧವಃ ಪುರುಷೋತ್ತಮಃ ।**
**ಆದಿದೇವೋ ಜಗನ್ನಾಥಃ ಸಮರ್ಥಃ ಸರ್ವಕರ್ಮಸು ॥೫॥**

ಈ ಬ್ರಹ್ಮವಿಷ್ಣುಮಹೇಶ್ವರರಲ್ಲಿ ಮೊದಲನೆಯ ದೇವನಾದ ಜಗತ್ತಿಗೆಲ್ಲಾ ಒಡೆಯನಾದ, ಪುರುಷರಲ್ಲೆಲ್ಲಾ ಉತ್ತಮನಾದ ಮತ್ತು ಎಲ್ಲಾ ಕೆಲಸಗಳನ್ನೂ ಒಬ್ಬನೇ ಮಾಡಲು ಸಮರ್ಥನೂ ಆದ ವಿಷ್ಣುವೇ ಶ್ರೇಷ್ಠನು.

**ನಾನ್ಯಃ ಕೋಽಪಿ ಸಮರ್ಥೋಽಸ್ತಿ ವಿಷ್ಣೋರತುಲತೇಜಸಃ ।**
**ಸ ಕಥಂ ಸ್ವಾಪಿತಃ ಸ್ವಾಮೀ ವಿವಶೋ ಯೋಗಮಾಯಯಾ ॥೬॥**

ಸಾಟಿಯಿಲ್ಲದ ತೇಜಸ್ವಿಯಾದ ವಿಷ್ಣುವಿಗಿಂತಲೂ ಹೆಚ್ಚಾದ ಸಾಮರ್ಥ್ಯವುಳ್ಳವರು ಬೇರೆ ಯಾರೂ ಇಲ್ಲವು. ಹೀಗಿದ್ದರೂ ಎಲ್ಲಕ್ಕೂ ಸ್ವಾಮಿಯಾದ ವಿಷ್ಣುವು ಮಾಯೆಯಿಂದ ಹೇಗೆ ಆವರಿಸಲ್ಪಟ್ಟು ಮಲಗಿದನು? ನಿರ್ವ್ಯಾಪಾರನಾಗಿ ನಿದ್ರಿಸುವಂತೆ ಮಾಡಲ್ಪಟ್ಟನು?

**ಕ್ವ ಗತಂ ತಸ್ಯ ವಿಜ್ಞಾನಂ ಜೀವತಶ್ಚೇಷ್ಟಿತಂ ಕುತಃ ।**
**ಸಂದೇಹೋಽಯಂ ಮಹಾಭಾಗ ಕಥಯಸ್ವ ಯಥಾಶುಭಂ ॥೭॥**

ಬದುಕಿರುವ ಸಮಯದಲ್ಲಿಯೇ ಅವನ ತಿಳಿವಳಿಕೆಯೂ, ಅವನ ವ್ಯಾಪಾರಗಳೂ ಏತಕ್ಕಾಗಿ ಎಲ್ಲಿಗೆ ಹೋದುವು ಎಂಬದು ಬಹಳ ಸಂದೇಹವನ್ನುಂಟುಮಾಡಿದೆ. ಆದುದರಿಂದ ಎಲೈ ಪುಣ್ಯಶಾಲಿಯೇ ಇದೆಲ್ಲವನ್ನೂ ನಮಗೆ ಹೇಳು.

**ಕಾ ಸಾ ಶಕ್ತಿಃ ಪುರಾ ಪ್ರೋಕ್ತಾ ಯಯಾ ವಿಷ್ಣುರ್ಜಿತಃ ಪ್ರಭುಃ ।**
**ಕುತೋ ಜಾತಾ ಕಥಂ ಶಕ್ತಾ ಕಾ ಶಕ್ತಿರ್ವದ ಸುವ್ರತ ॥೮॥**

ಯಾವ ಶಕ್ತಿಯಿಂದ ವಿಷ್ಣುವು ಜಯಿಸಲ್ಪಟ್ಟನು ಎಂದು ನೀನು ಮೊದಲು ಹೇಳಿದೆಯೋ ಆ ಶಕ್ತಿ ಯಾವುದು? ಆ ಶಕ್ತಿಯು ಎಲ್ಲಿ ಹುಟ್ಟಿತು? ಹೇಗೆ ಕೆಲಸದಲ್ಲಿ ಸಮರ್ಥವಾಯಿತು? ಎಂಬ ವಿಚಾರವನ್ನು ಹೇಳು

**ಯಸ್ತು ಸರ್ವೇಶ್ವರೋ ವಿಷ್ಣುರ್ವಾಸುದೇವೋ ಜಗದ್ಗುರುಃ ।**
**ಪರಮಾತ್ಮಾ ಪರಾನಂದಃ ಸಚ್ಚಿದಾನಂದವಿಗ್ರಹಃ ॥೯॥**

**ಸರ್ವಕೃತ್ಸರ್ವಭೃತ್ ಸ್ರಷ್ಟಾ ವಿರಜಃ ಸರ್ವಗಃ ಶುಚಿಃ ।**
**ಸ ಕಥಂ ನಿದ್ರಯಾ ನೀತಃ ಪರತಂತ್ರಃ ಪರಾತ್ಪರಃ ॥೧೦॥**

ಯಾವ ವಿಷ್ಣುವು ಎಲ್ಲ ವಸ್ತುಗಳಿಗೂ ಒಡೆಯನಾಗಿದ್ದಾನೆಯೋ, ವ್ಯಾಪಕನಾಗಿಯೂ, ಎಲ್ಲ ಜಗತ್ತಿನ ಪ್ರಾಣಿಗಳಲ್ಲಿಯೂ ಅರಿವನ್ನು ಕೊಡುವ ಗುರುವಾಗಿ ಇದ್ದಾನೆಯೋ, ಪರಮಾತ್ಮಸ್ವರೂಪನೂ, ಉತ್ತಮವಾದ ಸಂತೋಷರೂಪನೂ, ಸಚ್ಚಿದಾನಂದಸ್ವರೂಪನೂ ಆಗಿದ್ದಾನೆಯೋ, ಎಲ್ಲಾ ಪದಾರ್ಥಗಳನ್ನೂ ಸೃಷ್ಟಿಮಾಡುವವನೂ, ಅವುಗಳನ್ನು ಪಾಲಿಸುವವನೂ ಆಗಿ ರಜೋಗುಣದ ಸಂಬಂಧವಿಲ್ಲದವನೂ ಎಲ್ಲ ವಸ್ತುಗಳಲ್ಲಿ ವ್ಯಾಪಿಸಿರುವವನೂ, ಪರಿಶುದ್ಧನೂ ಆಗಿದ್ದಾನೆಯೋ ಅಂಥ ವಿಷ್ಣುವು ಸರ್ವೋತ್ಕೃಷ್ಟನಾಗಿದ್ದಾಗ್ಯೂ ನಿದ್ರೆಗೆ ಹೇಗೆ ಅಧೀನನಾದನು?

**ಏತದಾಶ್ಚರ್ಯಭೂತೋ ಹಿ ಸಂದೇಹೋ ನಃ ಪರಂತಪ ।**
**ಛಿಂದಿ ಜ್ಞಾನಾಸಿನಾ ಸೂತ ವ್ಯಾಸಶಿಷ್ಯ ಮಹಾಮತೇ ॥೧೧॥**

ಓ ವ್ಯಾಸರ ಶಿಷ್ಯನೂ, ಉತ್ತಮವಾದ ಬುದ್ಧಿಯುಳ್ಳವನೂ, ಒಳ್ಳೆಯ ತಪಸ್ವಿಯೂ ಆದ ಸೂತನೇ, ಈ ಮೇಲೆ ಹೇಳಿರುವುದು ನಮಗೆ ಆಶ್ಚರ್ಯವನ್ನುಂಟುಮಾಡುವ ಸಂಶಯವಾಗಿದೆ. ಇದನ್ನು ಜ್ಞಾನವೆಂಬ ಕತ್ತಿಯಿಂದ ಕತ್ತರಿಸು, ನನ್ನ ಈ ಸಂದೇಹವನ್ನು ಹೋಗಲಾಡಿಸು.

|| ಸೂತ ಉವಾಚ ||

**ಕಃ ಸಂದೇಹಂ ಛಿನತ್ತೀನಂ ತ್ರೈಲೋಕ್ಯೇ ಸಚರಾಚರೇ ।**
**ಮುಹ್ಯಂತಿ ಮುನಯಃ ಕಾಮಂ ಬ್ರಹ್ಮಪುತ್ರಾಃ ಸನಾತನಾಃ ॥೧೨॥**

**ನಾರದಃ ಕಪಿಲಶ್ಚೈವ ಪ್ರಶ್ನೇಽಸ್ಮಿನ್ ಮುನಿಸತ್ತಮಾಃ ।**
**ಕಿಂ ಬ್ರವೀಮಿ ಮಹಾಭಾಗಾ ದುರ್ಘಟೇಽಸ್ಮಿನ್ ವಿಮರ್ಶನೇ ॥೧೩॥**

ಸೂತನು ಹೇಳುವನು—ಎಲೈ ಋಷಿಶ್ರೇಷ್ಠರೇ, ಸ್ಥಾವರಜಂಗಮಾತ್ಮಕವಾದ ಈ ನೂರು ಲೋಕವಲ್ಲಿ ಈ ಸಂದೇಹವನ್ನು ಪರಿಹಾರಮಾಡುವವನು ಯಾವ ನಿದ್ದಾನೆ? ಬ್ರಹ್ಮದೇವನ ಮಕ್ಕಳಾದ ನಾರದ, ಕಪಿಲ ಮೊದಲಾದ ಋಷಿಶ್ರೇಷ್ಠರೂ ಕೂಡ ಈ ವಿಷಯದಲ್ಲಿ ಮೋಹವುಳ್ಳವರಾಗಿರುತ್ತಾರೆ. ಆದ್ದರಿಂದ ಎಲೈ ಪುಣ್ಯಶಾಲಿಗಳೇ, ದುರ್ಘಟವಾದ ಈ ವಿಮರ್ಶೆಗೆ ನಾನು ಏನು ಉತ್ತರವನ್ನು ಹೇಳಲಿ?

**ದೇವೇಷು ವಿಷ್ಣುಃ ಕಥಿತಃ ಸರ್ವಗಃ ಸರ್ವಪಾಲಕಃ ।**
**ಯತೋ ವಿರಾಡಿದಂ ಸರ್ವಮುತ್ಪನ್ನಂ ಸಚರಾಚರಂ ॥೧೪॥**

ಯಾವ ವಿಷ್ಣುವಿನಿಂದ ವಿರಾಟ್ಪುರುಷನೂ ಮತ್ತು ಸ್ಫುಟವಾಗಿ ತೋರುತ್ತಿರುವ ಸ್ಥಾವರಜಂಗಮರೂಪವಾದ ಈ ಜಗತ್ತೆಲ್ಲವೂ ಉತ್ಪನ್ನವಾಯಿತೋ, ಎಲ್ಲವನ್ನೂ ಕಾಪಾಡುವ, ಎಲ್ಲ ವಸ್ತುಗಳಲ್ಲಿಯೂ ವಾಸಮಾಡುವ ಆ ವಿಷ್ಣುವು ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂದು ಹೇಳಲ್ಪಟ್ಟಿರುತ್ತಾನೆ.

**ತೇ ಸರ್ವೇ ಸಮುಪಾಸಂತೇ ನತ್ವಾ ದೇವಂ ಪರಾತ್ಪರಂ ।**
**ನಾರಾಯಣಂ ಹೃಷೀಕೇಶಂ ವಾಸುದೇವಂ ಜನಾರ್ದನಂ ॥೧೫॥**

ಜೀವರುಗಳಿಗೆ ಆಶ್ರಯನಾದ, ಇಂದ್ರಿಯಗಳಿಗೆ ಒಡೆಯನಾದ, ದುಷ್ಟಜನಗಳನ್ನು ನಾಶಮಾಡುವ, ಆ ವಾಸುದೇವನನ್ನು ಸರ್ವೋತ್ಕೃಷ್ಟನೆಂದು ತಿಳಿದು ಎಲ್ಲರೂ ಅವನಿಗೆ ನಮಸ್ಕಾರಗಳನ್ನು ಮಾಡುತ್ತಾ ಉಪಾಸನೆಮಾಡುತ್ತಾರೆ.

**ತಥಾ ಕೇಚಿನ್ಮಹಾದೇವಂ ಶಂಕರಂ ಶಶಿಶೇಖರಂ ।**
**ತ್ರಿನೇತ್ರಂ ಪಂಚವಕ್ತ್ರಂ ಚ ಶೂಲಪಾಣಿಂ ವೃಷಧ್ವಜಂ ॥೧೬॥**

ಹಾಗೆಯೇ ಮತ್ತೆ ಕೆಲವರು ಲೋಕಕ್ಕೆಲ್ಲಾ ಸುಖವನ್ನುಂಟುಮಾಡುವ, ಚಂದ್ರನನ್ನು ತಲೆಯಲ್ಲಿ ಧರಿಸಿರುವ, ಮೂರು ಕಣ್ಣುಗಳುಳ್ಳ, ಐದು ಮುಖಗಳುಳ್ಳ ಶೂಲಾಯುಧವನ್ನು ಕೈಯಲ್ಲಿ ಹಿಡಿದಿರುವ, ವೃಷಭವೇ ಧ್ವಜವಾಗಿರುವ, ಮಹಾದೇವನನ್ನು ಉಪಾಸನೆಮಾಡುತ್ತಾರೆ.

ತಥಾ ದೇವೇಷು ಸರ್ವೇಷು ಗೀತಂ ನಾಮ್ನಾ ತ್ರಿಯಂಬಕಂ ।
ಕಪರ್ದಿನಂ ಪಂಚವಕ್ತ್ರಂ ಗೌರೀದೇಹಾರ್ಧಧಾರಿಣಂ ॥೧೭॥

ಕೈಲಾಸವಾಸನಿರತಂ ಸರ್ವಶಕ್ತಿಸಮನ್ವಿತಂ ।
ಭೂತವೃಂದಯುತಂ ದೇವಂ ದಕ್ಷಯಜ್ಞವಿಘಾತಕಂ ॥೧೮॥

ಹಾಗೆಯೇ, ಎಲ್ಲಾ ವೇದಗಳಲ್ಲಿಯೂ ಸ್ತೋತ್ರಮಾಡಲ್ಪಟ್ಟು, ತ್ರಿಯಂಬಕನೆಂಬ ಹೆಸರುಳ್ಳ, ಜಟಾಧಾರಿಯಾದ, ಐದುಮುಖಗಳುಳ್ಳ, ಗೌರೀದೇವಿಯನ್ನು ಅರ್ಧ ದೇಹದಲ್ಲಿ ಧರಿಸಿರುವ, ಕೈಲಾಸಪರ್ವತದಲ್ಲಿ ವಾಸಮಾಡುತ್ತಿರುವ, ಎಲ್ಲಾ ವಿಧವಾದ ಶಕ್ತಿಗಳಿಂದಲೂ ಕೂಡಿರುವ, ಪ್ರಮಥಗಣಗಳಿಂದ ಸಹಿತನಾದ, ದಕ್ಷಯಜ್ಞವನ್ನು ನಾಶಮಾಡಿದ ಶಿವನನ್ನು ಉಪಾಸನೆಮಾಡುತ್ತಾರೆ.

ತಥಾ ಸೂರ್ಯಂ ವೇದವಿದಃ ಸಾಯಂ ಪ್ರಾತರ್ದಿನೇದಿನೇ ।
ಮಧ್ಯಾಹ್ನೇತು ಮಹಾಭಾಗಾಃ ಸ್ತುವಂತಿ ವಿವಿಧೈಃ ಸ್ತವೈಃ ॥೧೯॥

ತಥಾ ವೇದೇಷು ಸರ್ವೇಷು ಸೂರ್ಯೋಪಾಸನಮುತ್ತಮಂ ।
ಪರಮಾತ್ಮೇತಿ ವಿಖ್ಯಾತಂ ನಾಮ ತಸ್ಯ ಮಹಾತ್ಮನಃ ॥೨೦॥

ಮತ್ತೆ ಕೆಲವರು ವೇದದ ಅರ್ಥವನ್ನೆಲ್ಲಾ ಚೆನ್ನಾಗಿ ತಿಳಿದವರಾಗಿ ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಅನೇಕವಿಧವಾದ ಸ್ತೋತ್ರಗಳಿಂದ ಸೂರ್ಯನನ್ನು ಸ್ತೋತ್ರಮಾಡುತ್ತಾರೆ, ಮತ್ತು ಉಪಾಸನೆಮಾಡುತ್ತಾರೆ. ವೇದಗಳಲ್ಲಿಯೂ ಸೂರ್ಯನ ಉಪಾಸನೆಯು ಉತ್ತಮವಾದುದೆಂದು ಹೇಳಲ್ಪಟ್ಟಿದೆ. ಆದುದರಿಂದ ಆ ಮಹಾ ಮಹಿಮಶಾಲಿಯಾದ ಸೂರ್ಯನಿಗೆ ಪರಮಾತ್ಮನೆಂದು ಹೆಸರೂ ಪ್ರಸಿದ್ಧವಾಗಿದೆ.

ಅಗ್ನಿಃ ಸರ್ವತ್ರ ವೇದೇಷು ಸಂಸ್ತುತೋ ವೇದವಿತ್ತಮೈಃ ।
ಇಂದ್ರಶ್ಚಾಪಿ ತ್ರಿಲೋಕೇಶೋ ವರುಣಶ್ಚ ತಥಾಪರಃ ॥೨೧॥

ಇದರಂತೆಯೇ ಎಲ್ಲಾ ವೇದಗಳಲ್ಲಿಯೂ ಅಗ್ನಿಯೂ ಸ್ತೋತ್ರಮಾಡಲ್ಪಟ್ಟಿದ್ದಾನೆ. ವೇದಾರ್ಥಜ್ಞರಾದ ಮತ್ತೆ ಕೆಲವರು ಮೂರುಲೋಕಕ್ಕಧಿಪತಿಯಾದ ಇಂದ್ರ, ವರುಣ ಮುಂತಾದವರು ಶ್ರೇಷ್ಠರೆನ್ನುತ್ತಾರೆ. ಎಂದರೆ, ಕೆಲವರು ಅಗ್ನಿಯನ್ನೂ, ಮತ್ತೆ ಕೆಲವರು ಇಂದ್ರವರುಣ ಇವರನ್ನೂ ಶ್ರೇಷ್ಠರೆಂದು ಉಪಾಸನೆಮಾಡುತ್ತಾರೆ ಎಂದು ಅಭಿಪ್ರಾಯವು.

**ಯಥಾ ಗಂಗಾ ಪ್ರವಾಹೈಶ್ಚ ಬಹುಭಿಃ ಪರಿವರ್ತತೇ ।**
**ತಥೈವ ಸರ್ವದೇವೇಷು ವಿಷ್ಣುಃ ಪ್ರೋಕ್ತೋ ಮಹರ್ಷಿಭಿಃ ॥೨೨॥**

ಗಂಗಾನದಿಯು ತನ್ನ ಅನೇಕ ಪ್ರವಾಹಗಳಿಂದ ಹೇಗೆ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿದೆಯೋ ಹಾಗೆ ವಿಷ್ಣುವು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುತ್ತಾನೆಂದು ಎಲ್ಲಾ ವೇದಗಳಲ್ಲೂ ಹೇಳಲ್ಪಟ್ಟಿದೆ ಎಂದು ದೊಡ್ಡ ಋಷಿಗಳು ಹೇಳಿರುತ್ತಾರೆ.

**ತ್ರೀಣ್ಯೇವ ಹಿ ಪ್ರಮಾಣಾನಿ ಪಠಿತಾನಿ ಸುಪಂಡಿತೈಃ ।**
**ಪ್ರತ್ಯಕ್ಷಂ ಚಾನುಮಾನಂ ಚ ಶಾಬ್ದಂ ಚೈವ ತೃತೀಯಕಂ ॥೨೩॥**

ಪ್ರಮೇಯಪದಾರ್ಥಗಳನ್ನು ತಿಳಿಯಲು ಉಪಯೋಗವಾಗುವ ಪ್ರಮಾಣಗಳು ಪ್ರತ್ಯಕ್ಷ, ಅನುಮಾನ, ಶಬ್ದ ಈ ಮೂರೇ ಎಂದು ಪಂಡಿತರು ಹೇಳುತ್ತಾರೆ.

**ಚತ್ವಾರ್ಯೇವೇತರೇ ಪ್ರಾಹುರುಪಮಾನಯುತಾನಿ ಚ ।**
**ಅರ್ಥಾಪತ್ತಿಯುತಾನ್ಯನ್ಯೇ ಪಂಚ ಪ್ರಾಹುರ್ಮಹಾಧಿಯಃ ॥೨೪॥**

ಇನ್ನು ಕೆಲವರು ಪಂಡಿತರು ಉಪಮಾನಪ್ರಮಾಣವೂ ಸೇರಿ ನಾಲ್ಕು ಪ್ರಮಾಣಗಳೆಂದು ಹೇಳುತ್ತಾರೆ. ಮತ್ತೆ ಕೆಲವರು ಅರ್ಥಾಪತ್ತಿಪ್ರಮಾಣವೂ ಸೇರಿ ಐದು ಪ್ರಮಾಣಗಳೆಂದು ಹೇಳುತ್ತಾರೆ.

**ಸಪ್ತ ಪೌರಾಣಿಕಾಶ್ಚೈವ ಪ್ರವದಂತಿ ಮನೀಷಿಣಃ ।**
**ಏತೈಃ ಪ್ರಮಾಣೈರ್ದುರ್ಜ್ಞೇಯಂ ಯದ್ಬ್ರಹ್ಮ ಪರಮಂ ಚ ತತ್ ॥೨೫॥**

ಇನ್ನು ಕೆಲವರು ಅನುಪಲಬ್ಧಿಪ್ರಮಾಣವೂ ಸೇರಿ ಆರು ಪ್ರಮಾಣಗಳೆಂದೂ ಪೌರಾಣಿಕರು ಐತಿಹ್ಯವೆಂಬ ಪ್ರಮಾಣವೂ ಸೇರಿ ಏಳು ಪ್ರಮಾಣಗಳೆಂದೂ ಹೇಳುತ್ತಾರೆ. ಈ ರೀತಿಯಾಗಿರುವ ಪ್ರಮಾಣಗಳಿಂದ ಯಾವ ವಸ್ತುವನ್ನು ತಿಳಿಯಲಾಗದೋ ಪ್ರಮಾಣಗಳ ಶಕ್ತಿವ್ಯಾಪ್ತಿಗಳನ್ನೂ ಮೀರಿರುವ ಅದೇ ಪರಬ್ರಹ್ಮವೆಂಬುದಾಗಿ ಅಭಿಪ್ರಾಯವು.

**ವಿತರ್ಕಶ್ಚಾತ್ರ ಕರ್ತವ್ಯೋ ಬುದ್ಧ್ಯಾ ಚೈವಾಗಮೇನ ಚ ।**
**ನಿಶ್ಚಯಾತ್ಮಿಕಯಾ ಯುಕ್ತ್ಯಾ ವಿಚಾರ್ಯ ಚ ಪುನಃ ಪುನಃ ॥೨೬॥**

ಹೀಗೆ ತಿಳಿಯುವುದಕ್ಕೆ ಅಸಾಧ್ಯವಾದ ಪರಬ್ರಹ್ಮವು ಶಕ್ತಿಯಿಂದ ಸಹಿತವಾದುದೇ ಅಲ್ಲವೇ ಎಂದು ತಮ್ಮ ಬುದ್ಧಿಯಿಂದಲೂ, ಶಾಸ್ತ್ರಗಳಿಂದಲೂ ಸಂಶಯ ವಿಪರ್ಯಯಗಳಿಲ್ಲದ ನಿಶ್ಚಯರೂಪವಾಗಿರುವ ಬುದ್ಧಿಯಿಂದಲೂ, ಯುಕ್ತಿಯಿಂದಲೂ ಊಹೆಮಾಡಬೇಕು (ಅನುಮಾನಮಾಡಬೇಕು).

**ಪ್ರತ್ಯಕ್ಷತಸ್ತು ವಿಜ್ಞಾನಾಂ ಚಿಂತ್ಯಂ ಮತಿಮತಾ ಸದಾ ।**
**ದೃಷ್ಟಾಂತೇನಾಪಿ ಸತತಂ ಶಿಷ್ಟಮಾರ್ಗಾನುಸಾರಿಣಾ ॥೨೭॥**

ವೇದವು ಪ್ರಮಾಣವೆಂದು ಒಪ್ಪಿ ಅದರಂತೆ ಆಚರಿಸುವ ಶಿಷ್ಟರ ಮಾರ್ಗವನ್ನು ಅನುಸರಿಸುವವನು ತಾನು ಪ್ರತ್ಯಕ್ಷವಾಗಿ ಕಂಡ ವಸ್ತುವನ್ನು ಪುನಃ ಪುನಃ ಚಿಂತಿಸುತ್ತಿರಬೇಕು. ದೃಷ್ಟಾಂತಗಳಿಂದಲೂ ಆ ವಸ್ತುವು ಇಂಥಾದ್ದು ಎಂದು ನಿಶ್ಚಯಮಾಡಿ ತಿಳಿಯಬೇಕು.

**ವಿದ್ವಾಂಸೋಽಪಿ ವದಂತ್ಯೇವಂ ಪುರಾಣೈಃ ಪರಿಗೀಯತೇ ।**
**ದ್ರುಹಿಣೇ ಸೃಷ್ಟಿಶಕ್ತಿಶ್ಚ ಹರೌ ಪಾಲನಶಕ್ತಿತಾ ॥೨೮॥**

**ಹರೇ ಸಂಹಾರಶಕ್ತಿಶ್ಚ ಸೂರ್ಯೇ ಶಕ್ತಿಃ ಪ್ರಕಾಶಿಕಾ ।**
**ಧರಾಧರಣಶಕ್ತಿಶ್ಚ ಶೇಷೇ ಕೂರ್ಮೇ ತಥೈವ ಚ ॥೨೯॥**

ಎಲ್ಲಾ ವಸ್ತುಗಳಲ್ಲಿಯೂ ಶಕ್ತಿಯು ಇದೆಯೆಂದು ವಿದ್ವಾಂಸರು ಹೇಳುತ್ತಾರೆ. ಪುರಾಣಗಳಲ್ಲಿಯೂ ಹೇಳಿರುತ್ತದೆ. ಹೇಗೆಂದರೆ, ಬ್ರಹ್ಮನಲ್ಲಿ ಸೃಷ್ಟಿಮಾಡುವ ಶಕ್ತಿಯು ಇದೆ. ವಿಷ್ಣುವಿನಲ್ಲಿ ಕಾಪಾಡುವ ಶಕ್ತಿಯು ಇದೆ. ಈಶ್ವರನಲ್ಲಿ ಸಂಹಾರ ಮಾಡುವ ಶಕ್ತಿಯಿದೆ. ಸೂರ್ಯನಲ್ಲಿ ಪ್ರಕಾಶಗೊಳಿಸುವ ಶಕ್ತಿಯಿದೆ. ಭೂಮಿಯಲ್ಲಿ ಎಲ್ಲ ವಸ್ತುಗಳನ್ನೂ ಧರಿಸುವ ಶಕ್ತಿಯಿದೆ. ಆದಿಶೇಷನಲ್ಲಿಯೂ ಕೂರ್ಮನಲ್ಲಿಯೂ ಭೂಮಿಯನ್ನು ಧರಿಸುವ ಶಕ್ತಿಯಿದೆ.

**ಸಾಽಽದ್ಯಾ ಶಕ್ತಿಃ ಪರಿಣತಾ ಸರ್ವಸ್ಮಿನ್ ಯಾ ಪ್ರತಿಷ್ಠಿತಾ ।**
**ದಾಹಶಕ್ತಿಸ್ತಥಾ ವಹ್ನೌ ಸಮೀರೇ ಪ್ರೇರಣಾತ್ಮಿಕಾ ॥೩೦॥**

ಬೆಂಕಿಯಲ್ಲಿ ಸುಡುವ ಶಕ್ತಿಯಿದೆ. ವಾಯುವಿನಲ್ಲಿ ಕೆಲಸಮಾಡಿಸುವ ಶಕ್ತಿಯಿದೆ. ಜಗತ್ತಿಗೆ ಕಾರಣಳಾದ ಯಾವ ಆದಿಶಕ್ತಿಯಿದ್ದಾಳೆಯೋ ಅವಳೇ ಎಲ್ಲ ಪದಾರ್ಥಗಳಲ್ಲಿಯೂ ಇರುವ ಶಕ್ತಿಯ ರೂಪವಾಗಿ ಪರಿಣಮಿಸಿದ್ದಾಳೆ.

ಶಿವೋಽಪಿ ಶವತಾಂ ಯಾತಿ ಕುಂಡಲಿನ್ಯಾ ವಿವರ್ಜಿತಃ ।
ಶಕ್ತಿಹೀನಸ್ತು ಯಃಕಶ್ಚಿದಸಮರ್ಥಃ ಸ್ಮೃತೋ ಬುಧೈಃ ॥೩೧॥

ಏವಂ ಸರ್ವತ್ರ ಭೂತೇಷು ಸ್ಥಾವರೇಷು ಚರೇಷು ಚ ।
ಬ್ರಹ್ಮಾದಿಸ್ತಂಬಪರ್ಯಂತಂ ಬ್ರಹ್ಮಾಂಡೇಽಸ್ಮಿನ್ಮಹಾತಪಾಃ ॥೩೨॥

ಶಿವನೂ ಕುಂಡಲಿನೀಶಕ್ತಿಯಿಲ್ಲದವನಾದರೆ ಶವದ (ಹೆಣದ) ಹಾಗಾಗುತ್ತಾನೆ. ಶಕ್ತಿಯಿಲ್ಲದ ಯಾವನನ್ನಾದರೂ ಪಂಡಿತರು ಅಶಕ್ತನೆಂದು ಹೇಳುತ್ತಾರೆ. ಹೀಗೆ ಬ್ರಹ್ಮನನ್ನು ಮೊದಲುಮಾಡಿಕೊಂಡು ಸ್ತಂಬವೆಂಬ ಸಣ್ಣ ಹುಳುವಿನ ವರೆಗೆ ಇರುವ ಸ್ಥಾವರಜಂಗಮರೂಪವಾದ ಎಲ್ಲಾ ಪ್ರಾಣಿಗಳಲ್ಲಿಯೂ ಒಂದೊಂದು ವಿಧವಾದ ಶಕ್ತಿಯು ಇದೆ.

ಶಕ್ತಿಹೀನಂ ತು ನಿಂದ್ಯಂ ಸ್ಯಾದ್ವಸ್ತುಮಾತ್ರಂ ಚರಾಚರಂ ।
ಅಶಕ್ತಃ ಶತ್ರುವಿಜಯೇ ಗಮನೇ ಭೋಜನೇ ತಥಾ ॥೩೩॥

ಹೀಗೆ ಯಾವ ವಸ್ತುವಿನಲ್ಲಿ ಅದಕ್ಕೆ ಯೋಗ್ಯವಾದ ಶಕ್ತಿಯಿಲ್ಲವೋ ಅದು ಶಕ್ತಿಯಿಲ್ಲದುದೆಂದು ದೂಷಣೆಗೆ ಗುರಿಯಾಗುತ್ತದೆ. ಅಲ್ಲದೆ ಶತ್ರುಗಳನ್ನು ಜಯಿಸಲು ಶಕ್ತಿಯಿಲ್ಲದುದೂ, ತಿರುಗಾಡುವುದರಲ್ಲಿಯೂ, ಊಟಮಾಡುವುದರಲ್ಲಿಯೂ ಶಕ್ತಿಯಿಲ್ಲದುದಾಗುತ್ತದೆ.

ಏವಂ ಸರ್ವಗತಾ ಶಕ್ತಿಃ ಸಾ ಬ್ರಹ್ಮೇತಿ ವಿವಿಚ್ಯತೇ ।
ಸೋಪಾಸ್ಯಾ ವಿವಿಧೈಃ ಸಮ್ಯಗ್ವಿಚಾರ್ಯ ಸುಧಿಯಾ ಸದಾ ॥೩೪॥

ಹೀಗೆ ಎಲ್ಲಾ ವಸ್ತುಗಳಲ್ಲಿಯೂ ಇರುವ ಶಕ್ತಿಯೇ ಬ್ರಹ್ಮವೆಂಬುದಾಗಿ ವಿಂಗಡಿಸಿ ಹೇಳಲ್ಪಟ್ಟಿದೆ. ಬುದ್ಧಿವಂತನಾದವನು ಇಂಥ ಶಕ್ತಿಯನ್ನೇ ಅನೇಕ ಉಪಾಯಗಳಿಂದ ವಿಚಾರಮಾಡಿ ಉಪಾಸನೆಮಾಡಬೇಕು.

ವಿಷ್ಣೌ ಚ ಸಾತ್ತ್ವಿಕೀ ಶಕ್ತಿಸ್ತಯಾ ಹೀನೋಽಪ್ಯಕರ್ಮಕೃತ್ ।
ದ್ರುಹಿಣೇ ರಾಜಸೀ ಶಕ್ತಿರ್ಯಯಾ ಹೀನೋ ಹ್ಯಸೃಷ್ಟಿಕೃತ್ ॥೩೫॥

ವಿಷ್ಣುವಿನಲ್ಲಿ ಸತ್ತ್ವಗುಣವುಳ್ಳ ಶಕ್ತಿಯು ಇದೆ. ಆ ಶಕ್ತಿಯಿಲ್ಲದಿದ್ದರೆ ಆ ವಿಷ್ಣುವು ಯಾವ ಕೆಲಸವನ್ನೂ ಮಾಡಲಾರನು. ಬ್ರಹ್ಮನಲ್ಲಿ ರಜೋಗುಣವುಳ್ಳ ಶಕ್ತಿಯಿರುವುದು. ಆ ಶಕ್ತಿಯಿಲ್ಲದಿದ್ದರೆ ಅವನು ಸೃಷ್ಟಿಮಾಡಲಾರನು.

**ಶಿವೇ ಚ ತಾಮಸೀ ಶಕ್ತಿಸ್ತಯಾ ಸಂಹಾರಕಾರಕಃ ।**
**ಇತ್ಯೂಹ್ಯಂ ಮನಸಾ ಸರ್ವಂ ವಿಚಾರ್ಯ ಚ ಪುನಃಪುನಃ ॥೩೬॥**

ಶಿವನಲ್ಲಿ ತಮೋಗುಣವುಳ್ಳ ಶಕ್ತಿಯಿರುವುದು. ಅದರಿಂದ ಅವನು ಸಂಹಾರದ ಕೆಲಸವನ್ನು ಮಾಡುತ್ತಾನೆ. ಆ ಶಕ್ತಿಯಿಲ್ಲದಿದ್ದರೆ ಅವನು ಸಂಹಾರವನ್ನು ಮಾಡಲಾರನು. ಇದರಂತೆಯೇ ಎಲ್ಲಾ ವಸ್ತುಗಳಲ್ಲಿಯೂ ಶಕ್ತಿಯು ಇದೆ ಎಂದು ಮನಸ್ಸಿನಿಂದ ಊಹಿಸಬೇಕು.

**ಶಕ್ತಿಃ ಕರೋತಿ ಬ್ರಹ್ಮಾಂಡಂ ಸಾ ವೈ ಪಾಲಯತೇಽಖಿಲಂ ।**
**ಇಚ್ಛಯಾ ಸಂಹರತ್ಯೇಷಾ ಜಗದೇತಚ್ಚರಾಚರಂ ॥೩೭॥**

ಆ ಶಕ್ತಿಯೇ ಬ್ರಹ್ಮಾಂಡವನ್ನು ಸೃಷ್ಟಿಮಾಡುತ್ತದೆ. ಸೃಷ್ಟಿಸಿದ ಜಗತ್ತನ್ನು ಕಾಪಾಡುತ್ತದೆ. ತನ್ನ ಇಚ್ಛೆಬಂದಾಗ ಈ ಸ್ಥಾವರಜಂಗಮಾತ್ಮಕವಾದ ಜಗತ್ತನ್ನು ಸಂಹಾರಮಾಡುತ್ತದೆ.

**ನ ವಿಷ್ಣುರ್ನ ಹರಃ ಶಕ್ರೋ ನ ಬ್ರಹ್ಮಾ ನ ಚ ಪಾವಕಃ ।**
**ನ ಸೂರ್ಯೋ ವರುಣಃ ಶಕ್ತಃ ಸ್ವೇ ಸ್ವೇ ಕಾರ್ಯೇ ಕಥಂಚನ ॥೩೮॥**

ವಿಷ್ಣುವೇ ಆಗಲಿ, ಶಿವನೇ ಆಗಲಿ, ಇಂದ್ರನೇ ಆಗಲಿ, ಬ್ರಹ್ಮನೇ ಆಗಲಿ, ಅಗ್ನಿಯೇ ಆಗಲಿ, ಸೂರ್ಯನೇ ಆಗಲಿ, ವರುಣನೇ ಆಗಲಿ, ಶಕ್ತಿಯಿಲ್ಲದವರಾದರೆ ತಮ್ಮ ತಮ್ಮ ಪಾಲನೆ ಸಂಹಾರ ಮೊದಲಾದ ಕೆಲಸಗಳನ್ನು ಮಾಡಲಾರರು.

**ತಯಾ ಯುಕ್ತಾ ಹಿ ಕುರ್ವಂತಿ ಸ್ವಾನಿ ಕಾರ್ಯಾಣಿ ತೇ ಸುರಾಃ ।**
**ಸೈವ ಕಾರಣಕಾರ್ಯೇಷು ಪ್ರತ್ಯಕ್ಷೇಣಾವಗಮ್ಯತೇ ॥೩೯॥**

ಆ ಶಕ್ತಿಯಿಂದ ಕೂಡಿದವರಾದರೆ ಆ ದೇವತೆಗಳು ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ. ಆದುದರಿಂದ ಆ ಶಕ್ತಿಯೇ ಕಾರಣಗಳಲ್ಲಿಯೂ, ಕಾರ್ಯಗಳಲ್ಲಿಯೂ ಪ್ರತ್ಯಕ್ಷಪ್ರಮಾಣದಿಂದ ತಿಳಿಯಲ್ಪಡುತ್ತದೆ.

**ಸಗುಣಾ ನಿರ್ಗುಣಾ ಸಾ ತು ದ್ವಿಧಾ ಪ್ರೋಕ್ತಾ ಮನೀಷಿಭಿಃ ।**
**ಸಗುಣಾ ರಾಗಿಭಿಃ ಸೇವ್ಯಾ ನಿರ್ಗುಣಾ ತು ವಿರಾಗಿಭಿಃ ॥೪೦॥**

ಆ ಶಕ್ತಿಯು, ಗುಣಗಳಿಂದ ಸಹಿತವಾದುದು, ಗುಣಗಳಿಲ್ಲದುದು ಎಂದು ಎರಡು ವಿಧವು. ಇಚ್ಛೆಯುಳ್ಳವರು ಸಗುಣವಾದ ಶಕ್ತಿಯನ್ನು ಉಪಾಸನೆಮಾಡಬೇಕು. ಇಚ್ಛಾದಿಗಳಿಲ್ಲದವರು ಗುಣಗಳಿಲ್ಲದ ಶಕ್ತಿಯನ್ನು ಉಪಾಸನೆಮಾಡಬೇಕು.

**ಧರ್ಮಾರ್ಥಕಾಮಮೋಕ್ಷಾಣಾಂ ಸ್ವಾಮಿನೀ ಸಾ ನಿರಾಕುಲಾ ।**
**ದದಾತಿ ವಾಂಛಿತಾನ್ ಕಾಮಾನ್ ಪೂಜಿತಾ ವಿಧಿಪೂರ್ವಕಂ ॥೪೧॥**

ದುಃಖಾದಿಗಳಿಲ್ಲದಿರುವ ಆ ಶಕ್ತಿಯೇ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕುವಿಧವಾದ ಪುರುಷಾರ್ಥಗಳಿಗೂ ಒಡೆಯಳಾಗಿದ್ದಾಳೆ.. ಯಾರು ಅವಳನ್ನು ಶಾಸ್ತ್ರದಲ್ಲಿ ಹೇಳಿರುವ ರೀತಿಯಲ್ಲಿ ಪೂಜಿಸುತ್ತಾರೋ ಅವರಿಗೆ ಇಷ್ಟವಾದ ಕೋರಿಕೆಗಳನ್ನೂ ವಸ್ತುಗಳನ್ನೂ ಒದಗಿಸಿಕೊಡುತ್ತಾಳೆ.

**ನ ಜಾನಂತಿ ಜನಾ ಮೂಢಾಸ್ತಾಂ ಸದಾ ಮಾಯಯಾ ವೃತಾಃ ।**
**ಜಾನಂತೋಽಪಿ ನರಾಃ ಕೇಚಿನ್ಮೋಹಯಂತಿ ಪರಾನಪಿ ॥೪೨॥**

ಯಾವಾಗಲೂ ಮಾಯೆಯಿಂದ ಆವರಿಸಲ್ಪಟ್ಟವರಾದ ದಡ್ಡಜನಗಳು ಆ ಶಕ್ತಿಯನ್ನು ತಿಳಿಯುವುದೇ ಇಲ್ಲ. ತಿಳಿದರೂ ಕೆಲವರು ಆ ಶಕ್ತಿಯ ನಿಜಸ್ವರೂಪವನ್ನು ತಿಳಿಸಲಾರದೆ ಇತರರನ್ನು ಭ್ರಾಂತಿಗೊಳಿಸುತ್ತಾರೆ.

**ಪಂಡಿತಾಃ ಸ್ವೋದರಾರ್ಥಂ ವೈ ಪಾಖಂಡಾನಿ ಪೃಥಕ್ಪೃಥಕ್ ।**
**ಪ್ರವರ್ತಯಂತಿ ಕಲಿನಾ ಪ್ರೇರಿತಾ ಮಂದಚೇತಸಃ ॥೪೩॥**

ಪಂಡಿತರೂ ಕೂಡ ತಮ್ಮ ಹೊಟ್ಟೆಪಾಡಿಗಾಗಿ, ಕಲಿಯಿಂದ ಪ್ರೇರಿತವಾದ ಮಂದಬುದ್ಧಿಯುಳ್ಳವರಾಗಿ, ವೇದವಿರುದ್ಧವಾದ ಅನೇಕ ಮಾರ್ಗಗಳ ಪ್ರಚಾರವನ್ನುಂಟುಮಾಡುತ್ತಾರೆ.

**ಕಲಾವಸ್ಮಿನ್ ಮಹಾಭಾಗಾ ನಾನಾಭೇದಸಮುತ್ಥಿತಾಃ ।**
**ನಾನ್ಯೇ ಯುಗೇ ತಥಾ ಧರ್ಮಾ ವೇದಬಾಹ್ಯಾಃ ಕಥಂಚನ ॥೪೪॥**

ಓ ಪುಣ್ಯಶಾಲಿಗಳೇ, ಈ ಕಲಿಯುಗದಲ್ಲಿ ಹೇಗೆ ಅನೇಕ ವಿಧವಾದ, ವೇದಕ್ಕೆ ವಿರುದ್ಧವಾದ, ಹಲವು ಮತಗಳು ಬಹುಬಗೆಯ ಅಭಿಪ್ರಾಯಭೇದಗಳಿಂದ ಉಂಟಾಗಿವೆಯೋ, ಹಾಗೆ ಇತರ ಯಾವ ಯುಗದಲ್ಲಿಯೂ ಈರೀತಿಯಾದ ಮತಭೇದಗಳಿರಲಿಲ್ಲವು.

**ವಿಷ್ಣುಶ್ಚರತ್ಯಸಾವುಗ್ರಂ ತಪೋ ವರ್ಷಾಣ್ಯನೇಕಶಃ ।**
**ಬ್ರಹ್ಮಾ ಹರಸ್ತ್ರಯೋ ದೇವಾ ಧ್ಯಾಯಂತಃ ಕಮಪಿ ಧ್ರುವಂ ॥೪೫॥**

ವಿಷ್ಣು, ಬ್ರಹ್ಮ, ಶಿವರೆಂಬ ಈ ಮೂರು ದೇವತೆಗಳೂ ಕೂಡ ಬೇರೆ ಯಾವುದನ್ನೋ ಧ್ಯಾನಮಾಡುತ್ತಾ ಅನೇಕ ವರ್ಷಗಳವರೆಗೂ ಭಯಂಕರವಾದ ತಪಸ್ಸನ್ನು ಮಾಡುತ್ತಾರೆ.

**ಕಾಮಯಾನಾಃ ಸದಾ ಕಾಮಂ ತೇ ತ್ರಯಃ ಸರ್ವದೈವ ಹಿ ।**
**ಯಜಂತಿ ಯಜ್ಞಾನ್ ವಿವಿಧಾನ್ ಬ್ರಹ್ಮವಿಷ್ಣುಮಹೇಶ್ವರಾಃ ॥೪೬॥**

ಈ ಬ್ರಹ್ಮ ವಿಷ್ಣು ಮಹೇಶ್ವರರೂ ಕೂಡ ಯಾವಾಗಲೂ ಯಾವುದಾದರೊಂದು ಫಲವನ್ನು ಅಪೇಕ್ಷಿಸುತ್ತಾ ಆ ಫಲವನ್ನು ಹೊಂದುವುದಕ್ಕಾಗಿ ಅನೇಕ ವಿಧವಾದ ಯಜ್ಞಗಳನ್ನು ಮಾಡುತ್ತಾರೆ.

**ತೇ ವೈ ಶಕ್ತಿಂ ಪರಾಂ ದೇವೀಂ ಬ್ರಹ್ಮಾಖ್ಯಾಂ ಪರಮಾತ್ಮಿಕಾಂ ।**
**ಧ್ಯಾಯಂತಿ ಮನಸಾ ನಿತ್ಯಂ ನಿತ್ಯಾಂ ಮತ್ವಾ ಸನಾತನೀಂ ॥೪೭॥**

ಅವರೂ ಕೂಡ ಉತ್ಕೃಷ್ಟವಾದ ಆತ್ಮಸ್ವರೂಪಳೂ, ಶ್ರೇಷ್ಠದೇವತೆಯೂ ಎಲ್ಲಕ್ಕೂ ದೊಡ್ಡದೂ ಆದ ಶಕ್ತಿಯನ್ನು ನಿತ್ಯಳನ್ನಾಗಿಯೂ, ಅನಾದಿಯಾದವಳನ್ನಾಗಿಯೂ ತಿಳಿದು ಯಾವಾಗಲೂ ಮನಸ್ಸಿನಲ್ಲಿಯೇ ಧ್ಯಾನಮಾಡುತ್ತಾರೆ.

**ತಸ್ಮಾಚ್ಛಕ್ತಿಃ ಸದಾ ಸೇವ್ಯಾ ವಿದ್ವದ್ಭಿಃ ಕೃತನಿಶ್ಚಯೈಃ ।**
**ನಿಶ್ಚಯಃ ಸರ್ವಶಾಸ್ತ್ರಾಣಾಂ ಜ್ಞಾತವ್ಯೋ ಮುನಿಸತ್ತಮಾಃ ॥೪೮॥**

ಓ ಮುನಿಶ್ರೇಷ್ಠರೇ, ಬ್ರಹ್ಮಾದಿಗಳಿಂದಲೂ ಧ್ಯೇಯಳಾದ ಯಾವ ಶಕ್ತಿಯಿದ್ದಾಳೆಯೋ ಅವಳನ್ನು ವಿದ್ವಾಂಸರಾದವರು ನಿತ್ಯಳಾದ ದೇವತೆಯನ್ನಾಗಿ ತಿಳಿದು ಅವಳ ಸೇವೆಯನ್ನು (ಉಪಾಸನೆಯನ್ನು) ಮಾಡಬೇಕೆಂಬುದೇ ಎಲ್ಲಾ ಶಾಸ್ತ್ರಗಳ ಸಿದ್ಧಾಂತವೆಂಬುದಾಗಿ ತಿಳಿಯಿರಿ.

**ಕೃಷ್ಣಾಚ್ಛ್ರುತಂ ಮಯಾ ಚೈತತ್ತೇನ ಜಾತಂ ತು ನಾರದಾತ್ ।**
**ಪಿತುಃ ಸಕಾಶಾತ್ತೇನಾಪಿ ಬ್ರಹ್ಮಣಾ ವಿಷ್ಣುವಾಕ್ಯತಃ ॥೪೯॥**

ನಾನು ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾದ ವ್ಯಾಸನಿಂದ ಈ ವಿಚಾರವನ್ನೆಲ್ಲಾ ತಿಳಿದುಕೊಂಡಿರುತ್ತೇನೆ. ಅವನು ನಾರದನಿಂದ ತಿಳಿದುಕೊಂಡಿದ್ದಾನೆ. ನಾರದನು ತನ್ನ ತಂದೆಯಾದ ಬ್ರಹ್ಮನಿಂದಲೂ, ಬ್ರಹ್ಮನು ವಿಷ್ಣುವಿನಿಂದಲೂ ಈ ವಿಚಾರವನ್ನು ತಿಳಿದುಕೊಂಡಿರುತ್ತಾರೆ.

**ನ ಶ್ರೋತವ್ಯಂ ನ ಮಂತವ್ಯಮನ್ಯೇಷಾಂ ವಚನಂ ಬುಧೈಃ ।**
**ಶಕ್ತಿರೇವ ಸದಾ ಸೇವ್ಯಾ ವಿದ್ವದ್ಭಿಃ ಕೃತನಿಶ್ಚಯೈಃ ॥೫೦॥**

ಬುದ್ಧಿವಂತರಾದವರು ಮತ್ತೊಬ್ಬರ ಮಾತನ್ನು ಕೇಳಲೂಬಾರದು. ಅದನ್ನು ಮನನಮಾಡಲೂಬಾರದು. ಶಕ್ತಿಯೇ ಉತ್ಕೃಷ್ಟವಾದ ದೇವತೆಯೆಂದು ತಿಳಿದು ಅವಳ ಉಪಾಸನೆಯನ್ನೇ ಮಾಡಬೇಕು.

**ಪ್ರತ್ಯಕ್ಷಮಪಿ ದ್ರಷ್ಟವ್ಯಮಶಕ್ತಸ್ಯ ವಿಚೇಷ್ಟಿತಂ ।**
**ಅತಃ ಸರ್ವೇಷು ಭೂತೇಷು ಜ್ಞಾತವ್ಯಾ ಶಕ್ತಿರೇವ ಹಿ ॥೫೧॥**

ಶಕ್ತಿಯಿಲ್ಲದವನು ಅಲುಗಾಡುವುದು ಕೂಡ ಇಲ್ಲವೆಂಬುದು ನಮಗೆ ಪತ್ಯಕ್ಷವಾಗಿಯೇ ಗೊತ್ತಾಗುತ್ತದೆ. ಹೀಗಿರುವುದರಿಂದ ಎಲ್ಲ ಪ್ರಾಣಿಗಳಲ್ಲಿಯೂ ಶಕ್ತಿಯೇ ಶ್ರೇಷ್ಠಳೆಂದು ತಿಳಿದು ಉಪಾಸನೆ ಮಾಡಬೇಕು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಅಷ್ಟಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

## || ನವಮೋಽಧ್ಯಾಯಃ ||

## ಒಂಬತ್ತನೆಯ ಅಧ್ಯಾಯವು

|| ಸೂತ ಉವಾಚ ||

**ಯದಾ ವಿನಿರ್ಗತಾ ನಿದ್ರಾ ದೇಹಾತ್ತಸ್ಯ ಜಗದ್ಗುರೋಃ ।**
**ನೇತ್ರಾಸ್ಯನಾಸಿಕಾಬಾಹುಹೃದಯೇಭ್ಯಸ್ತಥೋರಸಃ ॥೧॥**

ಸೂತಮಹರ್ಷಿಯು ಹೀಗೆ ಹೇಳಿದನು—ಈ ಪ್ರಪಂಚಕ್ಕೆಲ್ಲ ಸ್ವಾಮಿಯಾದ ಆ ವಿಷ್ಣುವಿನ ಶರೀರದಿಂದ ಎಂದರೆ ಕಣ್ಣು, ಬಾಯಿ, ಮೂಗು, ತೋಳು, ಮನಸ್ಸು ಮತ್ತು ಎದೆ ಇವುಗಳಿಂದ ನಿದ್ರೆಯು ಎಂದರೆ ನಿದ್ರಾಭಿಮಾನಿಯಾದ ತಾಮಸೀ ಶಕ್ತಿಯು ಯಾವಾಗ ಹೊರಹೊರಟಳೋ ಆಗ

**ನಿಃಸೃತ್ಯ ಗಗನೇ ತಸ್ಥೌ ತಾಮಸೀ ಶಕ್ತಿರುತ್ತಮಾ ।**
**ಉದತಿಷ್ಠಜ್ಜಗನ್ನಾಥೋ ಜೃಂಭಮಾಣಃ ಪುನಃಪುನಃ ॥೨॥**

ತುಂಬ ಬಲಶಾಲಿನಿಯಾದ ಆ ತಾಮಸೀ ಶಕ್ತಿಯು ಹೊರಕ್ಕೆ ಬಂದು ಅಂತರಿಕ್ಷದಲ್ಲಿ ನಿಂತಳು. ಆಗ ಈ ಪ್ರಪಂಚಕ್ಕೆ ಒಡೆಯನಾದ ವಿಷ್ಣುವು ಬಾರಿಬಾರಿಗೂ ಆಕಳಿಸುತ್ತಾ ಎದ್ದು ನಿಂತನು.

**ತದಾಽಪಶ್ಯತ್ ಸ್ಥಿತಂ ತತ್ರ ಭಯತ್ರಸ್ತಂ ಪ್ರಜಾಪತಿಂ ।**
**ಉವಾಚ ಚ ಮಹಾತೇಜಾ ಮೇಘಗಂಭೀರಯಾ ಗಿರಾ ॥೩॥**

ಆಗ ಹೆಚ್ಚಾದ ಪರಾಕ್ರಮವುಳ್ಳ ವಿಷ್ಣುವು ಅಲ್ಲಿ ಬ್ರಹ್ಮನನ್ನು ಹೆದರಿಕೆಯಿಂದ ನಡುಗುತ್ತಿರುವುದನ್ನು ನೋಡಿದನು ಮತ್ತು ಮೋಡದ ಗುಡುಗಿನಂತೆ ಗಂಭೀರವಾದ ಧ್ವನಿಯಿಂದ ಹೀಗೆ ಹೇಳಿದನು.

|| ವಿಷ್ಣುರುವಾಚ ||

**ಕಿಮಾಗತೋಽಸಿ ಭಗವಂಸ್ತ್ಯಕ್ತ್ವಾತ್ರ ಪದ್ಮಜ ।**
**ಕಸ್ಮಾಚ್ಚಿಂತಾತುರೋಽಸಿ ತ್ವಂ ಭಯಾಕುಲಿತಮಾನಸಃ ॥೪॥**

ಕಮಲದಲ್ಲಿ ಹುಟ್ಟಿದ ಓ ಬ್ರಹ್ಮನೇ, ತಪಸ್ಸನ್ನು ಬಿಟ್ಟು ನೀನು ಏತಕ್ಕೆ ಇಲ್ಲಿಗೆ ಬಂದಿರುವೆ ? ಭಯದಿಂದ ಗಾಬರಿಗೊಂಡ ಮನಸ್ಸುಳ್ಳವನಾಗಿ ನೀನು ಏತಕ್ಕೆ ದುಃಖಿತನಾಗಿದ್ದೀಯೆ ? ಎಂದು ವಿಷ್ಣುವು ಬ್ರಹ್ಮನನ್ನು ಕೇಳಿದನು.

|| ಬ್ರಹ್ಮೋವಾಚ ||

**ತ್ವತ್ಕರ್ಣಮಲಜೌ ದೇವ ದೈತ್ಯೌ ಚ ಮಧುಕೈಟಭೌ ।**
**ಹಂತುಂ ಮಾಂ ಸಮುಪಾಯಾತೌ ಘೋರರೂಪೌ ಮಹಾಬಲೌ ॥೫॥**

ಬ್ರಹ್ಮನು ಹೀಗೆ ಹೇಳಿದನು—ಓ ಪ್ರಕಾಶರೂಪಿಯಾದ ವಿಷ್ಣುವೇ, ನಿನ್ನ ಕಿವಿಯ ಕೊಳೆಯಿಂದ ಹುಟ್ಟಿದವರಾದ, ಭಯಂಕರವಾದ ಆಕಾರವುಳ್ಳವರೂ, ಹೆಚ್ಚಾದ ಶಕ್ತಿಯುಳ್ಳವರೂ ಆದ ದಿತಿಯ ಮಕ್ಕಳಾದ ಮಧು ಮತ್ತು ಕೈಟಭ ಎಂಬ ರಾಕ್ಷಸರು ನನ್ನನ್ನು ಕೊಲ್ಲಲು ಬಂದರು.

**ಭಯಾರ್ತ್ತಯೋಽಸ್ಸಮಾಯಾತಸ್ತ್ವತ್ಸಮೀಪಂ ಜಗತ್ಪತೇ ।**
**ತ್ರಾಹಿ ಮಾಂ ವಾಸುದೇವಾದ್ಯ ಭಯತ್ರಸ್ತಂ ವಿಚೇತಸಂ ॥೬॥**

ಈ ಜಗತ್ತಿಗೆ ಎಂದರೆ, ಬದಲಾಯಿಸುತ್ತಾ ಸಾಗುತ್ತಿರುವ ಈ ಪ್ರಪಂಚಕ್ಕೆ ಒಡೆಯನಾದ, ವಸುದೇವನಿಗೆ ಮಗನಾಗಿ ಅವತರಿಸಿದ ಓ ವಿಷ್ಣುವೇ, ಆ ರಾಕ್ಷಸರ ಭಯದಿಂದ ನಿನ್ನ ಸಮೀಪವನ್ನು ಕುರಿತು ನಾನು ಬಂದಿರುತ್ತೇನೆ. ಭಯದಿಂದ ನಡಗುತ್ತಿರುವ ಪರವಶವಾದ ಮನಸ್ಸುಳ್ಳ ನನ್ನನ್ನು ಈಗ ನೀನು ಕಾಪಾಡು.

|| ವಿಷ್ಣುರುವಾಚ ||

**ತಿಷ್ಠಾದ್ಯ ನಿರ್ಭಯೋ ಜಾತಃ ತೌ ಹನಿಷ್ಯಾಮ್ಯಹಂ ಕಿಲ ।**
**ಯುದ್ಧಾಯಾಜಗ್ಮತುರ್ಮೂರ್ಢೌ ಮತ್ಸಮೀಪಂ ಗತಾಯುಷೌ ॥೭॥**

ವಿಷ್ಣುವು ಹೀಗೆ ಹೇಳಿದನು—ಓ ಬ್ರಹ್ಮನೇ, ಈಗ ನೀನು ಭಯವಿಲ್ಲದವನಾಗಿ ಇರು. ನಾನು ಆ ರಾಕ್ಷಸರನ್ನು ಖಂಡಿತವಾಗಿಯೂ ಕೊಲ್ಲುವೆನು. ಆಯುಸ್ಸು

ತೀರಿದವರಾದುದರಿಂದ ವಿವೇಚನೆ ಇಲ್ಲದವರಾಗಿ ಆ ರಾಕ್ಷಸರು ಯುದ್ಧಮಾಡಲು ನನ್ನ ಹತ್ತಿರಕ್ಕೆ ಬಂದಿರುತ್ತಾರೆ.

|| ಸೂತ ಉವಾಚ ||

**ಏವಂ ವದತಿ ದೇವೇಶೇ ದಾನವೌ ತೌ ಮಹಾಬಲೌ ।**
**ವಿಚಿನ್ವಾನಾವಜಂ ಚೋಭೌ ಸಂಪ್ರಾಪ್ತೌ ಮದಗರ್ವಿತೌ ॥೮॥**

ಸೂತನು ಹೇಳಿದನು— ದೇವತೆಗಳಿಗೆ ಸ್ವಾಮಿಯಾದ ವಿಷ್ಣುವು ಹೀಗೆ ಹೇಳುತ್ತಿರುವಷ್ಟರಲ್ಲಿಯೇ ಹೆಚ್ಚಾದ ಶಕ್ತಿಯುಳ್ಳ ಆ ಇಬ್ಬರು ರಾಕ್ಷಸರೂ ಬಲದ ಮದದಿಂದ ಅಹಂಕಾರವುಳ್ಳವರಾಗಿ ಬ್ರಹ್ಮನನ್ನು ಹುಡುಕುತ್ತಾ ಸಮೀಪಕ್ಕೆ ಬಂದರು.

**ನಿರಾಧಾರೌ ಜಲೇ ತತ್ರ ಸಂಸ್ಥಿತೌ ವಿಗತಜ್ವರೌ ।**
**ತಾವೂಚತುರ್ಮದೋನ್ಮತ್ತೌ ಬ್ರಹ್ಮಾಣಂ ಮುನಿಸತ್ತಮಾಃ ॥೯॥**

ಓ ಶೌನಕಾದಿಋಷಿಶ್ರೇಷ್ಠರೇ, ಭೂಮಿಯ ಆಶ್ರಯವಿಲ್ಲದವರಾದರೂ ಆತಂಕ ವಿಲ್ಲದವರಾದ, ತೋಳಿನ ಶಕ್ತಿಯಿಂದ ಮದಿಸಿದ್ದ ಆ ಇಬ್ಬರು ರಾಕ್ಷಸರೂ ಅಲ್ಲಿ ನೀರಿನ ಮೇಲೆಯೇ ನಿಲ್ಲುವವರಾಗಿ ಬ್ರಹ್ಮನನ್ನು ಕುರಿತು ಹೀಗೆ ಹೇಳಿದರು.

**ಪಲಾಯಿತ್ವಾ ಸಮಾಯಾತಃ ಸನ್ನಿಧಾವಸ್ಯ ಕಿಂ ತತಃ ।**
**ಯುದ್ಧಂ ಕುರು ಹನಿಷ್ಯಾವಃ ಪಶ್ಯತೋಽಸ್ಯೈವ ಸನ್ನಿಧೌ ॥೧೦॥**

ಓ ಬ್ರಹ್ಮನೇ, ಭಯದಿಂದ ಓಡಿ ಈ ವಿಷ್ಣುವಿನ ಸಮೀಪದಲ್ಲಿ ಬಂದಿದ್ದೀಯೆ. ಅದರಿಂದ ಆದುದೇನು ? ಯುದ್ಧವನ್ನು ಮಾಡು. ಇವನ ಸಮೀಪದಲ್ಲಿಯೇ ಇವನು ನೋಡುತ್ತಿರುವಾಗಲೇ ನಿನ್ನನ್ನು ಕೊಲ್ಲುವೆವು.

**ಪಶ್ಚಾದೇನಂ ಹನಿಷ್ಯಾವಃ ಸರ್ಪಭೋಗೋಪರಿ ಸ್ಥಿತಂ ।**
**ತ್ವಮದ್ಯ ಕುರು ಸಂಗ್ರಾಮಂ ದಾಸೋಽಸ್ಮೀತಿ ಚ ವಾ ವದ ॥೧೧॥**

ಹಾವಿನ ಶರೀರದ ಮೇಲೆ ಇರುವ ಈ ವಿಷ್ಣುವನ್ನು ನಿನ್ನನ್ನು ಕೊಂದ ಮೇಲೆ ಸಂಹರಿಸುವೆವು. ನೀನು ಈಗ ಯುದ್ಧವನ್ನಾದರೂ ಮಾಡು, ಅಥವಾ 'ನಿಮಗೆ ಅಧೀನನಾಗಿ ಆಳಾಗಿದ್ದೇನೆ' ಎಂದಾದರೂ ಹೇಳು, ಶರಣಾಗತನಾಗು.

|| ಸೂತ ಉವಾಚ ||

**ತಚ್ಛ್ರುತ್ವಾ ವಚನಂ ವಿಷ್ಣುಃ ತಾವುವಾಚ ಜನಾರ್ದನಃ ।**
**ಕುರುತಾಂ ಸಮರಂ ಕಾಮಂ ಮಯಾ ದಾನವಪುಂಗವೌ ॥೧೨॥**

ಸೂತನು ಈ ಪ್ರಕಾರವಾಗಿ ಹೇಳಿದನು—ದುಷ್ಟಜನರನ್ನು ನಿಗ್ರಹಿಸುವ ವಿಷ್ಣುವು ಆ ರಾಕ್ಷಸರ ಮಾತನ್ನು ಕೇಳಿ, ಓ ರಾಕ್ಷಸಶ್ರೇಷ್ಠರೇ 'ನನ್ನೊಡನೆ ನೀವು ನಿಮ್ಮ ಇಚ್ಛಾನುಸಾರವಾಗಿ ಯುದ್ಧವನ್ನು ಮಾಡಿರಿ' ಎಂದು ಹೇಳಿದನು ಮತ್ತು ಮುಂದುವರಿದು ಹೀಗೆ ಹೇಳಿದನು.

**ಹರಿಷ್ಯಾಮಿ ಮದಂ ಚಾಹಂ ಯುವಯೋರ್ಮತ್ತಯೋಃ ಕಿಲ ।**
**ಆಗಚ್ಛೇತಾಂ ಮಹಾಭಾಗೌ ಶ್ರದ್ಧಾ ಚೇದ್ವಾಂ ಮಹಾಬಲೌ ॥೧೩॥**

ತುಂಬ ಗಟ್ಟಿಗರಾದ ಓ ರಾಕ್ಷಸರೇ, ನೀವು ಹೆಚ್ಚಾದ ಪರಾಕ್ರಮವುಳ್ಳವರೆಂದು ನಿಮಗೆ ಭರವಸೆ ಇದ್ದರೆ ಬನ್ನಿರಿ, ಯುದ್ಧಮಾಡಿರಿ, ಮದಿಸಿರುವ ನಿಮ್ಮಿಬ್ಬರಿಗೂ ಬಾಹುಬಲದಿಂದ ಉಂಟಾಗಿರುವ ಮದವನ್ನು ನಾನು ನಾಶಮಾಡುವೆನು.

|| ಸೂತ ಉವಾಚ ||

**ಶ್ರುತ್ವಾ ತದ್ವಚನಂ ಚೋಭೌ ಕ್ರೋಧವ್ಯಾಕುಲಲೋಚನೌ ।**
**ನಿರಾಧಾರೌ ಜಲಸ್ಥೌ ಚ ಯುದ್ಧೋದ್ಯುಕ್ತೌ ಬಭೂವತುಃ ॥೧೪॥**

ಸೂತನು ಹೇಳಿದನು —ವಿಷ್ಣುವಿನ ಆ ಮಾತನ್ನು ಕೇಳಿ ಆ ರಾಕ್ಷಸರು ಕೋಪದಿಂದ ಕೆರಳಿದ ಕಣ್ಣುಳ್ಳವರಾಗಿ ನೆಲದ ಆಧಾರವಿಲ್ಲದವರಾದರೂ ನೀರಿನಲ್ಲೇ ನಿಲ್ಲುವವರಾಗಿ, ಯುದ್ಧಕ್ಕೆ ತೊಡಗಿದವರಾದರು.

**ಮಧುಶ್ಚ ಕುಪಿತಸ್ತತ್ರ ಹರಿಣಾ ಸಹ ಸಂಯುಗಂ ।**
**ಕರ್ತುಂ ಪ್ರಚಲಿತಸ್ತೂರ್ಣಂ ಕೈಟಭಸ್ತು ತಥಾ ಸ್ಥಿತಃ ॥೧೫॥**

ಅವರಿಬ್ಬರಲ್ಲಿ ಮೊದಲು ಮಧುವೆಂಬ ರಾಕ್ಷಸನು ಕೋಪಗೊಂಡವನಾಗಿ ವಿಷ್ಣುವಿನೊಡನೆ ಯುದ್ಧಮಾಡಲು ಜಾಗ್ರತೆಯಾಗಿ ಸಿದ್ಧನಾದನು. ಕೈಟಭನು ಮಾತ್ರ ಹಾಗೆಯೇ ಇದ್ದನು.

**ಬಾಹುಯುದ್ಧಂ ತಯೋರಾಸೀನ್ಮಲ್ಲಯೋರಿವ ಮತ್ತಯೋಃ ।**
**ಶ್ರಾಂತೇ ಮಧೌ ಕೈಟಭಸ್ತು ಸಂಗ್ರಾಮಮಕರೋತ್ತದಾ ॥೧೬॥**

ಮದಿಸಿರುವ ಇಬ್ಬರು ಜಟ್ಟಿಗಳಿಗೆ ಹೇಗೋ ಹಾಗೆ ಆ ವಿಷ್ಣುವು ಮತ್ತು ಮಧುರಾಕ್ಷಸ ಇವರಿಗೆ ಕುಸ್ತಿಯು ನಡೆಯಿತು. ಮಧುವು ಬಳಲಿಹೋದ ಕೂಡಲೇ ಕೈಟಭನು ಯುದ್ಧಮಾಡುತ್ತ ಬಂದನು.

**ಪುನರ್ಮಧುಃ ಕೈಟಭಶ್ಚ ಯುಯುಧಾತೇ ಪುನಃಪುನಃ ।**
**ಬಾಹುಯುದ್ಧೇನ ರಾಗಾಂಧೌ ವಿಷ್ಣುನಾ ಪ್ರಭವಿಷ್ಣುನಾ ॥೧೭॥**

ಎಲ್ಲಕ್ಕೂ ಸ್ವಾಮಿಯೂ ಸಮರ್ಥನೂ ಆದ ವಿಷ್ಣುವಿನೊಡನೆ ಜಯಿಸಬೇಕೆಂಬ ಆಸೆಯಿಂದ ಕುರುಡರಾಗಿ ಎಂದರೆ ತಮ್ಮ ಮತ್ತು ಎದುರಾಳಿಯ ಶಕ್ತಿಯ ಪರಿಮಾಣಗಳನ್ನು ತಿಳಿಯಲಾರದವರಾಗಿ ಆ ಮಧುವೂ ಕೈಟಭನೂ, ಒಬ್ಬನು ಬಳಲಿದರೆ ಮತ್ತೊಬ್ಬನಂತೆ ಸರದಿಯ ಮೇರೆ ಬಾರಿಬಾರಿಗೂ ಕಾಳಗವಾಡುತ್ತಾ ಬಂದರು.

**ಪ್ರೇಕ್ಷಕಸ್ತು ತದಾ ಬ್ರಹ್ಮಾ ದೇವೀ ಚೈವಾಂತರಿಕ್ಷಗಾ ।**
**ನ ಮಮ್ಲತುಸ್ತದಾ ತೌ ತು ವಿಷ್ಣುಸ್ತು ಮ್ಲಾನಿಮಾಪ್ತವಾನ್ ॥೧೮॥**

ಆಗ ಬ್ರಹ್ಮನು ಸಾಕ್ಷಿಯಂತೆ ನೋಡುತ್ತಿದ್ದನು. ದೇವಿಯೂ ಆಕಾಶದಲ್ಲಿರುವವಳಾಗಿ ನೋಡುತ್ತಿದ್ದಳು. ಆಗ ಆ ರಾಕ್ಷಸರಿಬ್ಬರೂ ಬಳಲದೆ ಯುದ್ಧಮಾಡುತ್ತಾ ಬಂದರು. ವಿಷ್ಣುವಾದರೋ ಬಳಲಿಕೆಯನ್ನು ಪಡೆದನು.

**ಪಂಚವರ್ಷಸಹಸ್ರಾಣಿ ಯದಾ ಜಾತಾನಿ ಯುಧ್ಯತಾ ।**
**ಹರಿಣಾ ಚಿಂತಿತಂ ತತ್ರ ಕಾರಣಂ ಮರಣೇ ತಯೋಃ ॥೧೯॥**

ಹೀಗೆ ಐದುಸಾವಿರ ವರ್ಷಗಳು ಕಳೆಯಲು ವಿಷ್ಣುವು ಯುದ್ಧಮಾಡುವವನಾಗಿಯೇ ಆ ರಾಕ್ಷಸರ ಸಾವಿಗೆ ಯಾವುದು ಕಾರಣವಾಗಬಹುದೆಂದು ಯೋಚಿಸಿದನು.

**ಪಂಚವರ್ಷಸಹಸ್ರಾಣಿ ಮಯಾ ಯುದ್ಧಂ ಕೃತಂ ಕಿಲ ।**
**ನ ಶ್ರಾಂತೌ ದಾನವೌ ಘೋರೌ ಶ್ರಾಂತೋಽಹಂ ಚೈತದದ್ಭುತಂ ॥೨೦॥**

ವಿಷ್ಣುವು ಹೀಗೆ ಆಲೋಚಿಸಿದನು. ಐದುಸಾವಿರ ವರ್ಷಗಳವರೆಗೆ ನಾನು ಯುದ್ಧವನ್ನು ಮಾಡಿದೆನಲ್ಲವೇ? ಭಯಂಕರರಾದ ಈ ರಾಕ್ಷಸರು ಬಳಲಿದವರಾಗಿಲ್ಲ. ನಾನು ಮಾತ್ರ ಬಳಲಿದ್ದೇನೆ. ಇದು ಆಶ್ಚರ್ಯಕರವಾಗಿದೆ.

**ಕ್ವ ಗತಂ ಮೇ ಬಲಂ ಶೌರ್ಯಂ ಕಸ್ಮಾಚ್ಚೇಮಾವನಾಮಯೌ ।**
**ಕಿಮತ್ರ ಕಾರಣಂ ಚಿಂತ್ಯಂ ವಿಚಾರ್ಯ ಮನಸಾ ತ್ವಿಹ ॥೨೧॥**

ನನ್ನ ಬಲವೆಲ್ಲವೂ ಎಲ್ಲಿ ಹೋಯಿತು? ಇವರಿಬ್ಬರೂ ತೊಂದರೆ ಇಲ್ಲದವರಾಗಿರಲು ಕಾರಣವೇನು? ಮನಸ್ಸಿನಿಂದ ಆಲೋಚಿಸಿ ಇದರ ಕಾರಣವೇನೆಂಬುದನ್ನು ತಿಳಿಯಬೇಕು.

**ಇತಿ ಚಿಂತಾಪರಂ ದೃಷ್ಟ್ವಾ ಹರಿಂ ಹರ್ಷಪರಾವುಭೌ ।**
**ಊಚತುಸ್ತೌ ಮದೋನ್ಮತ್ತೌ ಮೇಘಗಂಭೀರನಿಸ್ವನೌ ॥೨೨॥**

ಈ ರೀತಿಯಲ್ಲಿ ಆಲೋಚಿಸುತ್ತಿರುವ ವಿಷ್ಣುವನ್ನು ನೋಡಿ ಸಂತೋಷಪಟ್ಟು ಆ ಮಧುಕೈಟಭರಿಬ್ಬರೂ ಮೇಘಗರ್ಜನೆಯಂತೆ ಗಂಭೀರವಾದ ಮಾತಿನ ಧ್ವನಿಯುಳ್ಳವರಾಗಿ ಭುಜಬಲದ ಕೊಬ್ಬಿನಿಂದ ವಿವೇಕವಿಲ್ಲದವರಾಗಿ ಹೀಗೆ ಹೇಳಿದರು.

**ತವ ನೋ ಚೇದ್ಬಲಂ ವಿಷ್ಣೋ ಯದಿ ಶ್ರಾಂತೋಽಸಿ ಯುದ್ಧತಃ ।**
**ಬ್ರೂಹಿ ದಾಸೋಽಸ್ಮಿ ವಾಂ ನೂನಂ ಕೃತ್ವಾ ಶಿರಸಿ ಚಾಂಜಲಿಂ ॥೨೩॥**

ಓ ವಿಷ್ಣುವೇ, ನೀನು ಯುದ್ಧದಿಂದ ಬಳಲಿರುವುದಾದರೆ ಮತ್ತು ಇನ್ನು ಮುಂದೆ ಯುದ್ಧಮಾಡಲು ತಕ್ಕಷ್ಟು ಶಕ್ತಿಯಿಲ್ಲದಿದ್ದರೆ, ನಿನ್ನ ತಲೆಯ ಮೇಲೆ ಕೈಮುಗಿದುಕೊಂಡು ನಿಂತು ನಾನು ನಿಮ್ಮ ಅಡಿಯಾಳಾಗಿದ್ದೇನೆಂದು ಒಪ್ಪಿಹೇಳು.

**ನ ಚೇದ್ಯುದ್ಧಂ ಕುರುಷ್ವಾದ್ಯ ಸಮರ್ಥೋಽಸಿ ಮಹಾಮತೇ ।**
**ಹತ್ವಾ ತ್ವಾಂ ನಿಹನಿಷ್ಯಾವಃ ಪುರುಷಂ ಚ ಚತುರ್ಮುಖಂ ॥೨೪॥**

ಹೆಚ್ಚಾದ ತಿಳಿವಳಿಕೆಯುಳ್ಳ ವಿಷ್ಣುವೇ, ಹಾಗಿಲ್ಲದೆ ಯುದ್ಧಮಾಡುವ ಶಕ್ತಿಯುಳ್ಳವನಾಗಿದ್ದರೆ ಈಗಲೂ ಯುದ್ಧವನ್ನು ಮಾಡು. ನಿನ್ನನ್ನು ಮೊದಲು ಕೊಂದು ಆಮೇಲೆ ಆಕಾರದಲ್ಲಿ ಗಂಡಸಿನಂತಿರುವ ನಾಲ್ಕು ಮುಖಗಳುಳ್ಳ ಈ ಬ್ರಹ್ಮನನ್ನು ಕೊಲ್ಲುವೆವು.

॥ ಸೂತ ಉವಾಚ ॥

ಶ್ರುತ್ವಾ ತದ್ಭಾಷಿತಂ ವಿಷ್ಣುಃ ತಯೋಸ್ತಸ್ಮಿನ್ ಮಹೋದಧೌ ।
ಉವಾಚ ವಚನಂ ಶ್ಲಕ್ಷ್ಣಂ ಸಾಮಪೂರ್ವಂ ಮಹಾಮನಾಃ ॥೨೫॥

ಸೂತಮುನಿಯು ಹೀಗೆ ಹೇಳಿದನು---ಆ ಮಹಾಸಾಗರದಲ್ಲಿ ದೊಡ್ಡಮನಸ್ಸುಳ್ಳ ಆ ವಿಷ್ಣುವು ಆ ಮಧುಕೈಟಭರೆಂಬ ರಾಕ್ಷಸರ ಆ ಮಾತನ್ನು ಕೇಳಿ ಒಳ್ಳೆಯ ಮಾತಿನಿಂದ ನಯವಾಗಿರುವಂತೆ ಈ ರೀತಿಯಲ್ಲಿ ಹೇಳಿದನು.

॥ ಹರಿರುವಾಚ ॥

ಶ್ರಾಂತೇ ಭೀತೇ ತ್ಯಕ್ತಶಸ್ತ್ರೇ ಪತಿತೇ ಬಾಲಕೇ ತಥಾ ।
ಪ್ರಹರಂತಿ ನ ವೀರಾಸ್ತೇ ಧರ್ಮ ಏಷ ಸನಾತನಃ ॥೨೬॥

ಓ ಮಧುಕೈಟಭರೆಂಬ ರಾಕ್ಷಸೋತ್ತಮರೇ, ಬಳಲಿರುವ, ಹೆದರಿರುವ, ಆಯುಧಗಳನ್ನು ಕೆಳಗಿಟ್ಟಿರುವ, ಏಟಿನಿಂದ ಬಿದ್ದಿರುವ, ಹುಡುಗನಾಗಿ (ವಯಸ್ಸು ಶಕ್ತಿಗಳಲ್ಲಿ ಚಿಕ್ಕವನಾಗಿ) ರುವ ಎದುರಾಳಿಯನ್ನು ವೀರರಾದವರು ಹೊಡೆಯುವುದಿಲ್ಲವು. ಈ ಧರ್ಮಮಾರ್ಗವು ನಿತ್ಯವಾದುದು. ಯಾವಾಗಲೂ ಆಚರಣೆಯಲ್ಲಿರಬೇಕಾದುದು.

ಪಂಚವರ್ಷಸಹಸ್ರಾಣಿ ಕೃತಂ ಯುದ್ಧಂ ಮಯಾ ತ್ವಿಹ ।
ಏಕೋಽಹಂ ಭ್ರಾತರೌ ವಾಂ ಚ ಬಲಿನೌ ಸದೃಶೌ ತಥಾ ॥೨೭॥

ಓ ವೀರರೇ, ನಾನು ಈಗ ಐದು ಸಾವಿರ ವರ್ಷಗಳ ಪರ್ಯಂತವಾಗಿ ಯುದ್ಧಮಾಡಿದನು. ಆದರೆ ನಾನೊಬ್ಬನೇ ಆಗಿ ಇದ್ದೇನೆ. ನೀವಿಬ್ಬರಿದ್ದೀರಿ. ಇಬ್ಬರೂ ಸಹೋದರರು ಮತ್ತು ಸಮಾನವಾದ ಬಲಪರಾಕ್ರಮಗಳುಳ್ಳವರೂ ಆಗಿರುವಿರಿ.

ಕೃತಂ ವಿಶ್ರಮಣಂ ಮಧ್ಯೇ ಯುವಾಭ್ಯಾಂ ಚ ಪುನಃಪುನಃ ।
ತಥಾ ವಿಶ್ರಮಣಂ ಕೃತ್ವಾ ಯುಧ್ಯೇಽಹಂ ನಾತ್ರ ಸಂಶಯಃ ॥೨೮॥

ನೀವು ಒಬ್ಬರಾಗುತ್ತಲೂ ಮತ್ತೊಬ್ಬರಂತೆ ಸರದಿಯ ಮೇಲೆ ಯುದ್ಧಮಾಡುತ್ತಿರುವಿರಿ. ನಿಮಗೆ ಬಾರಿಬಾರಿಗೂ ಮಧ್ಯದಲ್ಲಿ ವಿಶ್ರಾಂತಿಯು ದೊರೆಯುತ್ತಿದೆ. ಆದುದರಿಂದ ನಾನೂ ಮಧ್ಯದಲ್ಲಿ ವಿಶ್ರಾಂತಿಯನ್ನು ಪಡೆಯುತ್ತಾ ಇರಲು ಅವಕಾಶ ದೊರೆತರೆ ನಿಮ್ಮೊಡನೆ ಯುದ್ಧಮಾಡಬಲ್ಲೆನು. ಇದರಲ್ಲಿ ಸಂದೇಹವಿಲ್ಲವು.

**ತಿಷ್ಠತಾಂ ಹಿ ಯುವಾಂ ತಾವದ್ಬಲವಂತೌ ಮದೋತ್ಕಟೌ ।**
**ವಿಶ್ರಮ್ಯಾಹಂ ಕರಿಷ್ಯಾಮಿ ಯುದ್ಧಂ ವಾ ನ್ಯಾಯಮಾರ್ಗತಃ ॥೨೯॥**

ನೀವಾದರೋ ಶಕ್ತಿಯುಳ್ಳವರಾಗಿಯೂ, ಬಳಲಿಕೆ ಇಲ್ಲದೆ ಹೆಚ್ಚಾದ ಮದವುಳ್ಳವರಾಗಿಯೂ ಇರುವಿರಿ. ಆದುದರಿಂದ ನಾನೂ ಮಧ್ಯೆ ಸ್ವಲ್ಪ ವಿಶ್ರಾಂತಿಯನ್ನು ಪಡೆದು ದಣುವಾರಿಸಿಕೊಂಡು ನಿಮ್ಮೊಡನೆ ನ್ಯಾಯವಾದ ರೀತಿಯಿಂದ ಯುದ್ಧವನ್ನು ಮಾಡುವೆನು.

॥ ಸೂತ ಉವಾಚ ॥

**ಇತಿ ಶ್ರುತ್ವಾ ವಚಸ್ತಸ್ಯ ವಿಶ್ರಬ್ಧೌ ದಾನವೋತ್ತಮೌ ।**
**ಸಂಸ್ಥಿತೌ ದೂರತಸ್ತತ್ರ ಸಂಗ್ರಾಮೇ ಕೃತನಿಶ್ಚಯೌ ॥೩೦॥**

ಸೂತಮುನಿಯು ಹೇಳಿದನು--ಆ ವಿಷ್ಣುವಿನ ಈ ಮಾತನ್ನು ಕೇಳಿ ರಾಕ್ಷಸರಲ್ಲಿ ಶ್ರೇಷ್ಠರಾದ ಆ ಮಧುಕೈಟಭರು ನಂಬಿದವರಾಗಿ ಆ ಯುದ್ಧಾಂಗಣದಲ್ಲಿ ದೂರವಾಗಿ ನಿಶ್ಚಯಮಾಡಿಕೊಂಡವರಾಗಿ ಇದ್ದರು. (ಯುದ್ಧವೂ ಧಾರ್ಮಿಕವಾಗಿತ್ತೇ ಹೊರತು ಅಧರ್ಮದ, ಅನ್ಯಾಯವಾದ ರೀತಿಯನ್ನು ಅನುಸರಿಸುತ್ತಿರಲಿಲ್ಲವೆಂಬ ಅಂಶವನ್ನು ಗಮನಿಸಬೇಕು. Everything is fair in war and love ಎಂಬ ನೀತಿಯು ಮಾನ್ಯವಾಗಿರಲಿಲ್ಲವು. ಭಾರತಾರ್ಯರ ಧಾರ್ಮಿಕವಾದ ಸಂಸ್ಕೃತಿಯ ಸುಫಲವಿದು.)

**ಅತಿದೂರೇ ಚ ತೌ ದೃಷ್ಟ್ವಾ ವಾಸುದೇವಶ್ಚತುರ್ಭುಜಃ ।**
**ದಧ್ಯೌ ಚ ಮನಸಾ ತತ್ರ ಕಾರಣಂ ಮರಣೇ ತಯೋಃ ॥೩೧॥**

ನಾಲ್ಕು ತೋಳುಗಳುಳ್ಳ ವಸುದೇವನ ಮಗನಾದ ವಿಷ್ಣುವು ಆ ರಾಕ್ಷಸರಿಬ್ಬರೂ ದೂರದಲ್ಲಿ ಸುಮ್ಮನಿದ್ದುದನ್ನು ನೋಡಿ ವಿಶ್ರಾಂತಿಯನ್ನು ಪಡೆದು ಅವರನ್ನು ಸಂಹರಿಸುವುದಕ್ಕೆ ಅನುಕೂಲವಾದ ಕಾರಣವು ಯಾವುದೆಂದು ಮನಸ್ಸಿನಿಂದ ಆಲೋಚಿಸಿದನು.

**ಚಿಂತಯಾಜ್ಞಾನಮುತ್ಪನ್ನಂ ದೇವೀದತ್ತವರಾವುಭೌ ।**
**ಕಾಮಂ ವಾಂಛಿತಮರಣೌ ನ ಮಮ್ಲತುರತಸ್ತ್ವಿಮೌ ॥೩೨॥**

ಆಗ ವಿಷ್ಣುವು ಧ್ಯಾನದೃಷ್ಟಿಯಿಂದ ನಿಜಸ್ಥಿತಿಯನ್ನು ಹೀಗೆ ತಿಳಿದನು. ಇವರಿಬ್ಬರು ರಾಕ್ಷಸರೂ ದೇವಿಯಿಂದ ವರವನ್ನು ಪಡೆದಿದ್ದಾರೆ. ಇವರು ತಾವಾಗಿ ಇಷ್ಟಪಟ್ಟಾಗ ಮಾತ್ರ ಸಾವನ್ನು ಪಡೆಯುತ್ತಾರೆ. ಆದುದರಿಂದ ಇವರು ಬಳಲದೆ ಇದ್ದಾರೆ. ಹೀಗೆಂಬ ತಿಳಿವಳಿಕೆಯು ವಿಷ್ಣುವಿಗೆ ಹೊಳೆಯಿತು.

**ವೃಥಾ ಮಯಾ ಕೃತಂ ಯುದ್ಧಂ ಶ್ರಮೋಽಯಂ ಮೇ ವೃಥಾಗತಃ ।**
**ಕರೋಮಿ ಚ ಕಥಂ ಯುದ್ಧಮೇವಂ ಜ್ಞಾತ್ವಾ ವಿನಿಶ್ಚಯಂ ॥೩೩॥**

ಆದುದರಿಂದ ನಾನು ಇದುವರೆಗೂ ಯುದ್ಧಮಾಡಿದುದು ವ್ಯರ್ಥವಾಯಿತು. ಈ ನನ್ನ ಶ್ರಮವು ನಿಷ್ಫಲವಾಗಿ ಹೋಯಿತು. ವಸ್ತುಸ್ಥಿತಿಯು ಹೀಗಿರುವುದೆಂಬ ನಿಶ್ಚಯವನ್ನು ತಿಳಿದು ನಾನು ಹೇಗೆ ಯುದ್ಧವನ್ನು ಮಾಡಲಿ ?

**ಅಕೃತೇ ಚ ತಥಾ ಯುದ್ಧೇ ಕಥಮೇತೌ ಗಮಿಷ್ಯತಃ ।**
**ವಿನಾಶಂ ದುಃಖದೌ ನಿತ್ಯಂ ದಾನವೌ ವರದರ್ಪಿತೌ ॥೩೪॥**

ನಾನು ಇವರೊಡನೆ ಯುದ್ಧವನ್ನು ಮಾಡದಿದ್ದರೆ ದೇವಿಯಿಂದ ಪಡೆದ ವರದಿಂದ ಗರ್ವಪಡುತ್ತಿರುವ, ಲೋಕಕ್ಕೆಲ್ಲ ಯಾವಾಗಲೂ ಪೀಡೆಯನ್ನುಂಟುಮಾಡುತ್ತಿರುವ ಈ ರಾಕ್ಷಸರು ಹೇಗೆ ತಾನೇ ನಾಶವನ್ನು ಹೊಂದುವರು ?

**ಭಗವತ್ಯಾ ವರೋ ದತ್ತಸ್ತಯಾ ಸೋಽಪಿ ಚ ದುರ್ಘಟಃ ।**
**ಮರಣಂ ಚೇಚ್ಛಯಾ ಕಾಮಂ ದುಃಖಿತೋಽಪಿ ನ ವಾಂಛತಿ. ॥೩೫॥**

ಷಡ್ಗುಣೈಶ್ವರ್ಯದಿಂದ ಸಂಪನ್ನಳಾದ ದೇವಿಯು ಇವರಿಗೆ ಸ್ವೇಚ್ಛಾಮರಣದ ವರವನ್ನು ಅನುಗ್ರಹಿಸಿದ್ದಾಳೆ. ಇವರು ತಾವಾಗಿಯೇ ಮರಣವನ್ನು ಕೋರುವಂತಹ ಸನ್ನಿವೇಶವನ್ನು ಉಂಟುಮಾಡುವುದು ಅಸಾಧ್ಯವಾಗಿದೆ. ಏಕೆಂದರೆ ಲೋಕದಲ್ಲಿ ಸಂಕಟಗಳಿಗೆ ಗುರಿಯಾಗಿರುವವರೂ ತಾವಾಗಿಯೇ ಸಾವನ್ನು ಕೋರುವುದಿಲ್ಲವು. ಇವರಾದರೋ ಉತ್ಸಾಹ, ಸಂತೋಷ, ಅಹಂಕಾರಗಳಿಂದ ಕೂಡಿದ್ದಾರೆ. ಆದುದರಿಂದ ಇವರು ತಾವಾಗಿಯೇ ಸಾವನ್ನು ಬಯಸುವಂತಾಗುವುದು ಅಸಂಭವವು ಎಂದು ತಾತ್ಪರ್ಯವು.

**ರೋಗಗ್ರಸ್ತೋಽಪಿ ದೀನೋಽಪಿ ನ ಮುಮೂರ್ಷತಿ ಕಶ್ಚನ ।**
**ಕಥಂ ಚೇಮೌ ಮದೋನ್ಮತ್ತೌ ಮರ್ತುಕಾಮೌ ಭವಿಷ್ಯತಃ ॥೩೬॥**

ರೋಗಗಳಿಂದ ನರಳುತ್ತಿದ್ದರೂ, ಸಂಕಟದಲ್ಲಿದ್ದರೂ, ಯಾರೂ ಸಾಯಬೇಕೆನ್ನುವುದಿಲ್ಲವು. ಈ ರಾಕ್ಷಸರಾದರೋ ಮಿತಿಮೀರಿದ ಮದವುಳ್ಳವರಾಗಿದ್ದಾರೆ. ಆದುದರಿಂದ ಇಂಥವರು ಸಾವನ್ನು ಹೇಗೆತಾನೇ ಬಯಸುವರು ?

ನನ್ವದ್ಯ ಶರಣಂ ಯಾಮಿ ವಿದ್ಯಾಂ ಶಕ್ತಿಂ ಸುಕಾಮದಾಂ ।
ವಿನಾ ತಯಾ ನ ಸಿಧ್ಯಂತಿ ಕಾಮಾಃ ಸಮ್ಯಕ್ಪ್ರಸನ್ನಯಾ ॥೩೭॥

ಈಗ ನಾನು ಜ್ಞಾನಸ್ವರೂಪಿಣಿಯಾದ ಆದಿಶಕ್ತಿಯನ್ನು ಮರೆಹೋಗುತ್ತೇನೆ. ಆ ಮಾಯಾಶಕ್ತಿಯು ಪ್ರಸನ್ನಳಾಗದೆ ಇದ್ದರೆ ಜನರ ಕೋರಿಕೆಗಳು ಚೆನ್ನಾಗಿ ನೆರವೇರುವುದಿಲ್ಲವು.

ಏವಂ ಸಂಚಿಂತ್ಯಮಾನಸ್ತು ಗಗನೇ ಸಂಸ್ಥಿತಾಂ ಶಿವಾಂ ।
ಅಪಶ್ಯದ್ಭಗವಾನ್ವಿಷ್ಣುರ್ಯೋಗನಿದ್ರಾಂ ಮನೋಹರಾಂ ॥೩೮॥

ಪುಣ್ಯಶಾಲಿಯಾದ ಆ ವಿಷ್ಣುವು ಹೀಗೆ ಆಲೋಚಿಸಿ ಧ್ಯಾನಿಸುತ್ತಿರಲು, ಯೋಗನಿದ್ರಾಶಕ್ತಿಸ್ವರೂಪಳಾದ, ಮನಸ್ಸನ್ನು ಮೋಹಗೊಳಿಸಬಲ್ಲ, ಮಂಗಳಕರಳಾದ ದೇವಿಯನ್ನು ಆಕಾಶದಲ್ಲಿ ದಯಮಾಡಿರುವುದನ್ನು ಕಂಡನು.

ಕೃತಾಂಜಲಿರಮೇಯಾತ್ಮಾ ತಾಂ ಚ ತುಷ್ಟಾವ ಯೋಗವಿತ್ ।
ವಿನಾಶಾರ್ಥಂ ತಯೋಸ್ತತ್ರ ವರದಾಂ ಭುವನೇಶ್ವರೀಂ ॥೩೯॥

ಧ್ಯಾನಕ್ರಮವನ್ನು ಬಲ್ಲ, ಸಾಮಾನ್ಯ ಜನರಿಂದ ತಿಳಿಯಲು ಅಸಾಧ್ಯನಾದ ಆ ವಿಷ್ಣುವು ಭಕ್ತರ ಕೋರಿಕೆಗಳನ್ನು ಸಲ್ಲಿಸುವ, ಪ್ರಪಂಚಕ್ಕೆಲ್ಲ ಸ್ವಾಮಿನಿಯಾದ, ಭುವನೇಶ್ವರೀ ಎಂದು ಪ್ರಸಿದ್ಧಳಾಗಿರುವ ಆ ದೇವಿಯನ್ನು ಅಲ್ಲಿ ಆ ರಾಕ್ಷಸರ ಸಂಹಾರಕ್ಕೋಸ್ಕರ ಸ್ತೋತ್ರಮಾಡಿ ಸಂತೋಷಪಡಿಸಿದನು. ಸತ್ತ್ವರಜಸ್ತಮಸ್ ಎಂಬ ಮೂರು ಗುಣಗಳ ಸಾಮ್ಯಾವಸ್ಥೆಗೆ ಮಹಾಮಾಯೆ, ಪರ್ರಾಪ್ರಕೃತಿ, ಎಂದೂ ಹೆಸರು. ಅದು ಪರಬ್ರಹ್ಮವಸ್ತುವಿಗೆ ಉಪಾಧಿರೂಪವಾದ ಆದಿಶಕ್ತಿಯು. ಈ ಶಕ್ತಿಯೇ ಸಂಹಾರಕಾರ್ಯವನ್ನು ನೆರವೇರಿಸುವಾಗ ತಮೋಗುಣವು ಪ್ರಧಾನವಾಗಿ ಮುಂದಾಗಿರುತ್ತದೆ. ಆದುದರಿಂದ ಈ ಮಹಾಕಾಳಿಯೇ ಭುವನೇಶ್ವರೀ ಎಂದು ಹೇಳಿದೆ.

॥ ವಿಷ್ಣುರುವಾಚ ॥

**ನಮೋ ದೇವಿ ಮಹಾಮಾಯೇ ಸೃಷ್ಟಿಸಂಹಾರಕಾರಿಣಿ ।**
**ಅನಾದಿನಿಧನೇ ಚಂಡಿ ಭುಕ್ತಿಮುಕ್ತಿಪ್ರದೇ ಶಿವೇ ॥೪೦॥**

ವಿಷ್ಣುವು ಈ ರೀತಿ ಸ್ತೋತ್ರಮಾಡಿದನು—ಎಲ್ಲರಲ್ಲೂ ವ್ಯಾಪಿಸಿರುವ ಮೂಲಾವಿದ್ಯಾರೂಪಳಾದ, ಈ ಪ್ರಪಂಚವೆಲ್ಲವನ್ನೂ ಸೃಷ್ಟಿಸುವುದು, ಅದರ ಕಾರ್ಯವಾದಮೇಲೆ ಅದನ್ನು ಉಪಸಂಹರಿಸುವುದು ಮುಂತಾದ ಕಾರ್ಯಗಳನ್ನು ನೆರವೇರಿಸುವ, ಮೊದಲುತುದಿಗಳಿಲ್ಲದ ನಿತ್ಯಳಾದ, ಮಾಡಿದ ಸಂಕಲ್ಪವನ್ನು ಬಿಡದೆ ಸಾಧಿಸುವ, ಇಹಪರ ಸೌಖ್ಯಗಳನ್ನೂ, ಮೋಕ್ಷವನ್ನೂ ಅನುಗ್ರಹಿಸಬಲ್ಲ, ಮಂಗಳಕರಳಾದ, ಓ ದೇವಿಯೇ ನಿನಗೆ ನಮಸ್ಕಾರವು.

**ನ ತೇ ರೂಪಂ ವಿಜಾನಾಮಿ ಸಗುಣಂ ನಿರ್ಗುಣಂ ತಥಾ ।**
**ಚರಿತ್ರಾಣಿ ಕುತೋ ದೇವಿ ಸಂಖ್ಯಾತೀತಾನಿ ಯಾನಿ ತೇ ॥೪೧॥**

ಓ ತಾಯಿಯೇ, ನಿನ್ನ ಗುಣಗಳಿಂದ ಕೂಡಿರುವ ವ್ಯಾವಹಾರಿಕ ರೂಪವನ್ನೂ, ಹಾಗೆಯೇ ಗುಣಸಂಪರ್ಕವಿಲ್ಲದ ಪಾರಮಾರ್ಥಿಕವಾದ ರೂಪವನ್ನೂ, ನಾನು ಚೆನ್ನಾಗಿ ತಿಳಿಯಲಾರೆನು. ಹೀಗಿರುವಾಗ ಎಣಿಕೆಗೆ ನಿಲುಕದಷ್ಟು ಹೆಚ್ಚಾಗಿರುವ ನಿನ್ನ ಚರಿತ್ರೆಗಳನ್ನು ನಾನು ಹೇಗೆ ತಾನೇ ಸಮಗ್ರವಾಗಿ ತಿಳಿದೇನು ?

**ಅನುಭೂತೋ ಮಯಾ ತೇಽದ್ಯ ಪ್ರಭಾವಶ್ಚಾತಿದುರ್ಘಟಃ ।**
**ಯದಹಂ ನಿದ್ರಯಾ ಲೀನಃ ಸಂಜಾತೋಽಸ್ಮಿ ವಿಚೇತನಃ ॥೪೨॥**

ಬೇರೆ ಯಾರಲ್ಲಿಯೂ ಕಾಣಬರದೇ ಇರುವ ನಿನ್ನ ಮಹಿಮೆಯನ್ನು ಈಗ ನಾನು ಮನಗಂಡೆನು. ಏಕೆಂದರೆ, ಆ ಮಹಿಮೆಯ ಪ್ರಭಾವದಿಂದ ನಾನೂ ನಿದ್ದೆ ಕವಿದು ಚಟುವಟಿಕೆ ಇಲ್ಲದವನಾಗಿದ್ದೆನು.

**ಬ್ರಹ್ಮಣಾ ಚಾತಿಯತ್ನೇನ ಬೋಧಿತೋಽಪಿ ಪುನಃಪುನಃ ।**
**ನ ಪ್ರಬುದ್ಧಃ ಸರ್ವಥಾಽಹಂ ಸಂಕೋಚಿತಷಡಿಂದ್ರಿಯಃ ॥೪೩॥**

ಬ್ರಹ್ಮನು ತುಂಬಾ ಪ್ರಯತ್ನದಿಂದ ಬಾರಿಬಾರಿಗೂ ನನ್ನನ್ನು ಎಚ್ಚರಗೊಳಿಸಿದರೂ ನನ್ನ ಐದು ಜ್ಞಾನೇಂದ್ರಿಯಗಳೂ ಮನಸ್ಸೂ ಅಡಗಿರಲು ಸ್ವಲ್ಪವೂ ಎಚ್ಚರಚಟುವಟಿಕೆಗಳನ್ನು ಪಡೆಯಲಾರದೆಹೋದೆನು.

**ಅಚೇತನತ್ವಂ ಸಂಪ್ರಾಪ್ತಃ ಪ್ರಭಾವಾತ್ತವ ಚಾಂಬಿಕೇ ।**
**ತ್ವಯಾ ಮುಕ್ತಃ ಪ್ರಬುದ್ಧೋಽಹಂ ಯುದ್ಧಂ ಚ ಬಹುಧಾ ಕೃತಂ ॥೪೪॥**

ಓ ತಾಯಿಯೇ, ನಿನ್ನ ಮಹಿಮೆಯಿಂದಲೇ ನಾನೂ ಚೈತನ್ಯವಿಲ್ಲದ ಜಡನಾಗಿದ್ದೆನು. ಆ ಮೇಲೆ ಬಹುಕಾಲದವರೆಗೂ ನಾನಾ ಬಗೆಯಾಗಿ ಯುದ್ಧವನ್ನೂ ಮಾಡಿದೆನು. ಕವಿದಿದ್ದ ಅಜ್ಞಾನವು ನಿನ್ನ ಅನುಗ್ರಹದಿಂದ ಬಿಟ್ಟುಹೋಗಲು ಈಗ ಎಚ್ಚರಗೊಂಡಿದ್ದೇನೆ.

**ಶ್ರಾಂತೋಽಹಂ ನ ಚ ತೌ ಶ್ರಾಂತೌ ತ್ವಯಾ ದತ್ತವರೌ ವರೌ ।**
**ಬ್ರಹ್ಮಾಣಂ ಹಂತುಮಾಯಾತೌ ದಾನವೌ ಮದಗರ್ವಿತೌ ॥೪೫॥**

ನಾನು ಯುದ್ಧಮಾಡಿದ ಆಯಾಸದಿಂದ ಬಳಲಿದ್ದೇನೆ. ಈ ಗಟ್ಟಿಗರಾದ ರಾಕ್ಷಸರು ಮಾತ್ರ ನೀನು ಅನುಗ್ರಹಿಸಿರುವ ವರದ ಮಹಿಮೆಯಿಂದ ಬಳಲದೆ ಇದ್ದಾರೆ. ಮತ್ತು ಈ ರಾಕ್ಷಸರು ಬಲದಿಂದ ಅಹಂಕಾರಪಡುತ್ತಾ ಬ್ರಹ್ಮನನ್ನು ಕೊಲ್ಲಲು ಬಂದಿರುತ್ತಾರೆ.

**ಆಹೂತೌ ಚ ಮಯಾ ಕಾಮಂ ದ್ವಂದ್ವಯುದ್ಧಾಯ ಮಾನದೇ ।**
**ಕೃತಂ ಯುದ್ಧಂ ಮಹಾಘೋರಂ ಮಯಾ ತಾಭ್ಯಾಂ ಮಹಾರ್ಣವೇ ॥೪೬॥**

ನನ್ನ ಮಾನವನ್ನು ಕಾಪಾಡಿ ಗೌರವವನ್ನುಂಟುಮಾಡಬಲ್ಲ ದೇವಿಯೇ, ನಾನು ಅವರನ್ನು ಬಾಹುಯುದ್ಧ (ಜಟ್ಟಿಯ ಕಾಳಗ) ಕ್ಕೆ ಒಪ್ಪಿ ಕರೆದೆನು. ಮತ್ತು ಅವರೊಡನೆ ನಾನು ಮಲ್ಲಯುದ್ಧವನ್ನು ಆ ದೊಡ್ಡಸಾಗರದಲ್ಲಿ ತುಂಬ ಭಯಂಕರವಾಗಿರುವಂತೆ ಮಾಡಿದೆನು. ಆದರೂ ನಾನೇ ಬಳಲಿದೆನೇ ಹೊರತು ಇವರು ಸಾಯಲಿಲ್ಲವು, ಬಳಲಲೂ ಇಲ್ಲವು. ಆದುದರಿಂದ ಓ ತಾಯಿಯೇ,

**ಮರಣೇ ವರದಾನಂ ತೇ ತತೋ ಜ್ಞಾತಂ ಮಹಾದ್ಭುತಂ ।**
**ಜ್ಞಾತ್ವಾಹಂ ಶರಣಂ ಪ್ರಾಪ್ತಸ್ತ್ವಾಮದ್ಯ ಶರಣಪ್ರದಾಂ ॥೪೭॥**

ಈ ರಾಕ್ಷಸರಿಗೆ ಅವರ ಸಾವಿನ ವಿಷಯದಲ್ಲಿ ನೀನು ಸ್ವೇಚ್ಛಾಮರಣದ ವರವನ್ನು ಅನುಗ್ರಹಿಸಿರುವೆ ಎಂಬ ಆಶ್ಚರ್ಯಕರವಾದ ಅಂಶವನ್ನು ಆಮೇಲೆ ಊಹಿಸಿ ತಿಳಿದೆನು. ಇದನ್ನು ತಿಳಿದು ಈಗ ನಾನು ಮರೆಹೊಕ್ಕವರಿಗೆ ರಕ್ಷಣೆಯನ್ನು ನೀಡುವ ನಿನ್ನನ್ನು ರಕ್ಷಣೆಗಾಗಿ ಪಡೆದಿದ್ದೇನೆ.

**ಸಾಹಾಯ್ಯಂ ಕುರು ಮೇ ಮಾತಃ ಖಿನ್ನೋಽಹಂ ಯುದ್ಧಕರ್ಮಣಾ ।**
**ದೃಪ್ತೌ ತೌ ವರದಾನೇನ ತವ ದೇವಾರ್ತಿನಾಶನೇ ॥೪೮॥**

ಓ ತಾಯಿಯೇ, ದಯವಿಟ್ಟು ನನಗೆ ಸಹಾಯವನ್ನು ಮಾಡು. ಯುದ್ಧ ಕಾರ್ಯವನ್ನು ಇದುವರೆಗೂ ನಡೆಯಿಸಿ ಬಳಲಿ ವಿಷಾದಪಟ್ಟಿರುತ್ತೇನೆ. ದೇವತೆಗಳ ಸಂಕಟಗಳನ್ನು ಪರಿಹರಿಸುವ ಓ ದೇವಿಯೇ, ನೀನು ವರವನ್ನು ದಯಪಾಲಿಸಿರುವುದ ರಿಂದ ಆ ರಾಕ್ಷಸರು ಅಹಂಕಾರದಿಂದ ಮೆರೆಯುತ್ತಿದಾರೆ.

**ಹಂತುಂ ಮಾಮುದ್ಯತೌ ಪಾಪೌ ಕಿಂ ಕರೋಮಿ ಕ್ವ ಯಾಮಿ ಚ ।**
**ಇತ್ಯುಕ್ತ್ವಾ ಸಾ ತದಾ ದೇವೀ ಸ್ಮಿತಪೂರ್ವಮುವಾಚ ಹ ॥೪೯॥**

ಈ ಪಾಪಿಗಳು ನನ್ನನ್ನೂ ಕೊಲ್ಲಲು ಪ್ರಯತ್ನಮಾಡಿದ್ದಾರೆ. ನಾನು ಏನನ್ನು ಮಾಡಲಿ ? ಎಲ್ಲಿಗೆ ಹೋಗಲಿ ? ಹೀಗೆಂದು ವಿಷ್ಣುವು ಹೇಳುತ್ತಿರಲು ಆಗ ದೇವಿಯು ಮಂದಹಾಸದಿಂದ ಈ ಮಾತನ್ನು ಹೇಳಿದಳು.

**ಪ್ರಣಮಂತಂ ಜಗನ್ನಾಥಂ ವಾಸುದೇವಂ ಸನಾತನಂ ।**
**ದೇವದೇವ ಹರೇ ವಿಷ್ಣೋ ಕುರು ಯುದ್ಧಂ ಪುನಃ ಸ್ವಯಂ ॥೫೦॥**

ಹೀಗೆ ವಿಜ್ಞಾಪಿಸಿ ನಮಸ್ಕರಿಸುತ್ತಿರುವ, ಈ ಜಗತ್ತಿಗೆ ಒಡೆಯನಾದ, ನಿತ್ಯ ನಾದ, ವಸುದೇವನ ಮಗನಾದ ವಿಷ್ಣುವನ್ನು ಕುರಿತು ದೇವಿಯು, ದೇವತೆಗಳಿಗೆ ಅಧಿಪತಿಯಾದ, ಭಕ್ತರ ಪಾಪಗಳನ್ನು ಪರಿಹರಿಸಿ ಕಾಪಾಡುವ, ಎಲ್ಲೆಡೆಗಳಲ್ಲೂ ವ್ಯಾಪಿಸಿರುವ ವಿಷ್ಣುವೇ, ನೀನಾಗಿಯೇ ಯುದ್ಧವನ್ನು ಈಗ ಪುನಃ ಮಾಡು.

**ವಂಚಯಿತ್ವಾ ತ್ವಿಮೌ ಶೂರೌ ಹಂತವ್ಯೌ ಚ ವಿಮೋಹಿತೌ ।**
**ಮೋಹಯಿಷ್ಯಾಮ್ಯಹಂ ನೂನಂ ದಾನವೌ ವಕ್ರಯಾ ದೃಶಾ ॥೫೧॥**

ಓ ವಿಷ್ಣುವೇ, ಈ ರಾಕ್ಷಸರನ್ನು ಮೋಸಮಾಡಿ ಮೋಹಗೊಳಿಸಿ ಸಂಹರಿಸ ಬೇಕು. ಆದುದರಿಂದ ನಾನು ಇವರನ್ನು ನನ್ನ ಕೊಂಕಾದ ಕುಡಿನೋಟದಿಂದ ಖಂಡಿತವಾಗಿ ಮಂಕುಗೊಳಿಸುತ್ತೇನೆ.

**ಜಹಿ ನಾರಾಯಣಾಶು ತ್ವಂ ಮಮ ಮಾಯಾವಿಮೋಹಿತೌ ।**

ಓ, ನಾರಾಯಣನೇ, ನನ್ನ ಮಹಾಮಾಯೆಯಿಂದ, ಎಲ್ಲರಲ್ಲೂ ವ್ಯಾಪಿಸಿರುವ ಮೂಲಭೂತವಾದ ಅಜ್ಞಾನದ ಮಹಿಮೆಯಿಂದ, ಮೋಹಗೊಂಡಿರುವ ಈ ರಾಕ್ಷಸರನ್ನು ಜಾಗ್ರತೆಯಾಗಿ ನೀನು ಸಂಹರಿಸು.

|| ಸೂತ ಉವಾಚ ||

**ತಚ್ಛ್ರುತ್ವಾ ವಚನಂ ವಿಷ್ಣುಸ್ತಸ್ಯಾಃ ಪ್ರೀತಿರಸಾನ್ವಿತಂ ||೫೨||**
**ಸಂಗ್ರಾಮಸ್ಥಲಮಾಸಾದ್ಯ ತಸ್ಥೌ ತತ್ರ ಮಹಾರ್ಣವೇ ।**

ಸೂತನು ಹೇಳಿದನು—ದೇವಿಯು ವಿಶ್ವಾಸಪೂರ್ವಕವಾಗಿ ಹೇಳಿದ ಆ ಮಾತನ್ನು ವಿಷ್ಣುವು ಕೇಳಿ ಆ ಮಹಾಸಾಗರದಲ್ಲಿನ ಯುದ್ಧಾಂಗಣಕ್ಕೆ ಬಂದು ನಿಂತನು.

**ತದಾಯಾತೌ ಚ ತೌ ಧೀರೌ ಯುದ್ಧಕಾಮೌ ಮಹಾಬಲೌ ||೫೩||**

ಆಗ ತುಂಬ ಶಕ್ತಿಯುಳ್ಳವರಾದ ಗಟ್ಟಿಗರಾದ ಆ ರಾಕ್ಷಸರು ಯುದ್ಧವನ್ನು ಬಯಸುವವರಾಗಿ ಅಲ್ಲಿಗೆ ಬಂದರು.

**ವೀಕ್ಷ್ಯ ವಿಷ್ಣುಂ ಸ್ಥಿತಂ ತತ್ರ ಹರ್ಷಯುಕ್ತೌ ಬಭೂವತುಃ ।**
**ತಿಷ್ಠ ತಿಷ್ಠ ಮಹಾಕಾಮ ಕುರು ಯುದ್ಧಂ ಚತುರ್ಭುಜ ||೫೪||**

ಅವರು ಅಲ್ಲಿಗೆ ಬಂದಿದ್ದ ವಿಷ್ಣುವನ್ನು ನೋಡಿ ಸಂತೋಷಗೊಂಡರು, ಮತ್ತು ಹೀಗೆ ಹೇಳಿದರು—ನಾಲ್ಕು ತೋಳುಗಳುಳ್ಳ, ಹಿರಿಯಾಸೆಯಿಂದ ಕೂಡಿದ ವಿಷ್ಣುವೇ, ನಿಲ್ಲು ನಿಲ್ಲು ಯುದ್ಧವನ್ನು ಮಾಡು.

**ದೈವಾಧೀನೌ ವಿದಿತ್ವಾದ್ಯ ನೂನಂ ಜಯಪರಾಜಯೌ ।**
**ಸಬಲೋಽಜಯಮಾಪ್ನೋತಿ ದೈವಾಜ್ಜಯತಿ ದುರ್ಬಲಃ ||೫೫||**

ನಿಜವಾಗಿಯೂ ಗೆಲವುಸೋಲುಗಳು, ಅದೃಷ್ಟವನ್ನನುಸರಿಸಿ ಅಥವಾ ಜನ್ಮಾಂತರದಲ್ಲಿ ಮಾಡಿದ ಕರ್ಮಕ್ಕೆ ಅನುಸಾರವಾಗಿ, ಆಗುತ್ತವೆಂಬುದನ್ನು ಗಮನಿಸು. ಶಕ್ತಿಯುಳ್ಳವನೂ ದುರದೃಷ್ಟದಿಂದ ಸೋಲನ್ನು ಪಡೆಯುವುದುಂಟು. ಹಾಗೆಯೇ ಶಕ್ತಿ ಇಲ್ಲದವನೂ ಪುಣ್ಯಶಾಲಿಯಾಗಿದ್ದರೆ ಜಯಿಸುವುದುಂಟು.

ಸರ್ವಥೈವ ನ ಕರ್ತವ್ಯೌ ಹರ್ಷಶೋಕೌ ಮಹಾತ್ಮನಾ ।
ಪುರಾ ವೈ ಬಹವೋ ದೈತ್ಯಾ ಜಿತಾ ದಾನವವೈರಿಣಾ ॥೫೬॥

ಅಧುನಾ ಚಾನಯೋಃ ಸಾರ್ಧಂ ಯುಧ್ಯಮಾನಃ ಪರಾಜಿತಃ ॥

ಗಟ್ಟಿಯಾದ ಮನಸ್ಸುಳ್ಳ ಧೀರನು ಗೆಲುವಿನಿಂದ ಸಂತೋಷವನ್ನೂ ಸೋಲಿನಿಂದ ದುಃಖವನ್ನೂ ಪಡೆಯಬಾರದು. ಪೂರ್ವಕಾಲದಲ್ಲಿ ರಾಕ್ಷಸರಿಗೆ ಶತ್ರುವಾದ ಇಂದ್ರ ಮುಂತಾದ ದೇವತೆಗಳಿಂದ ಬಹುಜನ ರಾಕ್ಷಸರು ಜಯಿಸಲ್ಪಟ್ಟಿದ್ದಾರೆ. ಈಗಲಾದರೋ ಈ ನಮ್ಮೊಡನೆ ಯುದ್ಧಮಾಡುತ್ತಿರುವ ವಿಷ್ಣುವು ಸೋಲಿಸಲ್ಪಟ್ಟಿರುತ್ತಾನೆ.

|| ಸೂತ ಉವಾಚ ||

ಇತ್ಯುಕ್ತ್ವಾ ತೌ ಮಹಾಬಾಹೂ ಯುದ್ಧಾಯ ಸಮುಪಸ್ಥಿತೌ ॥೫೭॥

ವೀಕ್ಷ್ಯ ವಿಷ್ಣುರ್ಜಘಾನಾಶು ಮುಷ್ಟಿನಾದ್ಭುತಕರ್ಮಣಾ ।
ತಾವಪ್ಯತಿಬಲೋನ್ಮತ್ತೌ ಜಘ್ನತುರ್ಮುಷ್ಟಿನಾ ಹರಿಮ್ ॥೫೮॥

ಸೂತನು ಹೇಳಿದನು—ಹೆಚ್ಚಾದ ತೋಳಿನ ಬಲವುಳ್ಳ ಆ ರಾಕ್ಷಸರು ಹೀಗೆಂದು ಹೇಳಿ ಕಾಳಗಕ್ಕೆ ಬಂದರು. ಅವರನ್ನು ನೋಡಿ ವಿಷ್ಣುವು ಆಶ್ಚರ್ಯಕರವಾದ ಪರಿಣಾಮವನ್ನುಂಟುಮಾಡುವ ತನ್ನ ಮುಷ್ಟಿಯಿಂದ ಗುದ್ದಿದನು. ಹೆಚ್ಚಾದ ಶಕ್ತಿಯಿಂದ ತುಂಬ ಮದಿಸಿದ್ದ ಆ ರಾಕ್ಷಸರೂ ತಮ್ಮ ಮುಷ್ಟಿಗಳಿಂದ ವಿಷ್ಣುವನ್ನು ಹೊಡೆದರು.

ಏವಂ ಪರಸ್ಪರಂ ಜಾತಂ ಯುದ್ಧಂ ಪರಮದಾರುಣಂ ।
ಯುಧ್ಯಮಾನೌ ಮಹಾವೀರ್ಯೌ ದೃಷ್ಟ್ವಾ ನಾರಾಯಣಸ್ತದಾ ॥೫೯॥

ಅಪಶ್ಯತ್ಸ ಮುಖಂ ದೇವ್ಯಾಃ ಕೃತ್ವಾ ದೀನಾಂ ದೃಶಂ ಹರಿಃ ।

ಈ ರೀತಿಯಲ್ಲಿ ಅವರಿಗೆ ಅನ್ಯೋನ್ಯವಾಗಿ ಭಯಂಕರವಾದ ಯುದ್ಧವು ಆರಂಭವಾಯಿತು. ಆಗ ನಾರಾಯಣನು ಕಾಳಗವಾಡುತ್ತಿರುವ ತುಂಬ ಗಟ್ಟಿಗರಾದ ಆ ರಾಕ್ಷಸರನ್ನು ನೋಡಿ ಕನಿಕರವನ್ನುಂಟುಮಾಡುವ ನೋಟದಿಂದ ದೇವಿಯ ಮುಖವನ್ನು ಮರುಕವುಂಟಾಗುವಂತೆ ನೋಡಿದನು.

|| ಸೂತ ಉವಾಚ ||

ತಂ ವೀಕ್ಷ್ಯ ತಾದೃಶಂ ವಿಷ್ಣುಂ ಕರುಣಾರಸಸಂಯುತಂ ॥೬೦॥

**ಜಹಾಸಾತೀವ ತಾಮ್ರಾಕ್ಷೀ ವೀಕ್ಷಮಾಣಾ ತದಾಸುರೌ ।**
**ತೌ ಜಘಾನ ಕಟಾಕ್ಷೈಶ್ಚ ಕಾಮಬಾಣೈರಿವಾಪರೈಃ ॥೬೧॥**

ಕನಿಕರಭಾವವನ್ನು ಎಬ್ಬಿಸುವ ಅಂತಹ ಸ್ಥಿತಿಯಲ್ಲಿದ್ದ ಆ ವಿಷ್ಣುವನ್ನು ದೇವಿಯು ನೋಡಿದಳು ಮತ್ತು ಹೆಚ್ಚಾಗಿ ಕೆಂಪಾದ ಕಣ್ಣುಳ್ಳವಳಾಗಿ ಆ ರಾಕ್ಷಸರನ್ನು ನೋಡುತ್ತ ನಕ್ಕಳು. ಅಲ್ಲದೆ, ಮನ್ಮಥನ ಬೇರೆ ಬಾಣಗಳೋ ಎನ್ನುವಂತಿದ್ದ ತನ್ನ ಕಡೆಗಣ್ಣಿನ ಕುಡಿನೋಟಗಳಿಂದ ಆ ರಾಕ್ಷಸರನ್ನು ಹೊಡೆಯುವಂತೆ ನೋಡಿದಳು.

**ಮಂದಸ್ಮಿತಯುತೈಃ ಕಾಮಪ್ರೇಮಭಾವಯುತೈರನು ।**
**ದೃಷ್ಟ್ವಾ ಮುಮುಹತುಃ ಪಾಪೌ ದೇವ್ಯಾ ವಕ್ರವಿಲೋಕನಂ ॥೬೨॥**

ಮುಗುಳುನಗೆಯಿಂದ ಕೂಡಿದ್ದ ಕಾಮ, ಅನುರಾಗ ಈ ಭಾವಗಳನ್ನು ಸೂಚಿಸುವಂತಿದ್ದ, ಆ ದೇವಿಯ ಕೊಂಕಾದ ನೋಟವನ್ನು ಆ ರಾಕ್ಷಸರು ಗಮನಿಸಿ, ಫಲವನ್ನು ಕೊಡಲು ಆರಂಭಿಸಿದ್ದ ಜನ್ಮಾಂತರದ ಪಾಪವುಳ್ಳವರಾಗಿದ್ದುದರಿಂದ, ಮೋಹಗೊಂಡರು.

**ವಿಶೇಷಮಿತಿ ಮನ್ವಾನೌ ಕಾಮಬಾಣಾತಿಪೀಡಿತೌ ।**
**ವೀಕ್ಷ್ಯಮಾಣೌ ಸ್ಥಿತೌ ತತ್ರ ತಾಂ ದೇವೀಂ ವಿಶದಪ್ರಭಾಂ ॥೬೩॥**

ತಿಳಿಯಾದ ಮೈಬೆಳಕುಳ್ಳ ಆ ದೇವಿಯನ್ನು ಆ ರಾಕ್ಷಸರು ನೋಡಿ ಇದೇನೋ ಒಂದು ಅಸಾಧಾರಣವಾದ ವ್ಯಕ್ತಿಯು ಎಂದು ತಿಳಿಯುವವರಾಗಿ ಮನ್ಮಥನ ಬಾಣಗಳ ಏಟಿನಿಂದ ನೊಂದವರಾಗಿ ಅವಳನ್ನು ಕಾಮಿಸಿ ನೋಡುತ್ತಾ ಅಲ್ಲಿಯೇ ನಿಂತರು.

**ಹರಿಣಾಪಿ ಚ ತದ್ದೃಷ್ಟಂ ದೇವ್ಯಾಸ್ತತ್ರ ಚಿಕೀರ್ಷಿತಂ ।**
**ಮೋಹಿತೌ ತೌ ಪರಿಜ್ಞಾಯ ಭಗವಾನ್ ಕಾರ್ಯವಿತ್ತಮಃ ॥೬೪॥**

ದೇವಿಯು ಮಾಡಬಯಸಿದ್ದ ಆ ವ್ಯಾಪಾರವನ್ನು ವಿಷ್ಣುವು ಮನಗಂಡನು. ಕಾರ್ಯಗಳನ್ನು ಹೇಗೆ ನೆರವೇರಿಸಬೇಕೆಂಬುದನ್ನು ತಿಳಿಯಬಲ್ಲವರಲ್ಲಿ ಉತ್ತಮನಾದ ಮಹಾಮಹಿಮಶಾಲಿಯಾದ ವಿಷ್ಣುವು ಆ ರಾಕ್ಷಸರು ದೇವಿಯ ಮೋಹಪಾಶಕ್ಕೆ ಒಳಗಾದರೆಂಬುದನ್ನು ತಿಳಿದು,

**ಉವಾಚ ತೌ ಹಸನ್ ಶ್ಲಕ್ಷ್ಣಂ ಮೇಘಗಂಭೀರಯಾ ಗಿರಾ ।**
**ವರಂ ವರಯತಾಂ ವೀರೌ ಯುವಯೋರ್ಯೋಽಭಿವಾಂಛಿತಃ ॥೬೫॥**

ಮುಗುಳುನಗೆಯಿಂದ ಕೂಡಿದವನಾಗಿ ಮೋಡದ ಗುಡುಗಿನಂತೆ ಗಂಭೀರವಾದ ಧ್ವನಿಯಿಂದ ಅವರನ್ನು ಕುರಿತು ಹೀಗೆ ಹೇಳಿದನು. ಎಲೈ, ಪರಾಕ್ರಮಿಗಳಾದ ರಾಕ್ಷಸರೇ ನಿಮಗೆ ಇಷ್ಟವಾದ ಕೋರಿಕೆಯನ್ನು ಕೇಳಿರಿ.

**ದದಾಮಿ ಪರಮಪ್ರೀತೋ ಯುದ್ಧೇನ ಯುವಯೋಃ ಕಿಲ ।**
**ದಾನವಾ ಬಹವೋ ದೃಷ್ಟಾ ಯುಧ್ಯಮಾನಾ ಮಯಾ ಪುರಾ ॥೬೬॥**

**ಯುವಯೋಃ ಸದೃಶಃ ಕೋಽಪಿ ನ ದೃಷ್ಟೋ ನ ಚ ವೈ ಶ್ರುತಃ ।**

ನಿಮ್ಮ ಯುದ್ಧದ ರೀತಿನೀತಿಗಳಿಂದ ನಾನು ತುಂಬ ಸಂತೋಷಪಟ್ಟಿದ್ದೇನೆ. ಆದುದರಿಂದ ನಿಮ್ಮ ಕೋರಿಕೆಯನ್ನು ಸಲ್ಲಿಸುತ್ತೇನೆ. ಹಿಂದೆ ನಾನು ಅನೇಕರಾಕ್ಷಸರೊಡನೆ ಯುದ್ಧವನ್ನು ಮಾಡಿ ನೋಡಿದ್ದೇನೆ. ಆದರೆ ನಿಮ್ಮಂತಹ ಯುದ್ಧವೀರರನ್ನು ನೋಡಲಿಲ್ಲವು, ಕೇಳಿಯೂ ಇಲ್ಲವು.

**ತಸ್ಮಾತ್ತುಷ್ಟೋಽಸ್ಮಿ ಕಾಮಂ ವೈ ನಿಸ್ತುಲೇನ ಬಲೇನ ಚ ॥೬೭॥**
**ಭ್ರಾತ್ರೋಶ್ಚ ವಾಂಛಿತಂ ಕಾಮಂ ಪ್ರಯಚ್ಛಾಮಿ ಮಹಾಬಲೌ ।**

ಹೆಚ್ಚಾದ ಸಾಮರ್ಥ್ಯವುಳ್ಳ, ರಾಕ್ಷಸರೇ, ಸಹೋದರರಾದ ನಿಮ್ಮ ಸಾಟಿಇಲ್ಲದ ಶಕ್ತಿಶೌರ್ಯಗಳಿಂದ ತುಂಬ ಸಂತೋಷಪಟ್ಟಿದ್ದೇನೆ. ಆದುದರಿಂದ ನಿಮಗೆ ಇಷ್ಟವಾದ ವರವನ್ನು ಕೊಡಲು ಸಿದ್ಧನಾಗಿದ್ದೇನೆ.

॥ ಸೂತ ಉವಾಚ ॥

**ತಚ್ಛ್ರುತ್ವಾ ವಚನಂ ವಿಷ್ಣೋಃ ಸಾಭಿಮಾನೌ ಸ್ಮರಾತುರೌ ॥೬೮॥**

**ವೀಕ್ಷಮಾಣೌ ಮಹಾಮಾಯಾಂ ಜಗದಾನಂದಕಾರಿಣೀಂ ।**
**ತಮೂಚತುಶ್ಚ ಕಾಮಾರ್ತೌ ವಿಷ್ಣುಂ ಕಮಲಲೋಚನೌ ॥೬೯॥**

ವಿಷ್ಣುವಿನ ಆ ಮಾತನ್ನು ಕೇಳಿ ತಾವೇ ಹೆಚ್ಚೆಂಬ ದುರಭಿಮಾನವುಳ್ಳ, ಕಾಮಬಾಧೆಯಿಂದ ಪರವಶರಾಗಿದ್ದ, ಕಮಲದಂತೆ ವಿಸ್ತಾರವಾದ ಕಣ್ಣುಳ್ಳವರಾಗಿದ್ದ ಆ ರಾಕ್ಷಸರು, ಲೋಕಕ್ಕೆಲ್ಲ ಸಂತೋಷವನ್ನುಂಟುಮಾಡುವ ಮಹಾಮಾಯಾಸ್ವರೂಪಳಾದ ದೇವಿಯನ್ನು ನೋಡಿ ಕಾಮಪೀಡಿತರಾಗಿ ವಿಷ್ಣುವನ್ನು ಕುರಿತು ಹೀಗೆ ಹೇಳಿದರು.

**ಹರೇ ನ ಯಾಚಕಾವಾವಾಂ ತ್ವಂ ಕಿಂ ದಾತುಮಿಹೇಚ್ಛಸಿ ।**
**ದದಾವ ತುಭ್ಯಂ ದೇವೇಶ ದಾತಾರೌ ನೌ ನ ಯಾಚಕೌ ॥೭೦॥**

ಎಲೈ ವಿಷ್ಣುವೇ, ನಾವು ಭಿಕ್ಷೆಬೇಡುವವರಲ್ಲವು. ನೀನು ಏನನ್ನು ಕೊಡಬಯಸುತ್ತೀಯೆ? ದೇವತೆಗಳ ಒಡೆಯನಾದ ವಿಷ್ಣುವೇ, ನಾವೇ ನಿನಗೆ ವರವನ್ನು ಕೊಡುತ್ತೇವೆ. ನಾವು ನೀಡುವವರೇ ಹೊರತು ಬೇಡುವವರಲ್ಲವು.

**ಪ್ರಾರ್ಥಯ ತ್ವಂ ಹೃಷೀಕೇಶ ಮನೋಽಭಿಲಷಿತಂ ವರಂ ।**
**ತುಷ್ಟೌ ಸ್ವಸ್ತವ ಯುದ್ಧೇನ ವಾಸುದೇವಾದ್ಭುತೇನ ಚ ॥೭೧॥**

ಇಂದ್ರಿಯಗಳಿಗೂ ನಿಯಾಮಕನಾದ ವಾಸುದೇವನೇ, ಆಶ್ಚರ್ಯಕರವಾದ ನಿನ್ನ ಯುದ್ಧದ ಕ್ರಮದಿಂದ ನಾವೂ ಸಂತೋಷಪಟ್ಟಿದ್ದೇವೆ. ಆದುದರಿಂದ ನಿನ್ನ ಮನಸ್ಸಿಗೆ ಇಷ್ಟವಾದ ವರವನ್ನು ಕೇಳಿಕೋ.

**ತಯೋಸ್ತದ್ವಚನಂ ಶ್ರುತ್ವಾ ಪ್ರತ್ಯುವಾಚ ಜನಾರ್ದನಃ ।**
**ಭವೇತಾಮದ್ಯ ಮೇ ತುಷ್ಟೌ ಮಮ ವಧ್ಯಾವುಭಾವಪಿ ॥೭೨॥**

ಆ ರಾಕ್ಷಸರ ಆ ಮಾತನ್ನು ಕೇಳಿ ದುಷ್ಟರನ್ನು ಸಂಹರಿಸುವ ವಿಷ್ಣುವು ಈ ರೀತಿಯಲ್ಲಿ ಪ್ರತ್ಯುತ್ತರವನ್ನು ಹೇಳಿದನು. ನನ್ನ ವಿಷಯದಲ್ಲಿ ನೀವು ಸಂತೋಷಪಟ್ಟಿರುವಿರಾದರೆ ನೀವಿಬ್ಬರೂ ನನ್ನಿಂದ ಕೊಲ್ಲಲ್ಪಡಲು ಸಾಧ್ಯವಾಗುವಂತೆ ಆಗಿರಿ ಎಂದು ಕೇಳಿದನು.

॥ ಸೂತ ಉವಾಚ ॥

**ತಚ್ಛ್ರುತ್ವಾ ವಚನಂ ವಿಷ್ಣೋರ್ದಾನವೌ ಚಾತಿವಿಸ್ಮಿತೌ ।**
**ವಂಚಿತಾವಿತಿ ಮನ್ವಾನೌ ತಸ್ಥತುಃ ಶೋಕಸಂಯುತೌ ॥೭೩॥**

ಸೂತನು ಮುಂದೆ ಹೇಳಿದನು. ವಿಷ್ಣುವಿನ ಆ ಮಾತನ್ನು ಕೇಳಿ ಆ ಮಧುಕೈಟಭರೆಂಬ ರಾಕ್ಷಸರು ತುಂಬ ಆಶ್ಚರ್ಯಪಟ್ಟರು. ತಾವು ಮೋಸಗೊಳಿಸಲ್ಪಟ್ಟುದನ್ನು ತಿಳಿದು ಅವರು ದುಃಖಿತರಾಗಿದ್ದರು.

**ವಿಚಾರ್ಯ ಮನಸಾ ತೌ ತು ದಾನವೌ ವಿಷ್ಣುಮೂಚತುಃ ।**
**ಪ್ರೇಕ್ಷ್ಯ ಸರ್ವಂ ಜಲಮಯಂ ಭೂಮಿಂ ಸ್ಥಲವಿವರ್ಜಿತಾಂ ॥೭೪॥**

ಆ ದಾನವರು ಮನಸ್ಸಿನಲ್ಲಿ ಉಪಾಯವನ್ನು ಆಲೋಚನೆಮಾಡಿ ಆ ಪ್ರದೇಶವೆಲ್ಲವೂ ನೀರಿನಿಂದ ತುಂಬಿರುವುದನ್ನೂ ನೆಲವು ಸ್ವಲ್ಪವೂ ಇಲ್ಲದಿರುವುದನ್ನೂ ಮನಗಂಡು ವಿಷ್ಣುವನ್ನು ಕುರಿತು ಈ ರೀತಿಯಲ್ಲಿ ಹೇಳಿದರು.

**ಹರೇ ಯೋಽಯಂ ವರೋ ದತ್ತಸ್ತ್ವಯಾ ಪೂರ್ವಂ ಜನಾರ್ದನ ।**
**ಸತ್ಯವಾಗಸಿ ದೇವೇಶ ದೇಹಿ ತಂ ವಾಂಛಿತಂ ವರಂ ॥೭೫॥**

ದುಷ್ಟರಿಗೆ ಶಿಕ್ಷಕನಾದ ವಿಷ್ಣುವೇ, ಮೊದಲು ನೀನು ನಮಗೆ ಒಂದು ವರವನ್ನು ಕೊಟ್ಟಿದ್ದೆಯಲ್ಲವೇ ? ದೇವತೆಗಳಿಗೆ ಸ್ವಾಮಿಯಾದ ಹರಿಯೇ, ನೀನು ಸತ್ಯವಾದ ಮಾತುಳ್ಳವನಾಗಿದ್ದೀಯೆ, ಆಡಿದ ಮಾತಿಗೆ ತಪ್ಪುವವನಲ್ಲವು. ನಮಗೆ ಇಷ್ಟವಾದ ಆ ವರವನ್ನು ನೀನೂ ಕೊಡು.

**ನಿರ್ಜಲೇ ವಿಪುಲೇ ದೇಶೇ ಹನಸ್ವ ಮಧುಸೂದನ ।**
**ವಧ್ಯಾವಾವಾಂ ತು ಭವತಃ ಸತ್ಯವಾಗ್ಭವ ಮಾಧವ ॥೭೬॥**

ನಮ್ಮ ವಾಗ್ದಾನದಂತೆ ನಾವಾದರೋ ನಿನ್ನಿಂದ ಮರಣವನ್ನು ಪಡೆಯುತ್ತೇವೆ. ಆದರೆ ನೀನು ಆಡಿದ ಮಾತಿನಂತೆ ನಡೆಯಬೇಕು. ಲಕ್ಷ್ಮೀಪತಿಯಾದ ವಿಷ್ಣುವೇ ನೀರಿಲ್ಲದೆ ಇರುವ ವಿಸ್ತಾರವಾದ ನೆಲದಲ್ಲಿ ನೀನು ನಮ್ಮನ್ನು ಕೊಲ್ಲಬೇಕು ಎಂದು ಕೇಳಿದರು.

**ಸ್ಮೃತ್ವಾ ಚಕ್ರಂ ತದಾ ವಿಷ್ಣುಸ್ತಾವುವಾಚ ಹಸನ್ ಹರಿಃ ।**
**ಹನ್ಮ್ಯದ್ಯ ವಾಂ ಮಹಾಭಾಗೌ ನಿರ್ಜಲೇ ವಿಪುಲೇ ಸ್ಥಲೇ ॥೭೭॥**

ಆಗ ವಿಷ್ಣುವು ತನ್ನ ಚಕ್ರಾಯುಧ (ಅಭಿಮಾನಿಯಾದ ಶಕ್ತಿ ದೇವತೆ)ವನ್ನು ಧ್ಯಾನಿಸಿ ಸ್ವಲ್ಪ ನಗುತ್ತಾ ಹೀಗೆ ಹೇಳಿದನು. ಗಟ್ಟಿಗರಾದ ರಾಕ್ಷಸರೇ, ನನ್ನ ಮಾತಿನಂತೆಯೇ ನಾನು ನಿಮ್ಮನ್ನು ನೀರಿಲ್ಲದ ವಿಸ್ತಾರವಾದ ನೆಲದ ಮೇಲೆಯೇ ಸಂಹರಿಸುತ್ತೇನೆ.

**ಇತ್ಯುಕ್ತ್ವಾ ದೇವದೇವೇಶ ಊರೂ ಕೃತ್ವಾಽತಿವಿಸ್ತರೌ ।**
**ದರ್ಶಯಾಮಾಸ ತೌ ತತ್ರ ನಿರ್ಜಲಂ ಚ ಜಲೋಪರಿ ॥೭೮॥**

ದೇವತೆಗಳಿಗೂ, ಅವರ ನಾಯಕರಾದ ಇಂದ್ರ ಮುಂತಾದವರಿಗೂ ಸ್ವಾಮಿಯಾದ ವಿಷ್ಣುವು ಹೀಗೆ ಹೇಳಿ ತನ್ನ ತೊಡೆಗಳನ್ನು ದೊಡ್ಡದಾಗಿ ವಿಸ್ತರಿಸಿ ನೀರಿನ ಮೇಲೆ ನೀರಿಲ್ಲದ ನೆಲವನ್ನು ಅವರಿಗೆ ತೋರಿಸಿದನು.

**ನಾಸ್ತ್ಯತ್ರ ದಾನವೌ ವಾರಿ ಶಿರಸೀ ಮುಂಚತಾಮಿಹ ।**
**ಸತ್ಯವಾಗಹಮದ್ಯೈವ ಭವಿಷ್ಯಾಮಿ ಚ ವಾಂ ತಥಾ ॥೭೯॥**

ಎಲೈ ರಾಕ್ಷಸರೇ, ಇಲ್ಲಿ ನೀರಿಲ್ಲವು. ಇಲ್ಲಿ ನೀವು ನಿಮ್ಮ ತಲೆಗಳನ್ನು ಒಪ್ಪಿಸಬಹುದು. ನಾನು ಆಡಿದ ಮಾತನ್ನು ತಪ್ಪದೆ ನಡೆಸುವೆನು. ನೀವೂ ಹಾಗೆಯೇ ನಿಮ್ಮ ಮಾತನ್ನು ಸತ್ಯವಾಗಿರುವಂತೆ ನಡೆಸಬೇಕು.

**ತದಾಕರ್ಣ್ಯ ವಚಸ್ತಥ್ಯಂ ವಿಚಿಂತ್ಯ ಮನಸಾ ಚ ತೌ ।**
**ವರ್ಧಯಾಮಾಸತುರ್ದೇಹಂ ಯೋಜನಾನಾಂ ಸಹಸ್ರಕಂ ॥೮೦॥**

ಹರಿಯ ಆ ಮಾತನ್ನು ಕೇಳಿ, ಅವನು ತನ್ನ ಮಾತನ್ನು ನಿಜವಾಗುವಂತೆ ನಡೆಸಿದುದನ್ನು ಮನಗಂಡು ಆ ರಾಕ್ಷಸರು ಮನಸ್ಸಿನಲ್ಲಿ ಉಪಾಯಾಂತರವನ್ನು ಆಲೋಚಿಸಿ ತಮ್ಮ ಶರೀರಗಳನ್ನು ಸಾವಿರಗಾವುದಗಳಷ್ಟು ದೊಡ್ಡದಾಗುವಂತೆ ಬೆಳಸಿ ವಿಸ್ತಾರವಾಗುವಂತೆ ಮಾಡಿದರು.

**ಭಗವಾನ್ ದ್ವಿಗುಣಂ ಚಕ್ರೇ ಜಘನಂ ವಿಸ್ಮಿತೌ ತದಾ ।**
**ಶೀರ್ಷೇ ಸಂದಧತಾಂ ತತ್ರ ಜಘನೇ ಪರಮಾದ್ಭುತೇ ॥೮೧॥**

ಮಹಾಮಹಿಮಶಾಲಿಯಾದ ವಿಷ್ಣುವು, ತನ್ನ ತೊಡೆಯನ್ನೂ ಅವರ ದೇಹಗಳ ಎರಡರಷ್ಟು ದೊಡ್ಡದಾಗಿರುವಂತೆ ಬೆಳಸಿದನು. ಅದನ್ನು ನೋಡಿ ಆ ರಾಕ್ಷಸರು ಆಶ್ಚರ್ಯಪಟ್ಟರು ಮತ್ತು ಆಗ ತಮ್ಮ ತಲೆಗಳನ್ನು ಆ ತುಂಬ ಆಶ್ಚರ್ಯಕರವಾದ ಪ್ರದೇಶದಲ್ಲಿ ಒಟ್ಟಿಗೆ ಇಟ್ಟರು.

**ರಥಾಂಗೇನ ತದಾ ಛಿನ್ನೇ ವಿಷ್ಣುನಾ ಪ್ರಭವಿಷ್ಣುನಾ ।**
**ಜಘನೋಪರಿ ವೇಗೇನ ಪ್ರಕೃಷ್ಟೇ ಶಿರಸೀ ತಯೋಃ ॥೮೨॥**

ಆಗ ಸಮರ್ಥನಾದ ವಿಷ್ಣುವು ಆ ರಾಕ್ಷಸರ ಉತ್ತಮವಾದ ತಲೆಗಳನ್ನು ತನ್ನ ತೊಡೆಯಮೇಲೆ ಚಕ್ರಾಯುಧದಿಂದ ಜಾಗ್ರತೆಯಾಗಿ ಕತ್ತರಿಸಿದನು. ಇದು ನಿರ್ಜಲ

ಭೂಮಿಯು ಹೇಗೆ ಎಂಬ ಅಂಶವನ್ನು ದೇವೀಮಾಹಾತ್ಮ್ಯ ಅ. ೧. ಶ್ಲೋಕ ೭೭ರಲ್ಲಿ ವಿವರಿಸಿದೆ.

**ಗತಪ್ರಾಣೌ ತದಾ ಜಾತೌ ದಾನವೌ ಮಧುಕೈಟಭೌ ।**
**ಸಾಗರಃ ಸಕಲೋ ವ್ಯಾಪ್ತಸ್ತದಾ ವೈ ಮೇದಸಾ ತಯೋಃ ॥೮೩॥**

ಆಗ ಆ ಮಧುಕೈಟಭರೆಂಬ ರಾಕ್ಷಸರು ಪ್ರಾಣಹೋಗಿ ಸತ್ತರು. ಅವರ ಮೇದಸ್ಸಿ (ಕೊಬ್ಬಿ) ನಿಂದ ಸಮುದ್ರವೆಲ್ಲವೂ ತುಂಬಿಹೋಯಿತು.

**ಮೇದಿನೀತಿ ತತೋ ಜಾತಂ ನಾಮ ಪೃಥ್ವ್ಯಾಃ ಸಮಂತತಃ ।**
**ಅಭಕ್ಷ್ಯಾ ಮೃತ್ತಿಕಾ ತೇನ ಕಾರಣೇನ ಮುನೀಶ್ವರಾಃ ॥೮೪॥**

ಓ ಶೌನಕ ಮುಂತಾದ ಋಷಿಶ್ರೇಷ್ಠರೇ, ಆ ಕಾರಣದಿಂದ ಈ ಭೂಮಿಗೆ ಎಲ್ಲೆಡೆಗಳಲ್ಲೂ ಮೇದಿನೀ ಎಂದರೆ ಮಧುಕೈಟಭರಾಕ್ಷಸರ ದೇಹದ ಮೇದೋಧಾತು ವಿನಿಂದ ತುಂಬಿರುವುದು ಎಂಬ ಹೆಸರು ಪ್ರಸಿದ್ಧವಾಯಿತು. ಆ ಕಾರಣದಿಂದಲೇ ಮಣ್ಣು ತಿನ್ನಬಾರದ ವಸ್ತುವಾಯಿತು.

**ಇತಿ ವಃ ಕಥಿತಂ ಸರ್ವಂ ಯತ್ಪೃಷ್ಟೋಽಸ್ಮಿ ಸುನಿಶ್ಚಿತಂ ।**
**ಮಹಾವಿದ್ಯಾಮಹಾಮಾಯಾ ಸೇವನೀಯಾ ಸದಾ ಬುಧೈಃ ॥೮೫॥**

ಓ ಋಷಿಗಳಿರಾ, ಈ ರೀತಿಯಲ್ಲಿ ನನ್ನನ್ನು ನೀವು ಕೇಳಿದ ಕಥೆಯೆಲ್ಲವನ್ನೂ ಸ್ಪಷ್ಟವಾಗಿ ಹೇಳಿದುದಾಯಿತು. ಆ ದೇವಿಯು ಚಿತ್ ಎಂದರೆ ಜ್ಞಾನಸ್ವರೂಪ ಳಾದುದರಿಂದ ಮಹಾವಿದ್ಯಾರೂಪಳಾಗಿದ್ದಾಳೆ. ಹಾಗೆಯೇ ದೊಡ್ಡದಾದ ಮತ್ತು ಸಣ್ಣದಾದ ವ್ಯವಹಾರಗಳಿಗೂ ಬೇಕಾದ ಶಕ್ತಿರೂಪಳೂ ಆದುದರಿಂದ, ಈ ಶಕ್ತಿಯು ಪರತತ್ತ್ವದ ಅಜ್ಞಾನದ ಪರಿಣಾಮರೂಪವಾದುದರಿಂದ, ಮಹಾಮಾಯಾಸ್ವರೂಪಳೂ ಆಗಿದ್ದಾಳೆ. ಇಂತಹ ದೇವಿಯನ್ನು ತಿಳಿವಳಿಕೆಯುಳ್ಳ ವಿವೇಕಿಗಳಾದ ಜನರೆಲ್ಲರೂ ಸೇವಿಸಬೇಕು. ಈ ವಿಷಯದಲ್ಲಿ ಹೆಚ್ಚಿನ ವಿವರಣೆಯು ದೇವೀಮಾಹಾತ್ಮ್ಯ ಅ. ೧. ಶ್ಲೋಕ ೪೪ರಲ್ಲಿ ದೊರೆಯುತ್ತದೆ.

**ಆರಾಧ್ಯಾ ಪರಮಾ ಶಕ್ತಿಃ ಸರ್ವೈರಪಿ ಸುರಾಸುರೈಃ ।**
**ನಾತಃ ಪರತರಂ ಕಿಂಚಿದಧಿಕಂ ಭುವನತ್ರಯೇ ॥೮೬॥**

ಎಲ್ಲ ಕಾರ್ಯಗಳನ್ನೂ ನೆರವೇರಿಸಬಲ್ಲ, ಎಲ್ಲಕ್ಕಿಂತಲೂ ಮಿಗಿಲಾದ ಆ ಪರಾ ಶಕ್ತಿರೂಪಳಾದ ದೇವಿಯನ್ನು ಎಲ್ಲರೂ ಪೂಜಿಸಬೇಕು. ಈ ದೇವಿಗಿಂತಲೂ ಮಿಗಿಲಾದ ವಸ್ತುವು ಈ ಮೂರುಲೋಕಗಳಲ್ಲಿಯೂ ಮತ್ತೊಂದಿಲ್ಲವು.

**ಸತ್ಯಂ ಸತ್ಯಂ ಪುನಃ ಸತ್ಯಂ ವೇದಶಾಸ್ತ್ರಾರ್ಥನಿರ್ಣಯಃ |**
**ಪೂಜನೀಯಾ ಪರಾಶಕ್ತಿರ್ನಿರ್ಗುಣಾ ಸಗುಣಾಥ ವಾ ||೮೭||**

ಎಲ್ಲ ವೇದಗಳ ಮತ್ತು ಶಾಸ್ತ್ರಗಳ ಮುಖ್ಯತಾತ್ಪರ್ಯದ ನಿಶ್ಚಯವು ಏನೆಂದರೆ, ಪಾರಮಾರ್ಥಿಕದೃಷ್ಟಿಯಿಂದ ನಿರ್ಗುಣಳಾಗಿರುವ, ಎಂದರೆ ಗುಣತ್ರಯದ ಪರಿಣಾಮಗಳನ್ನು ಮೀರಿ ಅವುಗಳ ಸಂಪರ್ಕವಿಲ್ಲದೆ ಇರುವ, ಸಗುಣಳಾಗಿರುವ, ಎಂದರೆ, ವ್ಯಾವಹಾರಿಕ ಅಥವಾ ಸಾಂಸಾರಿಕದೃಷ್ಟಿಯಿಂದ ಸತ್ತ್ವರಜಸ್ತಮಸ್ ಎಂಬ ಮೂರು ಗುಣಗಳ ಹೆಚ್ಚುಕಡಿಮೆಗಳಿಂದ ಉಂಟಾಗುವ ಪರಿಣಾಮರೂಪವಾದ ಉಪಾಧಿ, ಅಥವಾ ಸಾಧನದ ಧರ್ಮಗಳನ್ನೂ ಗುಣಗಳನ್ನೂ ಹೊರಹೊಮ್ಮಿಸುತ್ತಿರುವಂತೆ ತೋರುತ್ತಿರುವ ಪರಾಶಕ್ತಿರೂಪಳಾದ ದೇವಿಯನ್ನು ಎಲ್ಲರೂ ಇಹಪರಸುಖಗಳಿಗೂ ಕಡೆಗೆ ಮೋಕ್ಷರೂಪವಾದ ಶ್ರೇಯಸ್ಸನ್ನು ಪಡೆಯುವುದಕ್ಕೂ ಆರಾಧಿಸಬೇಕು. ಎಂಬುದು ಎಲ್ಲ ವೇದಶಾಸ್ತ್ರಗಳ ಮುಖ್ಯವಾದ ಪರಮತಾತ್ಪರ್ಯವು.

**|| ಇತಿ ಶ್ರೀದೇವೀಭಾಗವತೇ ಪ್ರಥಮಸ್ಕಂಧೇ ನವಮೋಽಧ್ಯಾಯಃ ||**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಒಂಭತ್ತನೆಯ ಅಧ್ಯಾಯವು ಮುಗಿದುದು.

|| ಶ್ರೀರಸ್ತು ||

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

## || ದಶಮೋಽಧ್ಯಾಯಃ ||

### ಹತ್ತನೆಯ ಅಧ್ಯಾಯವು

|| ಋಷಯ ಊಚುಃ ||

**ಸೂತ ಪೂರ್ವಂ ತ್ವಯಾ ಪ್ರೋಕ್ತಂ ವ್ಯಾಸೇನಾಮಿತತೇಜಸಾ ।**
**ಕೃತ್ವಾ ಪುರಾಣಮಖಿಲಂ ಶುಕಾಯಾಧ್ಯಾಪಿತಂ ಶುಭಂ ॥೧॥**

ಋಷಿಗಳು ಸೂತಮುನಿಯನ್ನು ಪ್ರಶ್ನೆಮಾಡಿದರು.—ಓ ಸೂತಮುನಿಯೇ, ಅಪಾರತೇಜಸ್ವಿಯಾದ ವ್ಯಾಸಮಹರ್ಷಿಯು ಎಲ್ಲ ಪುರಾಣಗಳನ್ನು ರಚಿಸಿ ತನ್ನ ಮಗನಾದ ಶುಕನಿಗೆ ಹೇಳಿಕೊಟ್ಟನು ಎಂದು ಹಿಂದೆ ನೀನು ಹೇಳಿರುವೆ.

**ವ್ಯಾಸೇನ ತು ತಪಸ್ತಪ್ತ್ವಾ ಕಥಮುತ್ಪಾದಿತಃ ಶುಕಃ ।**
**ವಿಸ್ತರಂ ಬ್ರೂಹಿ ಸಕಲಂ ಯಚ್ಛ್ರುತಂ ಕೃಷ್ಣತಸ್ತ್ವಯಾ ॥೨॥**

ಆ ವ್ಯಾಸಮಹರ್ಷಿಯು ತಪಸ್ಸನ್ನು ಮಾಡಿ ಮಗನಾದ ಶುಕನನ್ನು ಹೇಗೆ ಪಡೆದನು ? ಆ ಕಥೆಯನ್ನೆಲ್ಲಾ ನಮಗೆ ವಿಸ್ತಾರವಾಗಿ ವ್ಯಾಸನಿಂದ ನೀನು ಕೇಳಿ ತಿಳಿದಂತೆಯೇ ಹೇಳು.

|| ಸೂತ ಉವಾಚ ||

**ಪ್ರವಕ್ಷ್ಯಾಮಿ ಶುಕೋತ್ಪತ್ತಿಂ ವ್ಯಾಸಾತ್ಸತ್ಯವತೀಸುತಾತ್ ।**
**ಯಥೋತ್ಪನ್ನಃ ಶುಕಃ ಸಾಕ್ಷಾದ್ಯೋಗಿನಾಂ ಪ್ರವರೋ ಮುನಿಃ ॥೩॥**

ಸೂತನು ಋಷಿಗಳಿಗೆ ಹೇಳುವನು—ಎಲೈ ಋಷಿಗಳಿರಾ, ಸತ್ಯವತಿಯ ಮಗನಾದ ವ್ಯಾಸನಿಂದ ಯೋಗಿಗಳಲ್ಲಿ ಶ್ರೇಷ್ಠನಾದ ಶುಕಮುನಿಯು ಹೇಗೆ ಹುಟ್ಟಿ

ದನು ಎಂಬ ವಿಷಯವನ್ನು ವಿವರಿಸುವಂತೆ ಶುಕನು ಹುಟ್ಟಿದ ಕಥೆಯನ್ನು ಹೇಳುತ್ತೇನೆ, ಕೇಳಿರಿ.

ಮೇರುಶೃಂಗೇ ಮಹಾರಮ್ಯೇ ವ್ಯಾಸಃ ಸತ್ಯವತೀಸುತಃ ।
ತಪಶ್ಚಚಾರ ಸೋಽತ್ಯುಗ್ರಂ ಪುತ್ರಾರ್ಥಂ ಕೃತನಿಶ್ಚಯಃ ॥೪॥

ಸತ್ಯವತಿಯ ಮಗನಾದ ವ್ಯಾಸಮುನಿಯು ಬಹಳ ಮನೋಹರವಾದ ಮೇರು ಪರ್ವತದ ಶಿಖರದಲ್ಲಿ, ಮಗನನ್ನು ಪಡೆಯಬೇಕೆಂದು ಸಂಕಲ್ಪಮಾಡಿ ಬಹಳ ಕಠಿನವಾದ ತಪಸ್ಸನ್ನು ಮಾಡಿದನು.

ಜಪನ್ನೇಕಾಕ್ಷರಂ ಮಂತ್ರಂ ವಾಗ್ಬೀಜಂ ನಾರದಾಚ್ಛ್ರುತಂ ।
ಧ್ಯಾಯನ್ ಪರಾಂ ಮಹಾಮಾಯಾಂ ಪುತ್ರಕಾಮಸ್ತಪೋನಿಧಿಃ ॥೫॥

ಆ ಋಷಿಯು ನಾರದನು ಉಪದೇಶಮಾಡಿದ ವಾಗ್ಬೀಜವಾದ ಏಕಾಕ್ಷರವೆಂಬ ಒಂದೇ ಅಕ್ಷರವುಳ್ಳ ಮಂತ್ರವನ್ನು ಜಪಮಾಡುತ್ತಾ ಮಹಾಮಾಯಾಸ್ವರೂಪಿಣಿಯಾದ ದೇವಿಯನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ತನಗೆ ಮಗನು ಬೇಕೆಂಬ ಇಚ್ಛೆಯಿಂದ ತಪಸ್ಸನ್ನು ಮಾಡಿದನು.

ಅಗ್ನೇರ್ಭೂಮೇಸ್ತಥಾ ವಾಯೋರಂತರಿಕ್ಷಸ್ಯ ಚಾಪ್ಯಯಂ ।
ವೀರ್ಯೇಣ ಸಂಮಿತಃ ಪುತ್ರಃ ಮಮ ಭೂಯಾದಿತಿಸ್ಮ ಹ ॥೬॥

ಅತಿಷ್ಠತ್ಸ ಗತಾಹಾರಃ ಶತಸಂವತ್ಸರಂ ಪ್ರಭುಃ ।
ಆರಾಧಯನ್ ಮಹಾದೇವಂ ತಥೈವ ಚ ಸದಾಶಿವಂ ॥೭॥

ಅಗ್ನಿ ಪೃಥಿವೀ ವಾಯು ಆಕಾಶ ಇವುಗಳ, ಈ ಪ್ರಕೃತ್ಯಭಿಮಾನಿದೇವತೆಗಳ ಸಾಮರ್ಥ್ಯವುಳ್ಳ ಮಗನು ನನಗೆ ಹುಟ್ಟಲಿ ಎಂದು ಮನಸ್ಸಿನಲ್ಲಿ ಅವನು ಭಾವಿಸುತ್ತಲೂ ಈಶ್ವರನನ್ನು ಪೂಜಿಸುತ್ತಲೂ ನೂರುಸಂವತ್ಸರಗಳವರೆಗೂ ಆಹಾರವನ್ನು ಕೂಡ ತೆಗೆದುಕೊಳ್ಳದೆ ಉಪವಾಸವ್ರತವನ್ನು ಆಚರಿಸುತ್ತಿದ್ದನು.

ಶಕ್ತಿಃ ಸರ್ವತ್ರ ಪೂಜ್ಯೇತಿ ವಿಚಾರ್ಯ ಚ ಪುನಃ ಪುನಃ ।
ಅಶಕ್ತೋ ನಿಂದ್ಯತೇ ಲೋಕೇ ಶಕ್ತಸ್ತು ಪರಿಪೂಜ್ಯತೇ ॥೮॥

ಲೋಕದಲ್ಲಿ ಅಶಕ್ತನಾದವನು ಎಂದರೆ ಶಕ್ತಿಯಿಲ್ಲದವನು ತಿರಸ್ಕರಿಸಲ್ಪಡುತ್ತಾನೆ. ಶಕ್ತಿಯಿರುವವನು ಗೌರವಿಸಲ್ಪಡುತ್ತಾನೆ. ಆದುದರಿಂದ ಶಕ್ತಿಯೇ ಪೂಜ್ಯಳು ಎಂಬುದಾಗಿ ಮತ್ತೆ ಮತ್ತೆ ವಿಚಾರಮಾಡುತ್ತಿದ್ದನು.

**ಯತ್ರ ಪರ್ವತಶೃಂಗೇ ವೈ ಕರ್ಣಿಕಾರವನಾದ್ಭುತೇ ।**
**ಕ್ರೀಡಂತಿ ದೇವತಾಸ್ಸರ್ವೇ ಮುನಯಶ್ಚ ತಪೋಽಧಿಕಾಃ ॥೯॥**

**ಆದಿತ್ಯಾ ವಸವೋ ರುದ್ರಾ ಮರುತಶ್ಚಾಶ್ವಿನೌ ತಥಾ ।**
**ವಸಂತಿ ಮುನಯೋ ಯತ್ರ ಯೇ ಚಾನ್ಯೇ ಬ್ರಹ್ಮವಿತ್ತಮಾಃ ॥೧೦॥**

ವ್ಯಾಸಋಷಿಯು ತಪಸ್ಸುಮಾಡುತ್ತಿದ್ದ ಮೇರುಪರ್ವತದ ಶಿಖರವು ಕರ್ಣಿಕಾರ (ಕಂಚುವಾಳ) ವೃಕ್ಷಗಳ ವನದಿಂದ ಕೂಡಿದುದಾಗಿತ್ತು. ಅಲ್ಲಿ ಅನೇಕರಾದ ದೇವತೆಗಳೂ ತುಂಬ ತಪಸ್ವಿಗಳಾದ ಋಷಿಗಳೂ ವಿಹರಿಸುತ್ತಿದ್ದರು. ಅಲ್ಲಿ ಮಿತ್ರ, ಅರ್ಯಮ, ತ್ವಷ್ಟೃ, ಧಾತೃ, ವಿವಸ್ವಾನ್, ಅರುಣ, ಭಗ, ಅಂಶುಮಾನ್, ಇಂದ್ರ, ಪರ್ಜನ್ಯ, ವಿಷ್ಣು, ಪೂಷಾ, ಎಂದು ಹನ್ನೆರಡು ಜನ ಆದಿತ್ಯರೂ, ಅನಲ, ಅನಿಲ, ಪ್ರತ್ಯೂಷ, ಪ್ರಭಾಸ, ಸೋಮ, ಅಧ್ವರ, ಧ್ರುವ, ಎಂಬ ಎಂಟು ವಸುಗಳೂ, ಶಿವ, ಶಂಭು, ಪಿನಾಕಿ, ಗಿರೀಶ, ಹರ, ಸ್ಥಾಣು, ಭರ್ಗ, ಭೈರವ, ಸದಾಶಿವ, ಕಪಾಲೀ, ಈಶ್ವರ, ಎಂಬ ಏಕಾದಶರುದ್ರರೂ ಆವಹ, ನಿವಹ, ಸಂವಹ, ಅನುವಹ, ಪ್ರವಹ, ಉದ್ವಹ, ಪರಿವಹ, ಎಂಬ ಸಪ್ತಮರುತ್ತುಗಳೂ, ಅಶ್ವಿನೀದೇವತೆಗಳೂ, ಬ್ರಹ್ಮಜ್ಞಾನಿಗಳಾದ ಅನೇಕಜನ ಋಷಿಗಳೂ ವಾಸಮಾಡುತ್ತಿದ್ದರು.

**ತತ್ರ ಹೇಮಗಿರೇಶ್ಶೃಂಗೇ ಸಂಗೀತಧ್ವನಿನಾದಿತೇ ।**
**ತಪಶ್ಚಚಾರ ಧರ್ಮಾತ್ಮಾ ವ್ಯಾಸಃ ಸತ್ಯವತೀಸುತಃ ॥೧೧॥**

ಸಂಗೀತಧ್ವನಿಯಿಂದ ಮಧುರವಾಗಿ ಮೊಳಗುತ್ತಿರುವ ಆ ಮೇರುಪರ್ವತದ ಶಿಖರದಲ್ಲಿ ಸತ್ಯವತೀಪುತ್ರನಾದ ವ್ಯಾಸನು ತಪಸ್ಸನ್ನು ಮಾಡುತ್ತಿದ್ದನು.

**ತತೋಽಸ್ಯ ತೇಜಸಾ ವ್ಯಾಪ್ತಂ ವಿಶ್ವಂ ಸರ್ವಂ ಚರಾಚರಂ ।**
**ಅಗ್ನಿವರ್ಣಾ ಜಟಾ ಜಾತಾಃ ಪಾರಾಶರ್ಯಸ್ಯ ಧೀಮತಃ ॥೧೨॥**

ಆ ವ್ಯಾಸಋಷಿಯ ತಪಸ್ಸಿನಿಂದುಂಟಾದ ತೇಜಸ್ಸು ಎಲ್ಲಾ ಸ್ಥಾವರಜಂಗಮ ವಸ್ತುಗಳನ್ನು ವ್ಯಾಪಿಸಿತು. ಪರಾಶರಪುತ್ರನಾದ ವ್ಯಾಸನ ಜಡೆಗಳೆಲ್ಲವೂ ಅಗ್ನಿವರ್ಣದಂತೆ ಕೆಂಪುವರ್ಣದವುಗಳಾದವು.

ತತೋಽಸ್ಯ ತೇಜ ಆಲಕ್ಷ್ಯ ಭಯಮಾಪ ಶಚೀಪತಿಃ ।
ತುರಾಸಾಹಂ ತದಾ ದೃಷ್ಟ್ವಾ ಭಯತ್ರಸ್ತಂ ಶ್ರಮಾತುರಂ ॥೧೩॥

ಉವಾಚ ಭಗವಾನ್ರುದ್ರೋ ಮಘವಂತಂ ತಥಾ ಸ್ಥಿತಂ ।

ಅನಂತರದಲ್ಲಿ ಅವನ ತೇಜಸ್ಸನ್ನು ನೋಡಿ ಇಂದ್ರನು ಬಹಳ ಭಯಪಟ್ಟನು. ಆಗ ಭಯದಿಂದ ಬಹಳ ಶ್ರಮಪಡುತ್ತಿರುವ ಇಂದ್ರನನ್ನು ನೋಡಿ ಹಾಗೆಯೇ ಭಯಪಟ್ಟಿದ್ದ ಇಂದ್ರನನ್ನು ಕುರಿತು ರುದ್ರನು ಈರೀತಿಯಾಗಿ ಹೇಳಿದನು.

॥ ಶಂಕರ ಉವಾಚ ॥

ಕಥಮಿಂದ್ರಾದ್ಯ ಭೀತೋಽಸಿ ಕಿಂ ದುಃಖಂ ತೇ ಸುರೇಶ್ವರ ॥೧೪॥

ಅಮರ್ಷೋ ನೈವ ಕರ್ತವ್ಯಸ್ತಾಪಸೇಷು ಕದಾಚನ ।
ತಪಶ್ಚರಂತಿ ಮುನಯೋ ಜ್ಞಾತ್ವಾ ಮಾಂ ಶಕ್ತಿಸಂಯುತಂ ॥೧೫॥

ಓ ಇಂದ್ರನೇ, ಈಗ ಏಕೆ ಭಯಪಟ್ಟಿದ್ದೀಯೆ? ಹೀಗೆ ಭಯಪಡಲು ಏನು ದುಃಖವು ಒದಗಿರುವುದು ? ಯಾವಾಗಲೂ ತಪಸ್ವಿಗಳ ವಿಷಯದಲ್ಲಿ ಕೋಪವನ್ನು ಮಾಡಬಾರದು. ಆ ಋಷಿಗಳು ನಾನು ಶಕ್ತಿಯಿಂದ ಸಹಿತನಾದವನೆಂದು ತಿಳಿದು ತಪಸ್ಸನ್ನು ಮಾಡುತ್ತಿರುತ್ತಾರೆ.

ನ ತ್ವೇತೇಽಹಿತಮಿಚ್ಛಂತಿ ತಾಪಸಾಃ ಸರ್ವಥೈವ ಹಿ ।
ಇತ್ಯುಕ್ತವಚನಶ್ಶಕ್ರಸ್ತಮುವಾಚ ವೃಷಧ್ವಜಂ ॥೧೬॥

ಈರೀತಿಯಾಗಿರುವ ತಪಸ್ವಿಗಳು ಯಾವಾಗಲೂ ಯಾರಿಗೂ ಅಹಿತವನ್ನು ಬಯಸುವುದಿಲ್ಲ ಎಂಬುದಾಗಿ ಹೇಳಿದ, ಗೂಳಿಯೇ ಧ್ವಜದ ಗುರುತಾಗಿ ಉಳ್ಳ ಶಂಕರನನ್ನು ಕುರಿತು ಇಂದ್ರನು ಹೀಗೆ ಹೇಳಿದನು.

ಕಸ್ಮಾತ್ತಪಸ್ಯತಿ ವ್ಯಾಸಃ ಕೋಽರ್ಥಸ್ತಸ್ಯ ಮನೋಗತಃ ।

ಈ ವ್ಯಾಸನು ಯಾವ ಉದ್ದೇಶದಿಂದ ತಪಸ್ಸನ್ನು ಮಾಡುತ್ತಿದ್ದಾನೆ? ಇವನ ಮನೋಽಭಿಲಾಷೆಯೇನು ?

|| ಶಿವ ಉವಾಚ ||

**ಪಾರಾಶರ್ಯಸ್ತು ಪುತ್ರಾರ್ಥೀ ತಪಶ್ಚರತಿ ದುಶ್ಚರಂ ||೧೭||**
**ಪೂರ್ಣಂ ವರ್ಷಶತಂ ಜಾತಂ ದದಾಮ್ಯದ್ಯ ಸುತಂ ಶುಭಂ ।**

ಶಿವನು ಹೇಳಿದನು—ವ್ಯಾಸನು ಮಗನು ಬೇಕೆಂಬುದಾಗಿ ತಪಸ್ಸುಮಾಡು ತ್ತಲಿದ್ದಾನೆ. ಈಗ ನೂರು ವರ್ಷಗಳ ಕಾಲ ತುಂಬಿತು. ಈಗ ಅವನಿಗೆ ಒಳ್ಳೆಯ ಮಗನನ್ನು ಕೊಡುತ್ತೇನೆ.

|| ಸೂತ ಉವಾಚ ||

**ಇತ್ಯುಕ್ತ್ವಾ ವಾಸವಂ ರುದ್ರೋ ದಯಯಾ ಮುದಿತಾನನಃ ||೧೮||**
**ಗತ್ವಾ ಮುನಿಸಮೀಪಂ ತು ತಮುವಾಚ ಜಗದ್ಗುರುಃ ।**

ಸೂತನು ಹೇಳಿದನು—ರುದ್ರನು ಈರೀತಿಯಾಗಿ ಇಂದ್ರನಿಗೆ ಹೇಳಿ ಸಂತೋಷಗೊಂಡ ಮುಖವುಳ್ಳವನೂ ಕರುಣೆಯುಳ್ಳವನೂ ಆಗಿರುವ, ಲೋಕಕ್ಕೆಲ್ಲಾ ಗುರುವಾದ ಶಿವನು ವ್ಯಾಸಮುನಿಯ ಹತ್ತಿರಕ್ಕೆ ಬಂದು ಈರೀತಿಯಾಗಿ ಹೇಳಿದನು.

**ಉತ್ತಿಷ್ಠ ವಾಸವೀಪುತ್ರ ಪುತ್ರಸ್ತೇ ಭವಿತಾ ಶುಭಃ ||೧೯||**
**ಸರ್ವತೇಜೋಮಯೋ ಜ್ಞಾನೀ ಕೀರ್ತಿಕರ್ತಾ ತವಾನಘ ।**
**ಅಖಿಲಸ್ಯ ಜನಸ್ಯಾತ್ರ ವಲ್ಲಭಸ್ತೇ ಸುತಸ್ಸದಾ ||೨೦||**
**ಭವಿಷ್ಯತಿ ಗುಣೈಃ ಪೂರ್ಣಃ ಸಾತ್ತ್ವಿಕೈಃ ಸತ್ಯವಿಕ್ರಮಃ ।**

ಎಲೈ ವ್ಯಾಸನೇ, ತಪಸ್ಸನ್ನು ಮುಗಿಸಿ ಏಳು. ನಿನಗೆ ಭೂಮಿಯೇ ಮೊದಲಾದ ಎಲ್ಲ ಪ್ರಕೃತಿವಸ್ತುಗಳ ಸಾರಭೂತನಾದ, ಉತ್ತಮವಾದ ತಿಳಿವಳಿಕೆಯುಳ್ಳ, ನಿನಗೆ ಯಶಸ್ಸನ್ನುಂಟುಮಾಡುವ, ಒಳ್ಳೆಯ ಮಗನು ಹುಟ್ಟುವನು. ಅವನು ಎಲ್ಲ ಜನಗಳಿಗೂ ಪ್ರಿಯನಾಗಿರುವನು. ಆ ನಿನ್ನ ಮಗನು ಸಾತ್ತ್ವಿಕಗುಣಗಳಿಂದ ಕೂಡಿದವನೂ ಆಗಿರುವನು, ಮತ್ತು ಸತ್ಯಪರನಾಗಿರುವುದರಲ್ಲಿ ತುಂಬ ಗಟ್ಟಿಗನಾಗಿಯೂ ಇರುವನು. ಅಲ್ಲದೆ ಅವನು ನಿನಗೂ ಒಳ್ಳೆಯ ಹೆಸರನ್ನು ತರುವವನೂ ಆಗುವನು.

|| ಸೂತ ಉವಾಚ ||

**ತದಾಕರ್ಣ್ಯ ವಚಃ ಶ್ಲಕ್ಷ್ಣಂ ಕೃಷ್ಣದ್ವೈಪಾಯನಸ್ತದಾ ||೨೧||**
**ಶೂಲಪಾಣಿಂ ನಮಸ್ಕೃತ್ಯ ಜಗಾಮಾಶ್ರಮಮಾತ್ಮನಃ ।**

ಸೂತನು ಹೇಳಿದನು—ಹೀಗೆ ಹೇಳಿದ ಮೃದುವಾದ ಈಶ್ವರನ ಮಾತುಗಳನ್ನು ಕೇಳಿ ವ್ಯಾಸನು ಆಗ ಸಂತೋಷದಿಂದ ಶಿವನಿಗೆ ನಮಸ್ಕಾರವನ್ನು ಮಾಡಿ ತನ್ನ ಆಶ್ರಮಕ್ಕೆ ಹೊರಟುಹೋದನು.

**ಸ ಗತ್ವಾಶ್ರಮಮೇವಾಶು ಬಹುವರ್ಷಶ್ರಮಾತುರಃ ॥೨೨॥**

**ಅರಣೀಸಹಿತಂ ಗುಹ್ಯಂ ಮಮಂಥಾಗ್ನಿಂ ಚಿಕೀರ್ಷಯಾ ।**
**ಮಂಥನಂ ಕುರ್ವತಸ್ತಸ್ಯ ಚಿತ್ತೇ ಚಿಂತಾಭರಸ್ತದಾ ॥೨೩॥**

**ಪ್ರಾದುರ್ಬಭೂವ ಸಹಸಾ ಸುತೋತ್ಪತ್ತೌ ಮಹಾತ್ಮನಃ ।**

ಆ ವ್ಯಾಸಮುನಿಯು ಜಾಗ್ರತೆಯಾಗಿ ತನ್ನ ಆಶ್ರಮಕ್ಕೆ ಹೋಗಿ ಅನೇಕ ವರ್ಷಗಳ ತಪಸ್ಸಿನಿಂದುಂಟಾದ ಆಯಾಸದಿಂದ ಪೀಡಿತನಾದಾಗ್ಯೂ ಅರಣಿಯ ಮರದಲ್ಲಿ ಗುಟ್ಟಾಗಿ ಅಡಗಿರುವ ಅಗ್ನಿಯನ್ನು ಪಡೆಯಲೋಸುಗ ಅರಣಿಯನ್ನು ಕಡೆದನು. ಹೀಗೆ ಕಡೆಯುತ್ತಿರುವ ಸಮಯದಲ್ಲಿ ಅವನ ಮನಸ್ಸಿನಲ್ಲಿ ನನಗೆ ಮಗನು ಉಂಟಾಗುವುದು ಹೇಗೆ ಎಂಬ ವಿಷಯದಲ್ಲಿ ಚಿಂತೆಯು ಬಲವಾಗಿ ಮೂಡಿತ್ತು.

**ಮಂಥಾನಾರಣಿಸಂಯೋಗಾನ್ಮಂಥನಾಚ್ಚ ಸಮುದ್ಭವಃ ॥೨೪॥**

**ಪಾವಕಸ್ಯ ಯಥಾ ತದ್ವತ್ಕಥಂ ಮೇ ಸ್ಯಾತ್ಸುತೋದ್ಭವಃ ।**
**ಪುತ್ರಾರಣಿಸ್ತು ವ್ಯಾಖ್ಯಾತಾ ಸಾ ಮಮಾದ್ಯ ನ ವಿದ್ಯತೇ ॥೨೫॥**

ಕಡೆಯುವ ಕೋಲು, ಅರಣಿ ಇವುಗಳ ಸೇರುವಿಕೆಯಿಂದಲೂ, ಕಡೆಯುವುದರಿಂದಲೂ ಅಗ್ನಿಯು ಹೇಗೆ ಹುಟ್ಟುವುದೋ ಅದರಂತೆ ನನಗೆ ಮಗನು ಹೇಗೆ ಹುಟ್ಟುವನು. ಪುತ್ರನು ಹುಟ್ಟುವ ಅರಣಿ ಎಂಬುದಾಗಿ ಪ್ರಸಿದ್ಧವಾಗಿರುವುದು ಯಾವುದೋ ಅಂಥ ಹೆಂಡತಿ ಎಂಬ ವಸ್ತುವು ನನ್ನ ಪಾಲಿಗೆ ಇಲ್ಲವಾಗಿದೆ.

**ತರುಣೀ ರೂಪಸಂಪನ್ನಾ ಕುಲೋತ್ಪನ್ನಾ ಪತಿವ್ರತಾ ।**
**ಕಥಂ ಕರೋಮಿ ಕಾಂತಾಂ ಚ ಪಾದಯೋಶ್ಶೃಂಖಲಾಸಮಾಂ ॥೨೬॥**

ಪುತ್ರೋತ್ಪತ್ತಿಗೆ ಅರಣಿಯ ಹಾಗೆ ಇರುವವಳೂ, ಯೌವನವಂತಳೂ, ರೂಪವಂತಳೂ, ಒಳ್ಳೆಯ ಕುಲದಲ್ಲಿ ಹುಟ್ಟಿದವಳೂ ಪತಿವ್ರತೆಯೂ ಆದರೂ ನನ್ನನ್ನು ಸಂಸಾರದ ನಿರ್ಬಂಧದಲ್ಲಿಡುವುದರಿಂದ ಕಾಲುಗಳಿಗೆ ಬೇಡಿಯಂತಿರುವ ಹೆಂಡತಿಯನ್ನು ಹೇಗೆ ಸಂಪಾದಿಸಲಿ ?

**ಪುತ್ರೋತ್ಪಾದನದಕ್ಷಾಂ ಚ ಪಾತಿವ್ರತ್ಯೇ ಸದಾ ಸ್ಥಿತಾಂ ।**
**ಪತಿವ್ರತಾಪಿ ದಕ್ಷಾಪಿ ರೂಪವತ್ಯಪಿ ಕಾಮಿನೀ ॥೨೭॥**

**ಸದಾ ಬಂಧನರೂಪಾ ಚ ಸ್ವೇಚ್ಛಾಸುಖವಿಧಾಯಿನೀ ।**
**ಶಿವೋಽಪಿ ಪರ್ವತೇ ನಿತ್ಯಂ ಕಾಮಿನೀಪಾಶಸಂಯುತಃ ॥೨೮॥**

ಮಕ್ಕಳನ್ನು ಪಡೆಯುವುದರಲ್ಲಿ ಸಮರ್ಥಳಾಗಿಯೂ, ಯಾವಾಗಲೂ ಪತಿವ್ರತೆಯಾಗಿಯೂ ಇರುವ ಹೆಂಗಸನ್ನು ಹೇಗೆ ಸಂಪಾದಿಸಲಿ ? ಹೆಂಡತಿಯು ಪತಿವ್ರತೆಯಾಗಿರಲಿ, ಸಮರ್ಥಳಾಗಿಯೇ ಇರಲಿ, ರೂಪವತಿಯೇ ಆಗಿರಲಿ, ಹೇಗಿದ್ದರೂ ಅವಳು ನನ್ನನ್ನು ಈ ಸಂಸಾರದಲ್ಲಿ ಸಿಲುಕಿಸುವ ಬಂಧನರೂಪಳೇ ಹೌದು, ಮತ್ತು ತನ್ನ ಇಚ್ಛೆಬಂದಾಗ ಸುಖವನ್ನುಂಟುಮಾಡುವಳು. ಪರಮೇಶ್ವರನೂ ಕೂಡ ಹೆಂಗಸೆಂಬ ಹಗ್ಗದಿಂದ ಕಟ್ಟಲ್ಪಟ್ಟವನಾಗಿ ಯಾವಾಗಲೂ ಪರ್ವತದಲ್ಲಿ ವಾಸಮಾಡುತ್ತಿದ್ದಾನೆ. ಅವನಿಗೇ ಹಾಗಾದಮೇಲೆ ನಮ್ಮಂಥವರ ಪಾಡೇನು ಎಂದು ಅಭಿಪ್ರಾಯವು.

**ಕಥಂ ಕರೋಮ್ಯಹಂ ಚಾತ್ರ ದುರ್ಘಟಂ ಚ ಗೃಹಾಶ್ರಮಂ ।**

ಈಗ ನಾನು ಈ ನನ್ನ ಈಗಿನ ಸ್ಥಿತಿಯೊಡನೆ ಹೊಂದದೇ ಇರುವ ಗೃಹಸ್ಥಾಶ್ರಮವನ್ನು ಹೇಗೆ ಸ್ವೀಕರಿಸಲಿ.

**ಏವಂ ಚಿಂತಯತಸ್ತಸ್ಯ ಘೃತಾಚೀ ದಿವ್ಯರೂಪಿಣೀ ॥೨೯॥**
**ಪ್ರಾಪ್ತಾ ದೃಷ್ಟಿಪಥಂ ತತ್ರ ಸಮೀಪೇ ಗಗನೇ ಸ್ಥಿತಾ ॥**

ಹೀಗೆ ಆ ವ್ಯಾಸನು ಯೋಚಿಸುತ್ತಿರುವಷ್ಟರಲ್ಲಿಯೇ ಶ್ರೇಷ್ಠವಾದ ಸೌಂದರ್ಯವುಳ್ಳ ಘೃತಾಚೀ ಎಂಬ ಅಪ್ಸರಸ್ತ್ರೀಯು ಹತ್ತಿರದಲ್ಲಿಯೇ ಆಕಾಶದಲ್ಲಿ ಕಾಣಿಸಿಕೊಂಡಳು.

**ತಾಂ ದೃಷ್ಟ್ವಾ ಚಪಲಾಪಾಂಗೀಂ ಸಮೀಪಸ್ಥಾಂ ವರಾಪ್ಸರಾಂ ॥೩೦॥**
**ಪಂಚಬಾಣಪರೀತಾಂಗಃ ತೂರ್ಣಮಾಸೀದ್ಧೃತವ್ರತಃ ।**

ಚಂಚಲವಾದ ಕಡೆಗಣ್ಣುಗಳ ನೋಟವುಳ್ಳ, ಸಮೀಪದಲ್ಲೇ ಇರುವ ಉತ್ತಮಳಾದ ಆ ಅಪ್ಸರಸ್ತ್ರೀಯನ್ನು ನೋಡಿ ಕಾಮಬಾಣದಿಂದ ಪೀಡಿತನಾದಾಗ್ಯೂ ವ್ರತಭಂಗಭಯದಿಂದ ಆ ವ್ಯಾಸನು ಮನಸ್ಸನ್ನು ಬಿಗಿಹಿಡಿದು ಸುಮ್ಮನೆ ಇದ್ದನು.

**ಚಿಂತಯಾಮಾಸ ಚ ತದಾ ಕಿಂ ಕರೋಮ್ಯದ್ಯ ಸಂಕಟೇ ॥೩೧॥**

**ಧರ್ಮಸ್ಯ ಪುರತಃ ಪ್ರಾಪ್ತೇ ಕಾಮಭಾವೇ ದುರಾಸದೇ ॥**

ಈಗ ಧರ್ಮದ ಎದುರಿನಲ್ಲಿ ಕಾಮಭಾವವೂ ಪ್ರಾಪ್ತವಾಗಿದೆ. ಹೀಗಿರುವ ಈ ತೊಡಕಿನಲ್ಲಿ ನಾನು ಏನನ್ನು ಮಾಡಲಿ? ಎಂಬುದಾಗಿ ಯೋಚಿಸಲು ಪ್ರಾರಂಭಿಸಿದನು. ಪರಸ್ತ್ರೀಯಾದ ಇವಳನ್ನು ಪರಿಗ್ರಹಿಸುವುದು ಧರ್ಮವಿರೋಧವು, ಇಲ್ಲದಿದ್ದರೆ ಕಾಮಬಾಧೆಯನ್ನು ತಡೆಯಲಾಗದೆ ಇದೆ. ಈಗ ನಾನು ಏನನ್ನು ಮಾಡಬೇಕು ಎಂದು ಯೋಚಿಸಿದನೆಂದಭಿಪ್ರಾಯವು.

**ಅಂಗೀಕರೋಮಿ ಯದ್ಯೇನಾಂ ವಂಚನಾರ್ಥಮಿಹಾಗತಾಂ ॥೩೨॥**

**ಹಸಿಷ್ಯಂತಿ ಮಹಾತ್ಮಾನಃ ತಾಪಸಾ ಮಾಂ ತು ವಿಹ್ವಲಂ ॥**

**ತಪಸ್ತಪ್ತ್ವಾ ಮಹಾಘೋರಂ ಪೂರ್ಣಂ ವರ್ಷಶತಂ ತ್ವಿಹ ॥೩೩॥**

**ದೃಷ್ಟ್ವಾಪ್ಸರಾಂ ಚ ವಿವಶಃ ಕಥಂ ಜಾತೋ ಮಹಾತಪಾಃ ।**

ನಾನು ಈಗ ಇವಳನ್ನು ಪರಿಗ್ರಹಿಸಿದರೆ, ಮಹಾತ್ಮರಾದ ತಪಸ್ವಿಗಳು ನನ್ನನ್ನು ನೋಡಿ, ಇವನು ನೂರುವರ್ಷಗಳವರೆಗೆ ಘೋರವಾದ ತಪಸ್ಸನ್ನು ಮಾಡಿದರೂ ಕಡೆಗೆ ಅಪ್ಸರಸ್ತ್ರೀಯನ್ನು ನೋಡಿ ಚಪಲನಾಗಿ ಅವಳಿಗೆ ಅಧೀನನಾದನೆಂದು ಹಾಸ್ಯಮಾಡುತ್ತಾರೆ. ಆದುದರಿಂದ ನನ್ನನ್ನು ಮೋಸಗೊಳಿಸಲು ಇಲ್ಲಿಗೆ ಬಂದಿರುವ ಇವಳನ್ನು ಪರಿಗ್ರಹಿಸುವುದು ಯೋಗ್ಯವಲ್ಲವು.

**ಕಾಮಂ ನಿಂದಾಪಿ ಭವತು ಯದಿ ಸ್ಯಾದತುಲಂ ಸುಖಂ ॥೩೪॥**

**ಗೃಹಸ್ಥಾಶ್ರಮಸಂಭೂತಂ ಸುಖದಂ ಪುತ್ರಕಾಮದಂ ।**

**ಸ್ವರ್ಗದಂ ಚ ತಥಾ ಪ್ರೋಕ್ತಂ ಜ್ಞಾನಿನಾಂ ಮೋಕ್ಷದಂ ತಥಾ ॥೩೫॥**

ಅಲ್ಲದೆ ಗೃಹಸ್ಥಾಶ್ರಮವು ಫಲಕಾಮನೆಯುಳ್ಳವರಿಗೆ ಇಹದಲ್ಲಿ ಪುತ್ರಪ್ರಾಪ್ತಿ ಮುಂತಾದ ಸುಖವನ್ನೂ ಪರಲೋಕದಲ್ಲಿ ಸ್ವರ್ಗ ಮುಂತಾದ ಸುಖವನ್ನೂ, ವಿರಕ್ತರಾದ ಜ್ಞಾನಿಗಳಿಗೆ ಮೋಕ್ಷದ ನಿತ್ಯಸುಖವನ್ನೂ ಕೊಡುತ್ತದೆ. ಆದುದರಿಂದ ಗೃಹಸ್ಥಾಶ್ರಮದಿಂದ ದೊರೆಯುವ ಸುಖವು ಅಸದೃಶವಾದುದು. ಆದರೆ ಇವಳಿಂದಲೂ ಅಂತಹ ಸುಖವು ದೊರೆಯುವ ನಿರೀಕ್ಷಣೆಯೂ ಇಲ್ಲವು. ಏಕೆಂದರೆ ಅಪ್ಸರಸ್ತ್ರೀಯಾದ ಇವಳು ಸ್ವಲ್ಪಕಾಲ ಮಾತ್ರ ನನ್ನೊಡನಿದ್ದು, ಆಮೇಲೆ ಬಿಟ್ಟು ಹೊರಟು

ಹೋಗುವಳು. ಇವಳು ನನ್ನೊಡನೆ ಕಡೆಯ ವರಿವಿಗೂ ಧರ್ಮಪತ್ನಿಯಾಗಿರುತ್ತಾ ಗೃಹಿಣಿಯಾಗಿರುವ ಹಾಗಿದ್ದರೆ, ಮುನಿಗಳ ನಿಂದೆಯನ್ನಾದರೂ ಸಹಿಸಿ ಇವುಗಳನ್ನು ಪರಿಗ್ರಹಿಸಬಹುದಾಗಿತ್ತು ಹಾಗೂ ಇಲ್ಲವು.

**ನ ಭವಿಷ್ಯತಿ ತನ್ನೂನಮನಯಾ ದೇವಕನ್ಯಯಾ ।**
**ನಾರದಾಚ್ಚ ಮಯಾ ಪೂರ್ವಂ ಶ್ರುತಮಸ್ತಿ ಕಥಾನಕಂ ॥೩೬॥**

**ಯಥೋರ್ವಶೀವಶೋ ರಾಜಾ ಪರಾಭೂತಃ ಪುರೂರವಾಃ ॥**

ದೇವಸ್ತ್ರೀಯಾದ ಇವಳಿಂದ ಮೇಲೆ ಹೇಳಿರುವ ಫಲವೊಂದೂ ಉಂಟಾಗುವುದಿಲ್ಲ. ಪೂರ್ವದಲ್ಲಿ ದೇವಕನ್ಯೆಯಾದ ಊರ್ವಶಿಯ ಅಧೀನನಾದ ಪುರೂರವನು ಅವಳಿಂದ ತಿರಸ್ಕರಿಸಲ್ಪಟ್ಟನು ಎಂಬ ಕಥೆಯನ್ನು ನಾನು ನಾರದನ ಮುಖದಿಂದ ಕೇಳಿರುತ್ತೇನೆ. ಅದರಂತೆ ಈಗಲೂ ಈ ಘೃತಾಚಿಯಿಂದ ನನಗೆ ಯಾವ ಸುಖವೂ ಉಂಟಾಗುವುದಿಲ್ಲ ಎಂಬುದಾಗಿ ಮನಸ್ಸಿನಲ್ಲಿ ಯೋಚಿಸಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ದಶಮೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಮೊದಲನೆಯ ಸ್ಕಂಧದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

### || ಏಕಾದಶೋಽಧ್ಯಾಯಃ ||

### ಹನ್ನೊಂದನೆಯ ಅಧ್ಯಾಯವು

|| ಋಷಯ ಊಚುಃ ||

**ಕೋಽಸೌ ಪುರೂರವಾ ರಾಜಾ ಕೋರ್ವಶೀ ದೇವಕನ್ಯಕಾ ।**
**ಕಥಂ ಕಷ್ಟಂ ಚ ಸಂಪ್ರಾಪ್ತಂ ತೇನ ರಾಜ್ಞಾ ಮಹಾತ್ಮನಾ ॥೧॥**

ಶೌನಕಾದಿಋಷಿಗಳು ಸೂತಮುನಿಯನ್ನು ಕೇಳಿದರು— ನೀನು ಹಿಂದಿನ ಅಧ್ಯಾಯದಲ್ಲಿ ಪುರೂರವ, ಊರ್ವಶೀ ಇವರ ಸಮಾಚಾರವನ್ನು ಹೇಳಿರುವೆಯಷ್ಟೆ. ಆ ಪುರೂರವನು ಯಾರು ? ದೇವಕನ್ಯೆಯಾದ ಊರ್ವಶೀ ಎಂಬುವಳು ಯಾರು ? ಮಹಾತ್ಮನಾದ ಆ ಪುರೂರವನೆಂಬ ರಾಜನು ಹೇಗೆ ಕಷ್ಟವನ್ನು ಹೊಂದಿದನು ?

**ಸರ್ವಂ ಕಥಾನಕಂ ಬ್ರೂಹಿ ಲೋಮಹರ್ಷಣಜಾಧುನಾ ।**
**ಶ್ರೋತುಕಾಮಾ ವಯಂ ಸರ್ವೇ ತ್ವನ್ಮುಖಾಬ್ಜಚ್ಯುತಂ ರಸಂ ॥೨॥**

**ಅಮೃತಾದಪಿ ಮಿಷ್ಟಾ ತೇ ವಾಣೀ ಸೂತ ರಸಾತ್ಮಿಕಾ ।**
**ನ ತೃಪ್ಯಾಮೋ ವಯಂ ಸರ್ವೇ ಸುಧಯಾ ಚ ಯಥಾಽಮರಾಃ ॥೩॥**

ಎಲೈ ಲೋಮಹರ್ಷಣರಿಂದ ಉತ್ಪನ್ನವಾದ ಸೂತಋಷಿಯೇ, ನಾವು ಈಗ ಆ ಕಥೆಯ ಸಂದರ್ಭವನ್ನೆಲ್ಲಾ ಕೇಳಲು ಅಪೇಕ್ಷೆಯುಳ್ಳವರಾಗಿದ್ದೇವೆ. ಅಮೃತಕ್ಕಿಂತಲೂ ನಿನ್ನ ಮಾತು ಬಹಳ ರುಚಿಕರವಾದುದು. ದೇವತೆಗಳು ಹೇಗೆ ಅಮೃತಪಾನದಿಂದ ತೃಪ್ತರಾಗುವುದಿಲ್ಲವೋ ಹಾಗೆ ನಾವು ಕೂಡ ನಿನ್ನ ಈ ವಚನಾಮೃತದ ಪಾನದಿಂದ ತೃಪ್ತರಾಗದೆ ಇದ್ದೇವೆ.

॥ ಸೂತ ಉವಾಚ ॥

**ಶೃಣುಧ್ವಂ ಮುನಯಸ್ಸರ್ವೇ ಕಥಾಂ ದಿವ್ಯಾಂ ಮನೋರಮಾಂ ।**
**ವಕ್ಷ್ಯಾಮ್ಯಹಂ ಯಥಾ ಬುದ್ಧ್ಯಾ ಶ್ರುತಾಂ ವ್ಯಾಸವರೋತ್ತಮಾತ್ ॥೪॥**

ಸೂತಮುನಿಯು ಹೇಳಿದನು—ಎಲೈ ಋಷಿಗಳಿರಾ ಬಹಳ ಮನೋಹರವಾಗಿಯೂ, ಶ್ರೇಷ್ಠವಾಗಿಯೂ ಇರುವ ಕಥೆಯನ್ನು ಶ್ರೇಷ್ಠನಾದ ವ್ಯಾಸಮುನಿಯಿಂದ ನಾನು ಹೇಗೆ ಕೇಳಿ ತಿಳಿದಿದ್ದೇನೆಯೋ ಹಾಗೆಯೇ ನನ್ನ ಬುದ್ಧಿಶಕ್ತಿಗೆ ಅನುಸಾರವಾಗಿ ಹೇಳುತ್ತೇನೆ, ಕೇಳಿರಿ.

**ಗುರೋಸ್ತು ದಯಿತಾ ಭಾರ್ಯಾ ತಾರಾ ನಾಮೇತಿ ವಿಶ್ರುತಾ ।**
**ರೂಪಯೌವನಯುಕ್ತಾ ಸಾ ಚಾರ್ವಂಗೀ ಮದವಿಹ್ವಲಾ ॥೫॥**

ಗುರುವಿಗೆ ಬಹಳ ಪ್ರೀತಿಪಾತ್ರಳಾದ ತಾರೆ ಎಂದು ಪ್ರಸಿದ್ಧಳಾದ ಹೆಂಡತಿಯು ಇದ್ದಾಳೆ. ಅವಳು ಒಳ್ಳೆಯ ರೂಪವಂತಳಾಗಿಯೂ ಯೌವನಶಾಲಿನಿಯಾಗಿಯೂ, ಒಳ್ಳೆಯ ಸುಂದರವಾದ ಅವಯವಗಳುಳ್ಳವಳಾಗಿಯೂ ಇದ್ದಾಳೆ.

**ಗತ್ವೈಕದಾ ವಿಧೋರ್ಧಾಮ ಯಜಮಾನಸ್ಯ ಭಾಮಿನೀ ।**
**ದೃಷ್ಟ್ವಾ ಚ ಶಶಿನಾತ್ಯರ್ಥಂ ರೂಪಯೌವನಶಾಲಿನೀ ॥೬॥**

ರೂಪವೂ ಯೌವನವೂ ಇವುಗಳಿಂದ ಕೂಡಿದ ಆ ತಾರೆಯು ಒಂದಾನೊಂದು ದಿವಸ ಯಜ್ಞಮಾಡುತ್ತಿದ್ದ ಚಂದ್ರನ ಮನೆಗೆ ಹೋದಳು. ಆಗ ಚಂದ್ರನು ಅವಳನ್ನು ಚನ್ನಾಗಿ ನೋಡಿದನು.

**ಕಾಮಾತುರಸ್ತದಾ ಜಾತಃ ಶಶೀ ಶಶಿಮುಖೀಂ ಪ್ರತಿ ।**
**ಸಾಪಿ ವೀಕ್ಷ್ಯ ವಿಧುಂ ಕಾಮಂ ಜಾತಾ ಮದನಪೀಡಿತಾ ॥೭॥**

ಚಂದ್ರನಂತೆ ಮುಖವುಳ್ಳ ಆ ಸುಂದರಿಯನ್ನು ನೋಡಿ ಚಂದ್ರನು ಕಾಮವಶನಾದನು. ಆ ತಾರೆಯೂ ಕೂಡ ಆ ಚಂದ್ರನನ್ನು ಚೆನ್ನಾಗಿ ನೋಡಿ ಮನ್ಮಥನಿಂದ ಪೀಡಿತಳಾದಳು.

**ತಾವನ್ಯೋನ್ಯಂ ಪ್ರೇಮಯುಕ್ತೌ ಸ್ಮರಾರ್ತೌ ಚ ಬಭೂವತುಃ ।**
**ತಾರಾಶಶೀ ಮದೋನ್ಮತ್ತೌ ಕಾಮಬಾಣಪ್ರಪೀಡಿತೌ ॥೮॥**

ರೇಮಾತೇ ಮದಮತ್ತೌ ತೌ ಪರಸ್ಪರಸ್ಪೃಹಾನ್ವಿತೌ ।
ದಿನಾನಿ ಕತಿಚಿತ್ತತ್ರ ಜಾತಾನಿ ರಮಮಾಣಯೋಃ ॥೯॥

ಹೀಗೆ ಅವರಿಬ್ಬರೂ ಪರಸ್ಪರವಾಗಿ ಪ್ರೇಮವುಳ್ಳವರಾಗಿರಲು ಮದಹತ್ತಿದವರಾದ ಆ ತಾರೆಯೂ ಚಂದ್ರನೂ ಮನ್ಮಥಬಾಣದಿಂದ ಪೀಡಿತರಾಗಿ ಒಬ್ಬರನ್ನೊಬ್ಬರು ಕಾಮಿಸುತ್ತಾ ರತಿಕ್ರೀಡೆಗೆ ಪ್ರಾರಂಭಿಸಿದರು. ಹೀಗೆ ಕ್ರೀಡಿಸುತ್ತಿರುವಲ್ಲಿ ಕೆಲವು ದಿವಸಗಳು ಕಳೆದುಹೋದವು.

ಬೃಹಸ್ಪತಿಸ್ತು ದುಃಖಾರ್ತಸ್ತಾರಾಮಾನಯಿತುಂ ಗೃಹಂ ।
ಪ್ರೇಷಯಾಮಾಸ ಶಿಷ್ಯಂತು ನಾಯಾತಾ ಸಾ ವಶೀಕೃತಾ ॥೧೦॥

ಇತ್ತಲಾಗಿ ಬೃಹಸ್ಪತಿಯು, ತಾರೆಯು ಮನೆಗೆ ಬರದೇ ಇದ್ದುದರಿಂದ ದುಃಖವುಳ್ಳವನಾಗಿ ಆ ತಾರೆಯನ್ನು ಮನೆಗೆ ಕರೆದುಕೊಂಡು ಬರಲು ಒಬ್ಬ ಶಿಷ್ಯನನ್ನು ಕಳುಹಿಸಿದನು. ಆ ತಾರೆಯಾದರೋ ಕಾಮದಿಂದ ಚಂದ್ರನಿಗೆ ವಶಳಾಗಿದ್ದುದರಿಂದ ಬೃಹಸ್ಪತಿಯ ಮನೆಗೆ ಬರಲಿಲ್ಲ.

ಪುನಃ ಪುನರ್ಯದಾ ಶಿಷ್ಯಂ ಪರಾವರ್ತತ ಚಂದ್ರಮಾಃ ।
ಬೃಹಸ್ಪತಿಸ್ತದಾ ಕ್ರುದ್ಧಃ ಜಗಾಮ ಸ್ವಯಮೇವ ಹಿ ॥೧೧॥

ಅನೇಕಾವೃತ್ತಿ ತಾರೆಯನ್ನು ಕರೆತರಲು ಕಳುಹಿಸಿದ ಶಿಷ್ಯನನ್ನು ಚಂದ್ರನು ತಾರೆಯನ್ನು ಕಳುಹಿಸದೆ ಹಿಂದಕ್ಕೆ ಕಳುಹಿಸಿದ್ದರಿಂದ ಬೃಹಸ್ಪತಿಯು ಕೋಪಗೊಂಡವನಾಗಿ ತಾನೇ ಅಲ್ಲಿಗೆ ಹೊರಟನು.

ಗತ್ವಾ ಸೋಮಗೃಹಂ ತತ್ರ ವಾಚಸ್ಪತಿರುದಾರಧೀಃ ।
ಉವಾಚ ಶಶಿನಂ ಕ್ರುದ್ಧಃ ಸ್ಮಯಮಾನಂ ಮದಾನ್ವಿತಂ ॥೧೨॥

ಉದಾರಬುದ್ಧಿಯುಳ್ಳ ಬೃಹಸ್ಪತಿಯು ಚಂದ್ರನ ಮನೆಗೆ ಹೋಗಿ ಬಹಳ ಕೋಪದಿಂದ ಕೂಡಿದವನಾಗಿ, ಕಿರುನಗೆಯಿಂದ ಕೂಡಿ ಮದಾಂಧನಾದ ಚಂದ್ರನನ್ನು ಕುರಿತು ಈ ರೀತಿಯಾಗಿ ಹೇಳಿದನು.

ಕಿಂ ಕೃತಂ ಕಿಲ ಶೀತಾಂಶೋ ಕರ್ಮಧರ್ಮವಿಗರ್ಹಿತಂ ।
ರಕ್ಷಿತಾ ಮಮ ಭಾರ್ಯೇಯಂ ಸುಂದರೀ ಕೇನ ಹೇತುನಾ ॥೧೩॥

ಎಲೈ ಚಂದ್ರನೇ, ನೀನು ಮಾಡಿದ ಕೆಲಸವು ಕೇವಲ ಧರ್ಮಕ್ಕೆ ವಿರೋಧ ವಾದುದು. ನೀನು ಸುಂದರಿಯಾದ ನನ್ನ ಹೆಂಡತಿಯನ್ನು ಏತಕ್ಕಾಗಿ ನಿನ್ನ ಮನೆ ಯಲ್ಲಿ ಕಾಪಾಡುತ್ತಾ ಇಟ್ಟುಕೊಂಡಿದ್ದೀಯೆ ?

**ತವ ದೇವಗುರುಶ್ಚಾಹಂ ಯಜಮಾನೋಽಪಿ ಸರ್ವಥಾ ।**
**ಗುರುಭಾರ್ಯಾ ಕಥಂ ಮೂಢ ಭುಕ್ತಾ ಕಿಂ ರಕ್ಷಿತಾಽಥವಾ ॥೧೪॥**

ಎಲೈ ಚಂದ್ರನೇ, ನಾನು ನಿನಗೆ ಗುರುವಾಗಿದ್ದೇನೆ. ಅದೂ ಅಲ್ಲದೆ ನೀನು ಈಗ ಯಜ್ಞವನ್ನು ಮಾಡುತ್ತಾ ಇದ್ದೀಯೆ. ಹೀಗಿರುವಾಗ ಎಲೈ ಮೂಢನೇ, ನೀನು ಗುರುವಿನ ಹೆಂಡತಿಯಾದ ತಾರೆಯನ್ನು ರತಿಕ್ರೀಡಾದಿಗಳಿಂದ ಅನುಭವಿಸಿ ದೆಯಾ ? ಹಾಗಿಲ್ಲದಿದ್ದರೆ, ಅವಳನ್ನು ನಿನ್ನ ಮನೆಯಲ್ಲಿ ಏತಕ್ಕಾಗಿ ಕಾಪಾಡಿ ಇಟ್ಟು ಕೊಂಡಿದ್ದೀಯೆ ?

**ಬ್ರಹ್ಮಹಾ ಹೇಮಹಾರೀ ಚ ಸುರಾಪೋ ಗುರುತಲ್ಪಗಃ ।**
**ಮಹಾಪಾತಕಿನೋ ಹ್ಯೇತೇ ತತ್ಸಂಸರ್ಗೀ ಚ ಪಂಚಮಃ ॥೧೫॥**

ಬ್ರಾಹ್ಮಣನನ್ನು ಕೊಂದವನು, ಚಿನ್ನವನ್ನು ಕದ್ದವನು, ಮದ್ಯವನ್ನು ಪಾನ ಮಾಡಿದವನು, ಗುರುಪತ್ನೀಗಮನಮಾಡಿದವನು, ಇವರುಗಳ ಸಂಪರ್ಕದಲ್ಲಿರುವವನು, ಈ ಐದುಜನಗಳೂ ಮಹಾಪಾತಕಗಳನ್ನು ಮಾಡಿದವರೆಂದೆನಿಸಿಕೊಳ್ಳುತ್ತಾರೆ.

**ಮಹಾಪಾತಕಯುಕ್ತಸ್ತ್ವಂ ದುರಾಚಾರೋಽತಿಗರ್ಹಿತಃ ।**
**ನ ದೇವಸದನಾರ್ಹೋಽಸಿ ಯದಿ ಭುಕ್ತೇಯಮಂಗನಾ ॥೧೬॥**

ನೀನು ಈ ಸ್ತ್ರೀಯನ್ನು ಅನುಭವಿಸಿದ್ದಪಕ್ಷದಲ್ಲಿ ಗುರುಪತ್ನಿಯನ್ನು ಗಮನ ಮಾಡಿದಹಾಗಾಯಿತು. ಅದರಿಂದ ಕೆಟ್ಟ ನಡತೆಯುಳ್ಳವನೂ ಮಹಾಪಾಪಿಯೂ ಆಗಿರುವ ನೀನು ದೇವಲೋಕದಲ್ಲಿರಲು ಅರ್ಹನಲ್ಲವು.

**ಮುಂಚೇಮಾಮಸಿತಾಪಾಂಗೀಂ ನಯಾಮಿ ಸದನಂ ಮಮ ।**
**ನೋ ಚೇದ್ವಕ್ಷ್ಯಾಮಿ ದುಷ್ಟಾತ್ಮನ್ ಗುರುದಾರಾಪಹಾರಿಣಂ ॥೧೭॥**

ಎಲೈ ದುಷ್ಟಬುದ್ಧಿಯುಳ್ಳ ಚಂದ್ರನೇ, ಕಪ್ಪಾದ ಓರೆಗಣ್ಣಿನ ನೋಟವುಳ್ಳ ಈ ಲತಾಂಗಿಯನ್ನು ಬಿಡು. ಇವಳನ್ನು ನನ್ನ ಮನೆಗೆ ಕರೆದುಕೊಂಡು ಹೋಗು

ತ್ತೇನೆ. ಹಾಗೆ ಬಿಡದೇ ಇದ್ದಲ್ಲಿ ನೀನು ಗುರುಪತ್ನಿಯನ್ನು ಅಪಹಾರಮಾಡಿದವನು ಎಂಬುದಾಗಿ ತಕ್ಕ ಸ್ಥಳದಲ್ಲಿ ದೂರು ಹೇಳಿ ನಿನ್ನ ಅಕಾರ್ಯವನ್ನು ಪ್ರಸಿದ್ಧಪಡಿಸು ತ್ತೇನೆ ಎಂಬುದಾಗಿ ಗುರುವು ಚಂದ್ರನನ್ನು ಕುರಿತು ಹೇಳಿದನು.

**ಇತ್ಯೇವಂ ಭಾಷಮಾಣಂ ತಮುವಾಚ ರೋಹಿಣೀಪತಿಃ ।**
**ಗುರುಂ ಕ್ರೋಧಸಮಾಯುಕ್ತಂ ಕಾಂತಾವಿರಹದುಃಖಿತಂ ॥೧೮॥**

ಈ ರೀತಿಯಾಗಿ ಹೇಳುತ್ತಿರುವ, ಕೋಪಾವಿಷ್ಟನಾಗಿರುವ ಮತ್ತು ಹೆಂಡತಿಯ ವಿಯೋಗದಿಂದ ದುಃಖಪಡುತ್ತಿರುವ ಗುರುವನ್ನು ಕುರಿತು ರೋಹಿಣೀಪತಿಯಾದ ಚಂದ್ರನು ಈ ರೀತಿಯಾಗಿ ಹೇಳಿದನು.

॥ ಇಂದುರುವಾಚ ॥

**ಕ್ರೋಧಾತ್ತೇ ತು ದುರಾರಾಧ್ಯಾ ಬ್ರಾಹ್ಮಣಾಃ ಕ್ರೋಧವರ್ಜಿತಾಃ ।**
**ಪೂಜಾರ್ಹಾ ಧರ್ಮಶಾಸ್ತ್ರಜ್ಞಾ ವರ್ಜನೀಯಾಸ್ತತೋಽನ್ಯಥಾ ॥೧೯॥**

ಎಲೈ ಗುರುವೇ, ಕ್ರೋಧವಿರುವ ಬ್ರಾಹ್ಮಣರು ಪೂಜೆಗೆ ಯೋಗ್ಯರಾಗ ಲಾರರು. ಧರ್ಮಶಾಸ್ತ್ರವನ್ನು ತಿಳಿದವರಾಗಿಯೂ, ಕ್ರೋಧವೆಂಬ ದುರ್ಗುಣವನ್ನು ತ್ಯಜಿಸಿದವರಾಗಿಯೂ ಇರುವ ಬ್ರಾಹ್ಮಣರು ಪೂಜೆಗೆ ಯೋಗ್ಯರಾಗುತ್ತಾರೆ. ಇದಕ್ಕೆ ವಿರುದ್ಧಸ್ವಭಾವವುಳ್ಳವರು ಅಂದರೆ ಧರ್ಮಶಾಸ್ತ್ರವನ್ನು ತಿಳಿಯದೆ ಸಿಟ್ಟಿನಿಂದ ಕೂಡಿರುವವರು ಪೂಜೆಗೆ ಯೋಗ್ಯರಲ್ಲ. ಆದುದರಿಂದ ನೀನು ಕೋಪ ವನ್ನು ಬಿಡು. ಹಾಗಿಲ್ಲದಿದ್ದರೆ ನೀನು ತಿರಸ್ಕಾರತ್ಯಾಗಗಳಿಗೆ ಗುರಿಯಾಗುವೆ, ಎಂದು ಗುರುವನ್ನು ಕುರಿತು ಚಂದ್ರನು ಹೇಳಿದನು. ಮತ್ತು,

**ಆಗಮಿಷ್ಯತಿ ಸಾ ಕಾಮಂ ಗೃಹಂ ತೇ ವರವರ್ಣಿನೀ ।**
**ಅತ್ರೈವ ಸಂಸ್ಥಿತಾ ಬಾಲಾ ಕಾ ತೇ ಹಾನಿರಿಹಾನಘ ॥೨೦॥**

ಎಲೈ ದೋಷರಹಿತನಾದ ಗುರುವೇ, ಉತ್ತಮವಾದ ದೇಹಕಾಂತಿಯುಳ್ಳ ಆ ತಾರೆಯು ತನ್ನ ಇಚ್ಛಾನುಸಾರವಾಗಿ ನಿನ್ನ ಮನೆಗೆ ಬರುತ್ತಾಳೆ. ಆದರೆ ಇಲ್ಲಿಯೇ ಕೆಲವು ದಿವಸಗಳು ಇರುವುದರಿಂದ ನಿನಗೇನು ತೊಂದರೆಯು ?

**ಇಚ್ಛಯಾ ಸಂಸ್ಥಿತಾ ಚಾತ್ರ ಸುಖಕಾಮಾರ್ಥಿನೀ ಹಿ ಸಾ ।**
**ದಿನಾನಿ ಕತಿಚಿತ್ಸ್ಥಿತ್ವಾ ಸ್ವೇಚ್ಛಯಾ ಚಾಗಮಿಷ್ಯತಿ ॥೨೧॥**

ಕಾಮಸುಖವನ್ನು ಅನುಭವಿಸಬೇಕೆಂದು ಅಪೇಕ್ಷಿಸುತ್ತಿರುವ ಇವಳು ಇಲ್ಲಿ ತನ್ನ ಇಚ್ಛೆಯಿಂದ ಕೂಡಿದವಳಾಗಿ ಇದ್ದಾಳೆ. ಆದುದರಿಂದ ಇಲ್ಲಿ ಕೆಲವು ದಿವಸಗಳು ಇದ್ದು ಅನಂತರ ಅವಳ ಇಚ್ಛೆಬಂದಾಗ ನಿನ್ನ ಮನೆಗೆ ಬರುತ್ತಾಳೆ.

**ತ್ವಯೈವೋದಾಹೃತಂ ಪೂರ್ವಂ ಧರ್ಮಶಾಸ್ತ್ರಮತಂ ತಥಾ ।**
**ನ ಸ್ತ್ರೀ ದುಷ್ಯತಿ ಚಾರೇಣ ನ ವಿಪ್ರೋ ವೇದಕರ್ಮಣಾ ॥೨೨॥**

ಎಲೈ ಗುರುವೇ, ನೀನೇ ಬಾರ್ಹಸ್ಪತ್ಯಮತವನ್ನು ವಿವರಿಸಿರುವ ಗ್ರಂಥದಲ್ಲಿ ಪ್ರತಿಮಾಸದಲ್ಲಿಯೂ ರಜಸ್ವಲೆಯಾಗುವ ಸ್ತ್ರೀಯರಿಗೆ ಅವರು ಮಾಡಿದ ಪಾಪದ ಲೇಪವು ಇಲ್ಲವು ಮತ್ತು ವೇದಾಧ್ಯಯನಮಾಡುವ ಬ್ರಾಹ್ಮಣನಿಗೆ ಪಾಪದ ಸಂಪರ್ಕವಿಲ್ಲವು ಎಂಬುದನ್ನು ಹೇಳಿದ್ದೀಯೆ. ಅಲ್ಲದೆ, " ಪ್ರಾಯಶ್ಚಿತ್ತಂ ಭವೇತ್ ಸ್ತ್ರೀಣಾಂ ಯನ್ಮಾಸೇ ರಜಸಶ್ಚ್ಯುತಿಃ " ಎಂಬುದಾಗಿ ಧರ್ಮಶಾಸ್ತ್ರವೂ ಇದೆ.

**ಇತ್ಯುಕ್ತಶ್ಶಶಿನಾ ತತ್ರ ಗುರುರತ್ಯಂತದುಃಖಿತಃ ।**
**ಜಗಾಮ ಸ್ವಗೃಹಂ ತೂರ್ಣಂ ಚಿಂತಾವಿಷ್ಟಃ ಸ್ಮರಾತುರಃ ॥೨೩॥**

ಹೀಗೆ ಚಂದ್ರನು ಬೃಹಸ್ಪತಿಯನ್ನು ಕುರಿತು ಹೇಳಿದುದರಿಂದ ಗುರುವು ಬಹಳ ದುಃಖವುಳ್ಳವನೂ, ಚಿಂತೆಯಿಂದಲೂ, ಕಾಮಬಾಧೆಯಿಂದಲೂ ಸಂಕಟಪಡುವವನೂ ಆಗಿ ಶೀಘ್ರವಾಗಿ ತನ್ನ ಮನೆಗೆ ಹೊರಟುಹೋದನು.

**ದಿನಾನಿ ಕತಿಚಿತ್ತತ್ರ ಸ್ಥಿತ್ವಾ ಚಿಂತಾತುರೋ ಗುರುಃ ।**
**ಯಯಾವಥ ಗೃಹಂ ತಸ್ಯ ತ್ವರಿತಶ್ಚೌಷಧೀಪತೇಃ ॥೨೪॥**

ತನ್ನ ಮನೆಯಲ್ಲಿ ಕೆಲವು ದಿವಸಗಳನ್ನು ಕಳೆದು ಪುನಃ ಚಿಂತೆಯಿಂದ ಕೂಡಿದ ಗುರುವು ವನಸ್ಪತಿಗಳಿಗೆ ಅಧಿಪತಿಯಾದ ಆ ಚಂದ್ರನ ಮನೆಗೆ ತಿರುಗಿ ಹೋದನು.

**ಸ್ಥಿತಃ ಕ್ಷತ್ತ್ರಾ ನಿಷಿದ್ಧೋಽಸೌ ದ್ವಾರದೇಶೇ ರುಷಾನ್ವಿತಃ ।**
**ನಾಜಗಾಮ ಶಶೀ ತತ್ರ ಚುಕೋಪಾತಿ ಬೃಹಸ್ಪತಿಃ ॥೨೫॥**

ಹೀಗೆ ಚಂದ್ರನ ಮನೆಗೆ ಹೋದ ಕೋಪಗೊಂಡಿದ್ದ ಗುರುವನ್ನು ಬಾಗಿಲನ್ನು ಕಾಯುವವನು ತಡೆಯಲು ಅವನು ಅಲ್ಲಿಯೇ ನಿಂತನು. ಚಂದ್ರನೂ ಅಲ್ಲಿಗೆ

ಇವನನ್ನು ನೋಡಲು ಬರಲಿಲ್ಲ. ಇದರಿಂದ ಮೊದಲೇ ಕೋಪಗೊಂಡಿದ್ದ ಬೃಹಸ್ಪತಿಗೆ ಮತ್ತೂ ಕೋಪವು ಹೆಚ್ಚಾಯಿತು.

**ಅಯಂ ಮೇ ಶಿಷ್ಯತಾಂ ಯಾತೋ ಗುರುಪತ್ನೀಂ ತು ಮಾತರಂ ।**
**ಜಗ್ರಾಹ ಬಲತೋಽಧರ್ಮೀ ಶಿಕ್ಷಣೀಯೋ ಮಯಾಧುನಾ ॥೨೬॥**

ನನಗೆ ಶಿಷ್ಯನಾದ ಇವನು ತಾಯಿಗೆ ಸಮಾನಳಾದ ಗುರುವಿನ ಹೆಂಡತಿಯನ್ನು ಬಲಾತ್ಕಾರವಾಗಿ ಸ್ವೀಕರಿಸಿದ್ದಾನೆ. ಆದುದರಿಂದ ಧರ್ಮಹೀನನೂ ಪಾಪಕಾರಿಯೂ ಆದ ಇವನಿಗೆ ಈಗ ನಾನು ಶಿಕ್ಷೆಯನ್ನು ಮಾಡಬೇಕಾಗಿದೆ.

**ಉವಾಚ ವಾಚಂ ಕೋಪಾತ್ತು ದ್ವಾರದೇಶೇ ಸ್ಥಿತೋ ಬಹಿಃ ।**
**ಕಿಂ ಶೇಷೇ ಭವನೇ ಮಂದ ಪಾಪಾಚಾರ ಸುರಾಧಮ ॥೨೭॥**

**ದೇಹಿ ಮೇ ಕಾಮಿನೀಂ ಶೀಘ್ರಂ ನೋ ಚೇಚ್ಛಾಪಂ ದದಾಮ್ಯಹಂ ।**
**ಕರೋಮಿ ಭಸ್ಮಸಾನ್ನೂನಂ ನ ದದಾಸಿ ಪ್ರಿಯಾಂ ಮಮ ॥೨೮॥**

ಎಂದು ಯೋಚಿಸಿ ಬಾಗಿಲಿನ ಹೊರಭಾಗದಲ್ಲಿ ನಿಂತಿದ್ದ ಕೋಪಾವಿಷ್ಟನಾದ ಗುರುವು ಈ ರೀತಿಯಾಗಿ ಹೇಳಿದನು. ದಡ್ಡನೂ ಕೆಟ್ಟ ನಡತೆಯುಳ್ಳವನೂ, ದೇವತೆಗಳಲ್ಲೆಲ್ಲಾ ಬಹಳ ನೀಚನೂ ಆದ ಚಂದ್ರನೇ, ಮನೆಯಲ್ಲಿ ಸುಮ್ಮನೆ ಏಕೆ ಮಲಗಿಕೊಂಡಿದ್ದೀಯೆ ? ನನ್ನ ಹೆಂಡತಿಯನ್ನು ಜಾಗ್ರತೆಯಾಗಿ ನನಗೆ ಕೊಡು. ಇಲ್ಲದಿದ್ದರೆ ನಿನಗೆ ಶಾಪವನ್ನು ಕೊಟ್ಟು ಸುಟ್ಟು ಬೂದಿಮಾಡಿಬಿಡುತ್ತೇನೆ ಎಂಬುದಾಗಿ ಹೇಳಿದನು.

|| ಸೂತ ಉವಾಚ ||

**ಕ್ರೂರಾಣಿ ಚೈವಮಾದೀನಿ ಭಾಷಣಾನಿ ಬೃಹಸ್ಪತೇಃ ।**
**ಶ್ರುತ್ವಾ ದ್ವಿಜಪತಿಃ ಶೀಘ್ರಂ ನಿರ್ಗತಸ್ಸದನಾದ್ಬಹಿಃ ॥೨೯॥**

ಸೂತನು ಹೇಳುತ್ತಾನೆ—ಎಲೈ ಋಷಿಗಳಿರಾ, ಇವೇ ಮೊದಲಾದ ಬೃಹಸ್ಪತಿಯ ಕಠೋರವಾದ ಮಾತುಗಳನ್ನು ಕೇಳಿ ನಕ್ಷತ್ರಪತಿಯಾದ ಚಂದ್ರನು ತನ್ನ ಮನೆಯಿಂದ ಹೊರಕ್ಕೆ ಬಂದನು. (ಇಲ್ಲಿ ಚಂದ್ರನ ಅಭಿಪ್ರಾಯವೇನೆಂದರೆ, ಈ ಸಮಯದಲ್ಲಿ ಗುರುವಿಗೆ ನಿರಾಶೆಯನ್ನುಂಟುಮಾಡಬೇಕು, ಹಾಗಿಲ್ಲದಿದ್ದರೆ ಬೃಹಸ್ಪತಿಗೆ ಬಂದಿರುವ ಕೋಪವು ಶಾಂತವಾಗುವುದಿಲ್ಲ. ಹಾಗಾಗದಿದ್ದಲ್ಲಿ ಆಗಾಗ್ಗೆ ಹೀಗೆ

ತೊಂದರೆಕೊಡುತ್ತಿದ್ದರೆ ನನಗೆ ಸುಖವಿಲ್ಲ. ಆದುದರಿಂದ ಹೇಗಾದರೂ ಇವನಿಗೆ ನಿರಾಶೆಯನ್ನುಂಟುಮಾಡಬೇಕು ಎಂದು ಯೋಚಿಸಿ ಮನೆಯೊಳಗಿನಿಂದ ಶೀಘ್ರವಾಗಿ ಹೊರಗೆ ಬಂದನೆಂದಭಿಪ್ರಾಯವು.)

**ತಮುವಾಚ ಹಸನ್ಸೋಮಃ ಕಿಮಿದಂ ಬಹು ಭಾಷಸೇ ।**
**ನ ತೇ ಯೋಗ್ಯಾಸಿತಾಪಾಂಗೀ ಸರ್ವಲಕ್ಷಣಸಂಯುತಾ ॥೩೦॥**

**ಕುರೂಪಾಂ ಚ ಸ್ವಸದೃಶೀಂ ಗೃಹಾಣಾನ್ಯಾಂ ಸ್ತ್ರಿಯಂ ದ್ವಿಜ ।**
**ಭಿಕ್ಷುಕಸ್ಯ ಗೃಹೇ ಯೋಗ್ಯಾ ನೇದೃಶೀ ವರವರ್ಣಿನೀ ॥೩೧॥**

ಈ ರೀತಿಯಾಗಿ ಕಠಿನವಾದ ಮಾತನ್ನಾಡಿದ ಬೃಹಸ್ಪತಿಯನ್ನು ಕುರಿತು ಚಂದ್ರನು ನಗುತ್ತಾ ಈರೀತಿ ಹೇಳಿದನು. ಎಲೈ ಬೃಹಸ್ಪತಿಯೇ, ನೀನು ಅನುಪಯುಕ್ತವಾದ ಹೆಚ್ಚುಮಾತನ್ನಾಡುತ್ತಿದ್ದೀಯೆ. ಸ್ತ್ರೀಯರಿಗೆ ಇರಬೇಕಾದ ಎಲ್ಲ ಲಕ್ಷಣಗಳಿಂದ ಕೂಡಿದ, ಉತ್ತಮದೇಹಕಾಂತಿಯುಳ್ಳ ಕುಡಿನೋಟದಿಂದೊಡಗೂಡಿ ಶೋಭಿಸುವ ಈ ಸುಂದರಿಯು ಭಿಕ್ಷುಕನಾದ ನಿನ್ನಲ್ಲಿರಲು ಯೋಗ್ಯಳಲ್ಲ. ಆದುದರಿಂದ ನಿನಗೆ ಅನುರೂಪಳಾಗಿರುವ ಕುರೂಪಿಣಿಯಾದ ಬೇರೊಬ್ಬಳನ್ನು ಸ್ವೀಕಾರಮಾಡು, ಹೋಗು.

**ರತಿಃ ಸ್ವಸದೃಶೇ ಕಾಂತೇ ನಾರ್ಯಾಃ ಕಿಲ ನಿಗದ್ಯತೇ ।**
**ತ್ವಂ ನ ಜಾನಾಸಿ ಮಂದಾತ್ಮನ್ಕಾಮಶಾಸ್ತ್ರವಿನಿರ್ಣಯಂ ॥೩೨॥**

ಕಾಮಶಾಸ್ತ್ರದಲ್ಲಿ, ಸ್ತ್ರೀಯರಿಗೆ ತಮಗೆ ಅನುರೂಪನಾದ ಪತಿಯಲ್ಲಿ ಮಾತ್ರ ಪ್ರೀತಿಯುಂಟಾಗುವುದೆಂದು ಹೇಳಲ್ಪಟ್ಟಿದೆ. ಕಾಮಶಾಸ್ತ್ರದ ಈ ಸಿದ್ಧಾಂತವನ್ನು ಮಂದಬುದ್ಧಿಯುಳ್ಳ ನೀನು ತಿಳಿಯದೆ ಇದ್ದೀಯೆ.

**ಯಥೇಷ್ಟಂ ಗಚ್ಛ ದುರ್ಬುದ್ಧೇ ನಾಹಂ ದಾಸ್ಯಾಮಿ ಕಾಮಿನೀಂ ।**
**ಯಚ್ಛಕ್ಯಂ ತತ್ಕುರು ಕಾಮಂ ನ ದೇಯಾ ವರವರ್ಣಿನೀ ॥೩೩॥**

ಎಲೈ ದುಷ್ಟಬುದ್ಧಿಯುಳ್ಳವನೇ ನಾನು ಈ ಸ್ತ್ರೀಯನ್ನು ನಿನಗೆ ಕೊಡುವುದಿಲ್ಲ. ನಿನ್ನಿಂದ ಏನು ಪ್ರತೀಕಾರವನ್ನು ಮಾಡಲು ಸಾಧ್ಯವೋ ಅದನ್ನು ಮಾಡು. ನಾನಂತೂ ಇವಳನ್ನು ಕೊಡುವುದಿಲ್ಲವು.

**ಕಾಮಾರ್ತಸ್ಯ ಚ ತೇ ಶಾಪೋ ನ ಮಾಂ ಬಾಧಿತುಮರ್ಹತಿ ।**
**ನಾಹಂ ದದೇ ಗುರೋ ಕಾಂತಾಂ ಯಥೇಚ್ಛಸಿ ತಥಾ ಕುರು ॥೩೪॥**

ಕಾಮಪೀಡಿತನಾದ ನಿನ್ನ ಶಾಪವು ನನ್ನನ್ನು ಏನೂ ಮಾಡಲಾರದು. ಆದುದರಿಂದ ನೀನು ಶಾಪವನ್ನು ಕೊಡುತ್ತೇನೆಂದು ಹೆದರಿಸಬೇಡ. ನಾನಂತೂ ಈ ಈ ಸ್ತ್ರೀಯನ್ನು ನಿನಗೆ ಕೊಡುವುದಿಲ್ಲ. ನಿನ್ನ ಇಷ್ಟಬಂದ ಹಾಗೆ ಮಾಡು ಎಂಬುದಾಗಿ ಚಂದ್ರನು ಹೇಳಿದನು.

॥ ಸೂತ ಉವಾಚ ॥

**ಇತ್ಯುಕ್ತಶ್ಶಶಿನಾ ಚೇಜ್ಯಶ್ಚಿಂತಾಮಾಪ ರುಷಾನ್ವಿತಃ ।**
**ಜಗಾಮ ತರಸಾ ಸದ್ಮ ಕ್ರೋಧಯುಕ್ತಃ ಶಚೀಪತೇಃ ॥೩೫॥**

ಸೂತನು ಹೇಳಿದನು—ಈ ರೀತಿಯಾಗಿ ಚಂದ್ರನು ಹೇಳಿದ ಅನಂತರದಲ್ಲಿ ಗುರುವು ಕೋಪಗೊಂಡು ಬಹಳ ಚಿಂತೆಯುಳ್ಳವನಾದನು. ಅನಂತರದಲ್ಲಿ ಸಿಟ್ಟಿನಿಂದ ಕೂಡಿದ ಬೃಹಸ್ಪತಿಯು ಇಂದ್ರನ ಮನೆಗೆ ಜಾಗ್ರತೆಯಾಗಿ ಹೋದನು.

**ದೃಷ್ಟ್ವಾ ಶತಕ್ರತುಸ್ತತ್ರ ಗುರುಂ ದುಃಖಾತುರಂ ಸ್ಥಿತಂ ।**
**ಪಾದ್ಯಾರ್ಘ್ಯಾಚಮನೀಯಾದ್ಯೈಃ ಪೂಜಯಿತ್ವಾ ಸುಸಂಸ್ಥಿತಃ ॥೩೬॥**

ದುಃಖಪೀಡಿತನಾಗಿರುವ ಗುರುವನ್ನು ನೋಡಿ ಇಂದ್ರನು ಪಾದ್ಯ ಅರ್ಘ್ಯ ಆಚಮನೀಯ ಇವೇ ಮೊದಲಾದ ಪೂಜಾ ಸಾಮಗ್ರಿಗಳಿಂದ ಸತ್ಕರಿಸಿ ಉಚಿತಾಸನದಲ್ಲಿ ಕೂರಿಸಿ ತಾನೂ ಕುಳಿತುಕೊಂಡನು.

**ಪಪ್ರಚ್ಛ ಪರಮೋದಾರಸ್ತಂ ತಥಾವಸ್ಥಿತಂ ಗುರುಂ ।**
**ಕಾ ಚಿಂತಾ ತೇ ಮಹಾಭಾಗ ಶೋಕಾರ್ತೋಽಸಿ ಮಹಾಮುನೇ ॥೩೭॥**

ಅನಂತರದಲ್ಲಿ ಬಹಳ ಉದಾರವಾದ ಸ್ವಭಾವವುಳ್ಳ ಇಂದ್ರನು ಆ ರೀತಿ ವಿಷಣ್ಣವದನನಾಗಿ ಕುಳಿತಿರುವ ಗುರುವನ್ನು ಕುರಿತು, ಪುಣ್ಯಶಾಲಿಯೂ ದೊಡ್ಡ ಋಷಿಯೂ ಆದ ನೀನು ಶೋಕಪೀಡಿತನಾಗಿರುವಂತೆ ಕಾಣುತ್ತೀಯೆ. ನಿನಗೆ ಏನು ಚಿಂತೆಯು ಪ್ರಾಪ್ತವಾಗಿರುವುದು ?

**ಕೇನಾಪಮಾನಿತೋಽಸಿ ತ್ವಂ ಮಮ ರಾಜ್ಯೇ ಗುರುಶ್ಚ ಮೇ ।**
**ತ್ವದಧೀನಮಿದಂ ಸರ್ವಂ ಸೈನ್ಯಂ ಲೋಕಾಧಿಪೈಸ್ಸಹ ॥೩೮॥**

**ಬ್ರಹ್ಮಾ ವಿಷ್ಣುಸ್ತಥಾ ಶಂಭುರ್ಯೇ ಚಾನ್ಯೇ ದೇವಸತ್ತಮಾಃ ।**
**ಕರಿಷ್ಯಂತಿ ಚ ಸಾಹಾಯ್ಯಂ ಕಾ ಚಿಂತಾ ವದ ಸಾಂಪ್ರತಂ ॥೩೯॥**

ನನ್ನ ರಾಜ್ಯದಲ್ಲಿ ನನಗೆ ಗುರುವಾದ ನಿನಗೆ ಯಾರಾದರೂ ಅವಮಾನ ಮಾಡಿದರೇ ? ನನ್ನಲ್ಲಿರುವ ಲೋಕಪಾಲಕರಿಂದ ಸಹಿತವಾದ ಸೈನ್ಯ ಮೊದಲಾದು ವೆಲ್ಲವೂ ನಿನ್ನ ಅಧೀನವಾಗಿವೆ. ಅಲ್ಲದೆ, ಬ್ರಹ್ಮ, ವಿಷ್ಣು, ಶಂಭು ಇವರುಗಳೂ ಮತ್ತು ಇತರ ದೇವಶ್ರೇಷ್ಠರು ಯಾರು ಯಾರು ಇದ್ದಾರೆಯೋ ಅವರೆಲ್ಲರೂ ನಿನಗೆ ಸಹಾಯಮಾಡುತ್ತಾರೆ. ಆದುದರಿಂದ ಈಗ ನಿನಗೆ ಪ್ರಾಪ್ತವಾಗಿರುವ ಚಿಂತೆಯು ಯಾವುದು ಹೇಳು ?

॥ ಗುರುರುವಾಚ ॥

**ಶಶಿನಾಽಪಹೃತಾ ಭಾರ್ಯಾ ತಾರಾ ಮಮ ಸುಲೋಚನಾ ।**
**ನ ದದಾತಿ ಸ ದುಷ್ಟಾತ್ಮಾ ಪ್ರಾರ್ಥಿತೋಽಪಿ ಪುನಃ ಪುನಃ ॥೪೦॥**

ಇಂದ್ರನು ಈ ರೀತಿಯಾಗಿ ಕೇಳಿದ ಮೇಲೆ ಗುರುವು ಇಂದ್ರನನ್ನು ಕುರಿತು ಹೇಳಿದನು—ಎಲೈ ಇಂದ್ರನೇ ಒಳ್ಳೆಯ ಕಣ್ಣುಗಳಿಂದ ಶೋಭಿಸುವ ನನ್ನ ಹೆಂಡತಿ ಯಾದ ತಾರೆಯನ್ನು ಚಂದ್ರನು ಅಪಹರಿಸಿದ್ದಾನೆ. ಪದೇ ಪದೇ ಹೋಗಿ ಪ್ರಾರ್ಥಿಸಿ ದರೂ, ದುಷ್ಟಸ್ವಭಾವವುಳ್ಳ ಆ ಚಂದ್ರನು ಅವಳನ್ನು ನನಗೆ ಕೊಡುವುದಿಲ್ಲ.

**ಕಿಂ ಕರೋಮಿ ಸುರೇಶಾನ ತ್ವಮೇವ ಶರಣಂ ಮಮ ।**
**ಸಾಹಾಯ್ಯಂ ಕುರು ದೇವೇಶ ದುಃಖಿತೋಽಸ್ಮಿ ಶತಕ್ರತೋ ॥೪೧॥**

ನೂರು ಯಜ್ಞಗಳನ್ನು ಮಾಡಿರುವ, ದೇವತೆಗಳಿಗೆ ಒಡೆಯನಾದ ಇಂದ್ರನೇ, ಈಗ ನಾನೇನನ್ನು ಮಾಡಲಿ ? ಹೀಗೆ ದುಃಖ ಹೊಂದಿರುವ ನನಗೆ ನೀನೇ ಗತಿಯು. ನೀನು ನನಗೆ ಸಹಾಯವನ್ನು ಮಾಡು ಎಂದು ಕೇಳಿದನು.

॥ ಇಂದ್ರ ಉವಾಚ ॥

**ಮಾ ಶೋಕಂ ಕುರು ಧರ್ಮಜ್ಞ ದಾಸೋಽಸ್ಮಿ ತವ ಸುವ್ರತ ।**
**ಆನಯಿಷ್ಯಾಮ್ಯಹಂ ನೂನಂ ಭಾರ್ಯಾಂ ತವ ಮಹಾಮತೇ ॥೪೨॥**

ಗುರುವಿನ ಮಾತನ್ನು ಕೇಳಿ ಇಂದ್ರನು ಹೇಳುತ್ತಾನೆ—ಧರ್ಮವನ್ನು ತಿಳಿದವನೂ, ನಿಯಮಗಳನ್ನು ಪಾಲಿಸುವವನೂ ಆದ ಗುರುವೇ. ಇದಕ್ಕಾಗಿ ನೀನು ದುಃಖಿಸಬೇಡ. ನೀನು ನನಗೆ ಗುರುವಾದುದರಿಂದ ನಾನು ನಿನಗೆ ದಾಸನಾಗಿದ್ದೇನೆ. ಎಲೈ ಬಹಳ ಬುದ್ಧಿವಂತನೇ, ನಾನು ನಿನ್ನ ಹೆಂಡತಿಯನ್ನು ನಿಶ್ಚಯವಾಗಿಯೂ ಕರೆತರುತ್ತೇನೆ.

**ಪ್ರೇಷಿತೇ ಚೇನ್ಮಯಾ ದೂತೇ ನ ದಾಸ್ಯತಿ ಮದಾಕುಲಃ ।**
**ತತೋ ಯುದ್ಧಂ ಕರಿಷ್ಯಾಮಿ ದೇವಸೈನ್ಯೈಃ ಸಮಾವೃತಃ ॥೪೩॥**

ನಾನು ಮೊದಲು ಒಬ್ಬ ದೂತನನ್ನು ಕಳುಹಿಸುತ್ತೇನೆ. ಆಗಲೂ ಆ ಕೊಬ್ಬಿದ ಚಂದ್ರನು ಅವಳನ್ನು ಕಳುಹಿಸಿಕೊಡದಿದ್ದಲ್ಲಿ, ದೇವಸೈನ್ಯದಿಂದ ಕೂಡಿದವನಾಗಿ ಅವನೊಡನೆ ಆಮೇಲೆ ಯುದ್ಧವನ್ನು ಮಾಡುತ್ತೇನೆ.

**ಇತ್ಯಾಶ್ವಾಸ್ಯ ಗುರುಂ ಶಕ್ರೋ ದೂತಂ ವಕ್ತುಂ ವಿಚಕ್ಷಣಂ ।**
**ಪ್ರೇಷಯಾಮಾಸ ಸೋಮಾಯ ವಾರ್ತಾಶಂಸಿನಮುದ್ಧತಂ ॥೪೪॥**

ಈ ರೀತಿಯಾಗಿ ಇಂದ್ರನು ಗುರುವನ್ನು ಸಮಾಧಾನಪಡಿಸಿ, ಮಾತನಾಡುವುದರಲ್ಲಿ ಅತಿಚತುರನಾದ ಒಬ್ಬ ದೂತನನ್ನ ಚಂದ್ರನ ಹತ್ತಿರಕ್ಕೆ ಈ ಸಮಾಚಾರವನ್ನು ತಿಳಿಸುವುದಕ್ಕಾಗಿ ಕಳುಹಿಸಿದನು.

**ಸ ಗತ್ವಾ ಶಶಿಲೋಕಂ ತು ತ್ವರಿತಃ ಸುವಿಚಕ್ಷಣಃ ।**
**ಉವಾಚ ವಚನೇನೈವ ವಚನಂ ರೋಹಿಣೀಪತಿಂ ॥೪೫॥**

ಬುದ್ಧಿವಂತನಾದ ಆ ದೂತನು ಜಾಗ್ರತೆಯಾಗಿ ಚಂದ್ರಲೋಕಕ್ಕೆ ಹೋಗಿ ಅಲ್ಲಿ ಚಂದ್ರನನ್ನು ಕುರಿತು ಈರೀತಿಯಾಗಿ ಇಂದ್ರನ ಮಾತಿನಿಂದಲೇ ಹೇಳಿದನು.

**ಪ್ರೇಷಿತೋಽಹಂ ಮಹಾಭಾಗ ಶಕ್ರೇಣ ತ್ವಾ ವಿವಕ್ಷಯಾ ।**
**ಕಥಿತಂ ಪ್ರಭುಣಾ ಯಚ್ಚ ತದ್ಬ್ರವೀಮಿ ಮಹಾಮತೇ ॥೪೬॥**

ಎಲೈ ಪುಣ್ಯವಂತನೇ, ಇಂದ್ರನುನನ್ನನ್ನು ನಿನ್ನ ಹತ್ತಿರಕ್ಕೆ ಈ ಮಾತುಗಳನ್ನು ಹೇಳುವುದಕ್ಕಾಗಿ ಕಳುಹಿಸಿರುತ್ತಾನೆ. ಎಲೈ ಬುದ್ಧಿಶಾಲಿಯೇ, ಒಡೆಯನಾದ ಇಂದ್ರನು ಯಾವ ಮಾತನ್ನು ಹೇಳಿರುತ್ತಾನೆಯೋ ಅದರಂತೆಯೇ ನಿನಗೆ ಹೇಳುತ್ತೇನೆ ಕೇಳು.

**ಧರ್ಮಜ್ಞೋಽಸಿ ಮಹಾಭಾಗ ನೀತಿಂ ಜಾನಾಸಿ ಸುವ್ರತ ।**
**ಅತ್ರಿಃ ಪಿತಾ ತೇ ಧರ್ಮಾತ್ಮಾ ನ ನಿಂದ್ಯಂ ಕರ್ತುಮರ್ಹಸಿ ॥೪೭॥**

ಪುಣ್ಯಶಾಲಿಯಾದ ಚಂದ್ರನೇ, ನೀನು ಧರ್ಮವನ್ನೆಲ್ಲಾ ತಿಳಿದುಕೊಂಡಿರುತ್ತೀಯೆ. ಅಲ್ಲದೆ ನೀತಿಶಾಸ್ತ್ರವನ್ನೂ ತಿಳಿದಿರುವೆ. ಮತ್ತು ಧರ್ಮಿಷ್ಠರಾದ ಅತ್ರಿ ಋಷಿಗಳ ಮಗನೂ ಆಗಿದ್ದೀಯೆ. ಆದುದರಿಂದ ನೀನು ಇಂಥ ನೀಚವಾದ ಕೆಲಸವನ್ನು ಮಾಡಬಾರದು. (ತಿಳಿದೂ ಕೆಟ್ಟಕೆಲಸವನ್ನು ಮಾಡುವುದು ಬಹಳ ಪಾಪವನ್ನುಂಟುಮಾಡುವುದೆಂದು ತಾತ್ಪರ್ಯವು.)

**ಭಾರ್ಯಾ ರಕ್ಷ್ಯಾ ಸರ್ವಭೂತೈರ್ಯಥಾಶಕ್ತಿ ಹ್ಯತಂದ್ರಿತೈಃ ।**
**ತದರ್ಥೇ ಕಲಹಃ ಕಾಮಂ ಭವಿತಾ ನಾತ್ರ ಸಂಶಯಃ ॥೪೮॥**

ಲೋಕದಲ್ಲಿ ಎಲ್ಲ ಪ್ರಾಣಿಗಳೂ ತಮ್ಮ ತಮ್ಮ ಹೆಂಡತಿಯರನ್ನು ತಮಗೆ ಶಕ್ತಿಯಿರುವಮಟ್ಟಿಗೆ ಜಾಗರೂಕತೆಯಿಂದ ಕಾಪಾಡಬೇಕಾದುದು ಅವರವರ ಧರ್ಮವು. ಆ ಕಾರಣದಿಂದ ಕಲಹವೂ ಸಂಭವಿಸುವುದುಂಟು. ಇದರಲ್ಲಿ ಸಂದೇಹವಿಲ್ಲವು.

**ಯಥಾ ತವ ತಥಾ ತಸ್ಯ ಯತ್ನಃ ಸ್ಯಾದ್ದಾರರಕ್ಷಣೇ ।**
**ಆತ್ಮವತ್ಸರ್ವಭೂತಾನಿ ಚಿಂತಯ ತ್ವಂ ಸುಧಾನಿಧೇ ॥೪೯॥**

ಎಲೈ ಅಮೃತಕ್ಕೆ ನಿಧಿಯಾಗಿರುವ ಚಂದ್ರನೇ, ನಿನಗೆ ನಿನ್ನ ಪತ್ನಿಯನ್ನು ಕಾಪಾಡುವುದರಲ್ಲಿ ಹೇಗೆ ಆದರವಿದೆಯೋ ಅದರಂತೆಯೇ ಗುರುವಿಗೂ ಇದೆ. ಆದುದರಿಂದ ಎಲ್ಲ ಪ್ರಾಣಿಗಳನ್ನೂ ನಿನ್ನಂತೆಯೇ ಎಂಬುದಾಗಿ ತಿಳಿ.

**ಅಷ್ಟಾವಿಂಶತಿಸಂಖ್ಯಾಸ್ತೇ ಕಾಮಿನ್ಯೋ ದಕ್ಷಜಾಃ ಶುಭಾಃ ।**
**ಗುರುಪತ್ನೀಂ ಕಥಂ ಭೋಕ್ತುಂ ತ್ವಮಿಚ್ಛಸಿ ಸುಧಾನಿಧೇ ॥೫೦॥**

ಹೇ ಚಂದ್ರನೇ, ನಿನಗೆ ಅನುಭವಿಸಲು ದಕ್ಷನ ಪುತ್ರಿಯರಾದ, ಸುಂದರಿಯರಾದ ಇಪ್ಪತ್ತೆಂಟು ಜನ ಶೋಭನಾಂಗಿಯರಿರುವರು. ಹೀಗಿರುವಾಗ ಗುರುಪತ್ನಿಯನ್ನು ಭೋಗಿಸಲು ನಿನಗೆ ಇಚ್ಛೆಯು ಹೇಗುಂಟಾಯಿತು ?

**ಸ್ವರ್ಗೇ ಸದಾ ವಸಂತ್ಯೇತಾ ಮೇನಕಾದ್ಯಾ ಮನೋರಮಾಃ ।**
**ಭುಂಕ್ಷ್ವ ತಾಃ ಸ್ವೇಚ್ಛಯಾ ಕಾಮಂ ಮುಂಚ ಪತ್ನೀಂ ಗುರೋರಪಿ ॥೫೧॥**

ದಕ್ಷನ ಪುತ್ರಿಯರಲ್ಲದೆ ಸ್ವರ್ಗದಲ್ಲಿ ಮೇನಕೆಯೇ ಮೊದಲಾದ ಸುಂದರ ಸ್ತ್ರೀಯರು ವಾಸವಾಗಿದ್ದಾರೆ. ಅವರನ್ನು ನಿನ್ನ ಮನಸ್ಸು ಬಂದಹಾಗೆ ಅನುಭವಿಸು. ಆದರೆ ಗುರುವಿನ ಪತ್ನಿಯಾದ ತಾರೆಯನ್ನು ಬಿಟ್ಟುಬಿಡು.

**ಈಶ್ವರಾ ಯದಿ ಕುರ್ವಂತಿ ಜುಗುಪ್ಸಿತಮಹಂತಯಾ ।**
**ಅಜ್ಞಾಸ್ತದನುವರ್ತಂತೇ ತದಾ ಧರ್ಮಕ್ಷಯೋ ಭವೇತ್ ॥೫೨॥**

ಲೋಕದಲ್ಲಿ ಯಜಮಾನರಾದ ದೊಡ್ಡವರೇ ಅಹಂಕಾರದಿಂದ ಕೂಡಿದವರಾಗಿ ಪಾಪಕೆಲಸವನ್ನು ಮಾಡಿದರೆ, ಏನೂ ತಿಳಿಯದ ಪಾಮರರು ಅವರನ್ನೇ ಅನುಸರಿಸುತ್ತಾರೆ. ಅದರಿಂದ ಧರ್ಮವು ಹಾಳಾಗುತ್ತದೆ.

**ತಸ್ಮಾನ್ಮುಂಚ ಮಹಾಭಾಗ ಗುರೋಃ ಪತ್ನೀಂ ಮನೋರಮಾಂ ।**
**ಕಲಹಸ್ತ್ವನ್ನಿಮಿತ್ತೋಽದ್ಯ ಸುರಾಣಾಂ ನ ಭವೇದ್ಯಥಾ ॥೫೩॥**

ಎಲೈ ಪುಣ್ಯಶಾಲಿಯಾದ ಚಂದ್ರನೇ, ಆದುದರಿಂದ ಸುಂದರಳಾದ ಗುರುವಿನ ಪತ್ನಿಯನ್ನು ಬಿಡು. ನಿನ್ನ ಈ ಕಾರಣದಿಂದ ದೇವತೆಗಳಲ್ಲಿ ಪರಸ್ಪರ ಜಗಳವುಂಟಾಗದಿರಲಿ. (ಅಂದರೆ ನೀನು ತಾರೆಯನ್ನು ಕೊಡದಿದ್ದಲ್ಲಿ, ಇಂದ್ರನು ಯುದ್ಧಕ್ಕೆ ಬರುತ್ತಾನೆ. ಆಗ ದೇವತೆಗಳಲ್ಲಿ ಪರಸ್ಪರ ಕಲಹವುಂಟಾಗುವುದೆಂದಭಿಪ್ರಾಯವು.)

॥ ಸೂತ ಉವಾಚ ॥

**ಸೋಮಃ ಶಕ್ರವಚಃ ಶ್ರುತ್ವಾ ಕಿಂಚಿತ್ಕ್ರೋಧಸಮಾಕುಲಃ ।**
**ಭಂಗ್ಯಾ ಪ್ರತಿವಚಃ ಪ್ರಾಹ ಶಕ್ರದೂತಂ ತದಾ ಶಶೀ ॥೫೪॥**

ಸೂತನು ಹೇಳಿದನು—ಈರೀತಿಯಲ್ಲಿ ದೂತನು ಹೇಳಿದ ಇಂದ್ರನ ಮಾತನ್ನು ಕೇಳಿ ಚಂದ್ರನು ಸ್ವಲ್ಪ ಕೋಪಗೊಂಡವನಾಗಿ, ಇಂದ್ರನ ದೂತನನ್ನು ಕುರಿತು ಅರ್ಥಗರ್ಭಿತವಾದ ಮಾತನ್ನು ಮುಂದೆ ಹೇಳುವರೀತಿಯಲ್ಲಿ ಹೇಳಿದನು.

॥ ಇಂದುರುವಾಚ ॥

**ಧರ್ಮಜ್ಞೋಽಸಿ ಮಹಾಬಾಹೋ ದೇವಾನಾಮಧಿಪಃ ಸ್ವಯಂ ।**
**ಪುರೋಧಾಪಿ ಚ ತೇ ತಾದೃಗ್ಯುವಯೋಸ್ಸದೃಶೀ ಮತಿಃ ॥೫೫॥**

ಚಂದ್ರನು ಹೇಳಿದನು—ಎಲೈ ಪರಾಕ್ರಮಶಾಲಿಯೇ, ನೀನು ಧರ್ಮವನ್ನು ತಿಳಿದವನಾಗಿದ್ದೀಯೆ. ಅಲ್ಲದೆ, ದೇವತೆಗಳಿಗೆಲ್ಲಾ ರಾಜನೂ ಆಗಿದ್ದೀಯೆ. ನಿನ್ನ ಪುರೋಹಿತನೂ ಅಂಥವನೇ ಆಗಿದ್ದಾನೆ. ಎಂದರೆ ಧರ್ಮವನ್ನು ತಿಳಿದವನಾಗಿದ್ದಾನೆ. ನಿಮ್ಮಿಬ್ಬರ ಬುದ್ಧಿಯೂ ಒಂದೇ ವಿಧವಾಗಿದೆ (ಗುರುವಿನಂತೆ ಶಿಷ್ಯ ಎಂದು ಭಾವವು.)

**ಪರೋಪದೇಶಕುಶಲಾ ಭವಂತಿ ಬಹವೋ ಜನಾಃ ।**
**ದುರ್ಲಭಸ್ತು ಸ್ವಯಂ ಕರ್ತಾ ಪ್ರಾಪ್ತೇ ಕರ್ಮಣಿ ಸರ್ವದಾ ॥೫೬॥**

ಲೋಕದಲ್ಲಿ ಅನೇಕಜನಗಳು, ಈ ಕೆಲಸವನ್ನು ಹೀಗೆ ಮಾಡಬೇಕು, ಹಾಗೆ ಮಾಡಬಾರದು ಎಂದು ಮುಂತಾಗಿ ಇತರರಿಗೆ ಉಪದೇಶಮಾಡುವುದರಲ್ಲಿ ಎಂದರೆ ಬುದ್ಧಿಯನ್ನು ಹೇಳುವುದರಲ್ಲಿ ಚತುರರಾಗಿರುತ್ತಾರೆ. ಆದರೆ ಸಮಯ ಒದಗಿದಾಗ ಅದರಂತೆ ತಾವೂ ನಡೆಯುವವರು ಬಹು ವಿರಳ. (ಇಲ್ಲಿ ಪರದಾರಾಪಹರಣವು ನಿಷಿದ್ಧವೆಂದು ನೀನು ನನಗೆ ಹೇಳುತ್ತೀಯೆ. ನೀನಾದರೋ ಅಹಲ್ಯೆಯನ್ನು ಸ್ವೀಕರಿಸಿದ್ದೆಯೆಂದು ಚಂದ್ರನ ಅಭಿಪ್ರಾಯವು.)

**ಬಾರ್ಹಸ್ಪತ್ಯಪ್ರಣೀತಂ ಚ ಶಾಸ್ತ್ರಂ ಗೃಹ್ಣಂತಿ ಮಾನವಾಃ ।**
**ಕೋ ವಿರೋಧೋಽತ್ರ ದೇವೇಶ ಕಾಮಯಾನಾಂ ಭಜನ್ ಸ್ತ್ರಿಯಂ ॥೫೭॥**

ಲೋಕದಲ್ಲಿ ಮನುಷ್ಯರು ಬೃಹಸ್ಪತಿಯು ರಚಿಸಿರುವ ಧರ್ಮಶಾಸ್ತ್ರವನ್ನು ಪ್ರಮಾಣವೆಂದು ಸ್ವೀಕರಿಸುತ್ತಾರೆ. ಅದರಂತೆ ನಡೆಯುತ್ತಾರೆ. ಆ ಶಾಸ್ತ್ರದಲ್ಲಿ ಯಾದರೋ ಇಚ್ಛೆಪಟ್ಟು ಬಂದಿರುವ ಅನ್ಯಸ್ತ್ರೀಯನ್ನು ಸ್ವೀಕರಿಸಬಹುದೆಂಬುದಾಗಿ ಹೇಳಿರುತ್ತದೆ. ಆದುದರಿಂದ ನನ್ನಲ್ಲಿ ಇಚ್ಛೆಪಟ್ಟು ಬಂದ ಈ ಸ್ತ್ರೀಯನ್ನು ಅನುಭವಿಸುವುದರಿಂದ ನನಗೆ ಏನು ದೋಷವು ?

**ಸ್ವಕೀಯಂ ಬಲಿನಾಂ ಸರ್ವಂ ದುರ್ಬಲಾನಾಂ ನ ಕಿಂಚನ ।**

ಲೋಕದಲ್ಲಿ ಬಲಿಷ್ಠನಾದ ಪುರುಷನಿಗೆ ಎಲ್ಲ ಪದಾರ್ಥಗಳೂ ಅವನವುಗಳೇ ಆಗುತ್ತವೆ. (ಎಂದರೆ, ಬಲವಂತನಾದವನು ಎಲ್ಲರನ್ನೂ ಸೋಲಿಸಿ ಎಲ್ಲ ವಸ್ತುಗಳನ್ನೂ ತನ್ನ ಅಧೀನವಾದವುಗಳನ್ನಾಗಿ ಮಾಡಿಕೊಳ್ಳುತ್ತಾನೆ.) ಅಶಕ್ತನಾದವನಿಗೆ ತನ್ನದಾದ ಯಾವ ವಸ್ತುವೂ ಇಲ್ಲ (ಎಂದರೆ ನಾನು ಗುರುವಿಗಿಂತಲೂ ಬಲಿಷ್ಠನಾಗಿದ್ದೇನೆ. ಆದುದರಿಂದ ತಾರೆಯು ನನ್ನವಳೇ ಹೊರತು ಗುರುವಿಗೆ ಸೇರತಕ್ಕವಳಲ್ಲವೆಂದು ಚಂದ್ರನ ಅಭಿಪ್ರಾಯವು.)

**ಸ್ವೀಯಾ ಚ ಪರಕೀಯಾ ಚ ಭ್ರಮೋಽಯಂ ಮಂದಚೇತಸಾಂ ॥೫೮॥**

ನಾನು ಮದುವೆಯಾದುದರಿಂದ ಇವಳು ನನ್ನವಳು, ಅವಳು ಮತ್ತೊಬ್ಬನವಳು ಎಂದರೆ ಪರಸ್ತ್ರೀಯು ಎಂದು ಮುಂತಾದ ವಿವೇಚನೆಯು ತಿಳಿವಳಿಕೆಯಿಲ್ಲದ ಅಲ್ಪಬುದ್ಧಿಯುಳ್ಳವರಿಗುಂಟಾಗುವ ಭ್ರಮೆಯು. (ವಿಚಾರಮಾಡಿದರೆ ಈ ಭೇದವೇ ಇಲ್ಲವೆಂದು ತಾತ್ಪರ್ಯವು.)

**ತಾರಾ ಮಯ್ಯನುರಕ್ತಾ ಚ ಯಥಾ ನ ತು ತಥಾ ಗುರೌ ।**
**ಅನುರಕ್ತಾ ಕಥಂ ತ್ಯಾಜ್ಯಾ ಧರ್ಮತೋ ನ್ಯಾಯತಸ್ತಥಾ ॥೫೯॥**

ಅಲ್ಲದೆ ತಾರೆಯು ನನ್ನಲ್ಲಿ ಹೇಗೆ ಪ್ರೀತಿಯುಳ್ಳವಳಾಗಿದ್ದಾಳೆಯೋ ಹಾಗೆ ಗುರುವಿನಲ್ಲಿ ಪ್ರೀತಿಯುಳ್ಳವಳಾಗಿಲ್ಲ. ಹೀಗಿರುವಾಗ ನನ್ನಲ್ಲಿ ಅನುರಕ್ತಳಾದ ಇವಳನ್ನು ಹೇಗೆ ಬಿಡಲಿ? ಅವಳನ್ನು ಬಿಡುವುದಾದರೋ ಧರ್ಮಕ್ಕೂ ನ್ಯಾಯಕ್ಕೂ ವಿರೋಧವಾದುದು.

**ಗೃಹಾರಂಭಸ್ತು ರಕ್ತಾಯಾಂ ವಿರಕ್ತಾಯಾಂ ಕಥಂ ಭವೇತ್ ।**
**ವಿರಕ್ತೇಯಂ ತದಾ ಜಾತಾ ಚಕಮೇಽನುಜಕಾಮಿನೀಂ ॥೬೦॥**

ಯಾವಳು ಯಾವನಲ್ಲಿ ಪ್ರೀತಿಯುಳ್ಳವಳಾಗಿರುತ್ತಾಳೆಯೋ ಅಂಥವಳೊಡನೆ ಸಂಸಾರಮಾಡಿಕೊಂಡಿರುವುದು ಉತ್ತಮವು. ಪ್ರೀತಿಯಿಲ್ಲದವಳೊಡನೆ ಸಂಸಾರಿಯಾಗುವುದು ಯೋಗ್ಯವಲ್ಲವು, ಸಾಧ್ಯವೂ ಅಲ್ಲವು. ಈ ತಾರೆಯಾದರೋ, ಗುರುವು ತನ್ನ ಸಹೋದರನಾದ ಸಂವರ್ತನ ಪತ್ನಿಯಲ್ಲಿ ಆಸಕ್ತನಾದ ಕಾಲದಿಂದ ಮೊದಲುಗೊಂಡು ಅವನಲ್ಲಿ ವಿರಕ್ತಳಾಗಿದ್ದಾಳೆ ಎಂದರೆ ಪ್ರೀತಿಯಿಲ್ಲದವಳಾಗಿದ್ದಾಳೆ. (ಗುರುವು ತನ್ನ ತಮ್ಮನಾದ ಸಂವರ್ತನ ಪತ್ನಿಯನ್ನು ಸ್ವೀಕರಿಸಿದ ಕಥೆಯು ಪದ್ಮಪುರಾಣದಲ್ಲಿ ಪ್ರಸಿದ್ಧವಾಗಿದೆ.)

**ನ ದಾಸ್ಯೇಽಹಂ ವರಾರೋಹಾಂ ಗಚ್ಛ ದೂತ ವದ ಸ್ವಯಂ ।**
**ಈಶ್ವರೋಽಸಿ ಸಹಸ್ರಾಕ್ಷ ಯದಿಚ್ಛಸಿ ಕುರುಷ್ವ ತತ್ ॥೬೧॥**

ಎಲೈ ದೂತನೇ, ನಾನು ಸುಖಪಡಲು ಅನುಕೂಲಳಾಗಿರುವ ಈ ಸ್ತ್ರೀಯನ್ನು ಬಿಟ್ಟುಕೊಡುವುದಿಲ್ಲ. ನೀನು ಹೋಗಿ ಇಂದ್ರನಿಗೆ ಹಾಗೆಯೇ ಹೇಳು. ಸಹಸ್ರನೇತ್ರನಾದ ಇಂದ್ರನೇ, ನೀನು ಎಲ್ಲರಿಗೂ ಒಡೆಯನಾಗಿದ್ದೀಯೆ. ನಿನಗೆ ಹೇಗೆ ಮಾಡಬೇ

ಕೆಂದು ತೋರುತ್ತದೆಯೋ ಹಾಗೆ ಮಾಡು. ಎಂದು ಚಂದ್ರನು ಇಂದ್ರನಿಗೆ ಹೇಳಿ ಕಳುಹಿಸಿದನು.

|| ಸೂತ ಉವಾಚ ||

**ಇತ್ಯುಕ್ತಃ ಶಶಿನಾ ದೂತಃ ಪ್ರಯಯೌ ಶಕ್ರಸನ್ನಿಧಿಂ ।**
**ಇಂದ್ರಾಯಾಚಷ್ಟ ತತ್ಸರ್ವಂ ಯದುಕ್ತಂ ಶೀತರಶ್ಮಿನಾ ॥೬೨॥**

ಸೂತನು ಹೇಳಿದನು—ಈರೀತಿಯಾಗಿ ತಂಪಾದ ಕಿರಣಗಳುಳ್ಳ ಚಂದ್ರನಿಂದ ಹೇಳಿಕಳುಹಿಸಲ್ಪಟ್ಟ ಆ ದೂತನು ಇಂದ್ರನ ಹತ್ತಿರಕ್ಕೆ ಹೋಗಿ ಚಂದ್ರನು ಆಡಿದ ಎಲ್ಲಾ ಮಾತುಗಳನ್ನೂ ಇಂದ್ರನಿಗೆ ಹೇಳಿದನು.

**ತುರಾಷಾಡಪಿ ತಚ್ಛ್ರುತ್ವಾ ಕ್ರೋಧಯುಕ್ತೋ ಬಭೂವ ಹ ।**
**ಸೇನೋದ್ಯೋಗಂ ತದಾ ಚಕ್ರೇ ಸಾಹಾಯ್ಯಾರ್ಥಂ ಗುರೋರ್ವಿಭುಃ ॥೬೩॥**

ವೇಗವುಳ್ಳವನನ್ನೂ ಜಯಿಸುವ ಅಧಿಪತಿಯಾದ ಇಂದ್ರನೂ ಕೂಡ ಆ ಮಾತುಗಳನ್ನು ಕೇಳಿ ಕೋಪಗೊಂಡವನಾದನು, ಅಲ್ಲದೆ ಗುರುವಿಗೆ ಸಹಾಯಮಾಡುವುದಕ್ಕಾಗಿ ಸೇನೆಯನ್ನು ಸಿದ್ಧಗೊಳಿಸಿದನು.

**ಶುಕ್ರಸ್ತು ವಿಗ್ರಹಂ ಶ್ರುತ್ವಾ ಗುರುದ್ವೇಷಾತ್ತತೋ ಯಯೌ ।**
**ಮಾ ದದಸ್ವೇತಿ ತಂ ವಾಕ್ಯಮುವಾಚ ಶಶಿನಂ ಪ್ರತಿ ॥೬೪॥**

ದೈತ್ಯಗುರುವಾದ ಶುಕ್ರಾಚಾರ್ಯನು ಈ ಯುದ್ಧದ ಸಮಾಚಾರವನ್ನು ಕೇಳಿ, ಗುರುವಿನಲ್ಲಿ ತನಗೂ ದ್ವೇಷವಿದ್ದುದರಿಂದ, ಚಂದ್ರನ ಹತ್ತಿರಕ್ಕೆ ಹೋಗಿ, ತಾರೆಯನ್ನು ಕೊಡಬೇಡವೆಂದು ಚಂದ್ರನಿಗೆ ಹೇಳಿದನು. (ಶುಕ್ರಾಚಾರ್ಯನು ಚಂದ್ರನ ಪಕ್ಷವನ್ನು ಸೇರಿದುದರಿಂದ ರಾಕ್ಷಸರೆಲ್ಲರೂ ಆ ಪಕ್ಷವನ್ನು ಸೇರಲು, ದೇವಾಸುರರಿಗೆ ಹೀಗೆ ಯುದ್ಧವು ಪ್ರಾರಂಭವಾಯಿತು.)

**ಸಾಹಾಯ್ಯಂ ತೇ ಕರಿಷ್ಯಾಮಿ ಮಂತ್ರಶಕ್ತ್ಯಾ ಮಹಾಮತೇ ।**
**ಭವಿತಾ ಯದಿ ಸಂಗ್ರಾಮಸ್ತವ ಚಂದ್ರೇಣ ಮಾರಿಷ ॥೬೫॥**

ಎಲೈ ಗೌರವಾರ್ಹನಾದ ಬುದ್ಧಿಶಾಲಿಯೇ, ನಿನಗೂ ಇಂದ್ರನಿಗೂ ಯುದ್ಧ ನಡೆಯುವುದಾದರೆ ಆಗ ನಿನಗೆ ನಾನು ಮಂತ್ರಶಕ್ತಿಯಿಂದ ತಕ್ಕ ಸಲಹೆಗಳನ್ನು

ಕೊಡುವ ಸಾಮರ್ಥ್ಯದಿಂದ ಸಹಾಯಮಾಡುತ್ತೇನೆ ಎಂದು ಶುಕ್ರಾಚಾರ್ಯನು ಚಂದ್ರನಿಗೆ ಒತ್ತಾಸೆಯ ಮಾತನ್ನು ಹೇಳಿದನು.

**ಶಂಕರಸ್ತು ತದಾಕರ್ಣ್ಯ ಗುರುದಾರಾಭಿಮರ್ಶನಂ ।**
**ಗುರುಶತ್ರುಂ ಭೃಗುಂ ಮತ್ವಾ ಸಹಾಯಮಕರೋತ್ತದಾ ॥೬೬॥**

ಆ ಸಮಯದಲ್ಲಿ ಶಿವನು, ಗುರುವಿನ ಪತ್ನಿಯನ್ನು ಚಂದ್ರನು ಪರಿಗ್ರಹಿಸಿದ ಸಮಾಚಾರವನ್ನೂ, ಗುರುವಿಗೆ ಶುಕ್ರನು ಶತ್ರುವಾಗಿರುವುದನ್ನೂ ತಿಳಿದು ಗುರುವಿಗೆ ಸಹಾಯಕನಾಗಿ ನಿಂತನು.

**ಸಂಗ್ರಾಮಸ್ತು ತದಾ ವೃತ್ತೋ ದೇವದಾನವಯೋರ್ದ್ರುತಂ ।**
**ಬಹೂನಿ ತತ್ರ ವರ್ಷಾಣಿ ತಾರಕಾಸುರವತ್ಕಿಲ ॥೬೭॥**

ಆಗ ದೇವತೆಗಳಿಗೂ ರಾಕ್ಷಸರಿಗೂ ಯುದ್ಧವು ಬಹು ವರ್ಷಗಳವರೆಗೂ, ತಾರಕಾಸುರನಿಗೂ ದೇವತೆಗಳಿಗೂ ನಡೆದಂತೆ, ವೇಗದಿಂದ ನಡೆಯಿತು.

**ದೇವಾಸುರಕೃತಂ ಯುದ್ಧಂ ದೃಷ್ಟ್ವಾ ತತ್ರ ಪಿತಾಮಹಃ ।**
**ಹಂಸಾರೂಢೋ ಜಗಾಮಾಶು ತಂ ದೇಶಂ ಕ್ಲೇಶಶಾಂತಯೇ ॥೬೮॥**

ಹೀಗೆ ದೇವತೆಗಳಿಗೂ ರಾಕ್ಷಸರಿಗೂ ನಡೆಯುತ್ತಿರುವ ಯುದ್ಧವನ್ನು ನೋಡಿ ಬ್ರಹ್ಮನು ಹಂಸಾರೂಢನಾಗಿ ಈ ಕಷ್ಟವನ್ನು ಪರಿಹಾರಮಾಡುವುದಕ್ಕಾಗಿ ಆ ಯುದ್ಧ ಪ್ರದೇಶಕ್ಕೆ ಬಂದನು.

**ರಾಕಾಪತಿಂ ತದಾ ಪ್ರಾಹ ಮುಂಚ ಭಾರ್ಯಾಂ ಗುರೋರಿತಿ ।**
**ನೋ ಚೇದ್ವಿಷ್ಣುಂ ಸಮಾಹೂಯ ಕರಿಷ್ಯಾಮಿ ತು ಸಂಕ್ಷಯಂ ॥೬೯॥**

ಆಗ ಬ್ರಹ್ಮನು ಚಂದ್ರನನ್ನು ಕುರಿತು ಎಲೈ ಚಂದ್ರನೇ, ಗುರುವಿನ ಪತ್ನಿಯನ್ನು ಬಿಟ್ಟುಕೊಡು. ಹಾಗಿಲ್ಲದಿದ್ದರೆ, ವಿಷ್ಣುವನ್ನು ಬರಮಾಡಿಕೊಂಡು ನಿನ್ನ ಸಂಹಾರವನ್ನು ಮಾಡುವೆನು ಎಂದು ಎಚ್ಚರಿಕೆಯನ್ನು ಕೊಟ್ಟು ಹೇಳಿದನು.

**ಭೃಗುಂ ನಿವಾರಯಾಮಾಸ ಬ್ರಹ್ಮಾ ಲೋಕಪಿತಾಮಹಃ ।**
**ಕಿಮನ್ಯಾಯಮತಿರ್ಜಾತಾ ಸಂಗದೋಷಾನ್ಮಹಾಮತೇ ॥೭೦॥**

ಅಲ್ಲದೆ, ಶುಕ್ರಾಚಾರ್ಯನನ್ನು ತಡೆದು, ನಿನಗೆ ಸಹವಾಸದೋಷದಿಂದ ಎಂಥ ದುರ್ಬುದ್ಧಿಯುಂಟಾಯಿತು! ಅವರಿಬ್ಬರಿಗೂ ಪರಸ್ಪರ ಯುದ್ಧವನ್ನು ಮಾಡು ವುದನ್ನು ಬಿಟ್ಟು ಶಾಂತಿಯಿಂದಿರುವಂತೆ ಬುದ್ಧಿವಾದವನ್ನು ಹೇಳದೆ ಯುದ್ಧಕ್ಕೇ ನೀನೂ ಒತ್ತಾಸೆಯಾದುದು ತಪ್ಪು ಎಂದು ಹೇಳಿದನು.

**ನಿಷೇಧಯಾಮಾಸ ತತೋ ಭೃಗುಸ್ತಂ ಚೌಷಧೀಪತಿಂ ।**
**ಮುಂಚ ಭಾರ್ಯಾಂ ಗುರೋರದ್ಯ ಪಿತ್ರಾಹಂ ಪ್ರೇಷಿತಸ್ತವ ॥೭೧॥**

ಅನಂತರದಲ್ಲಿ ಶುಕ್ರನು ಚಂದ್ರನನ್ನು ತಡೆದು, ಎಲೈ ಚಂದ್ರನೇ, ಈಗ ನೀನು ಗುರುವಿನ ಪತ್ನಿಯನ್ನು ಬಿಟ್ಟುಕೊಡು. ನಿನ್ನ ತಂದೆಯಾದ ಅತ್ರಿಋಷಿಯು ನನ್ನನ್ನು ಇಲ್ಲಿಗೆ ಕಳುಹಿಸಿದ್ದರಿಂದ ಬಂದಿದ್ದೇನೆ ಎಂದು ಹೇಳಿದನು.

॥ ಸೂತ ಉವಾಚ ॥

**ದ್ವಿಜರಾಜಸ್ತು ತಚ್ಛ್ರುತ್ವಾ ಭೃಗೋರ್ವಚನಮದ್ಭುತಂ ।**
**ದದೌ ಚ ತತ್ಪ್ರಿಯಾಂ ಭಾರ್ಯಾಂ ಗುರೋರ್ಗರ್ಭವತೀಂ ಶುಭಾಂ ॥೭೨॥**

ಸೂತಮುನಿಯು ಹೇಳಿದನು—ಚಂದ್ರನು ಶುಕ್ರಾಚಾರ್ಯನ ಆಶ್ಚರ್ಯ ಕರವಾದ ಈ ಮಾತನ್ನು ಕೇಳಿ ಗುರುವಿಗೆ ಪ್ರೀತಿಪಾತ್ರಳಾದ ಗರ್ಭಿಣಿಯಾಗಿದ್ದ ಆ ತಾರೆಯನ್ನು ಗುರುವಿಗೆ ಕೊಟ್ಟನು.

**ಪ್ರಾಪ್ಯ ಕಾಂತಾಂ ಗುರುರ್ಹೃಷ್ಟಃ ಸ್ವಗೃಹಂ ಮುದಿತೋ ಯಯೌ ।**
**ತತೋ ದೇವಾಸ್ತಥಾ ದೈತ್ಯಾ ಯಯುಸ್ಸ್ವಸ್ವರ್ಗೃಹಾನ್ಪ್ರತಿ ॥೭೩॥**

ಗುರುವೂ ಕೂಡ ತನ್ನ ಹೆಂಡತಿಯನ್ನು ಪುನಃ ಪಡೆದು ಸಂತೋಷದಿಂದ ತನ್ನ ಮನೆಗೆ ಹೋದನು. ದೇವತೆಗಳೂ, ರಾಕ್ಷಸರೂ ಸಹ ತಮ್ಮ ತಮ್ಮ ಮನೆ ಗಳಿಗೆ ಹೋದರು.

**ಬ್ರಹ್ಮಾ ಸ್ವಸದನಂ ಪ್ರಾಪ್ತಃ ಕೈಲಾಸಂ ಚಾಪಿ ಶಂಕರಃ ।**
**ಬೃಹಸ್ಪತಿಸ್ತು ಸಂತುಷ್ಟಃ ಪ್ರಾಪ್ಯ ಭಾರ್ಯಾಂ ಮನೋರಮಾಂ ॥೭೪॥**

ಅನಂತರದಲ್ಲಿ ಬ್ರಹ್ಮನು ತನ್ನ ಸ್ಥಾನಕ್ಕೆ ಹೋದನು. ಶಿವನೂ ಕೈಲಾಸ ವನ್ನು ಕುರಿತು ತೆರಳಿದನು. ಬೃಹಸ್ಪತಿಯೂ ಸಹ ಮನೋಹರಳಾದ ತನ್ನ ಪತ್ನಿ ಯನ್ನು ಹೊಂದಿ ಸಂತೋಷದಿಂದ ಹೋಗಿ ತನ್ನ ಮನೆಯಲ್ಲಿದ್ದನು.

**ತತಃ ಕಾಲೇನ ಕಿಯತಾ ತಾರ್‍ಯಾಸೂತ ಸುತಂ ಶುಭಂ ।**
**ಸುದಿನೇ ಶುಭನಕ್ಷತ್ರೇ ತಾರಾಪತಿಸಮಂ ಗುಣೈಃ ॥೭೫॥**

ಕೆಲವು ಕಾಲ ಕಳೆದ ನಂತರ ತಾರೆಯು ಒಳ್ಳೆಯ ದಿವಸದಲ್ಲಿ ಒಳ್ಳೆಯ ನಕ್ಷತ್ರದಲ್ಲಿ ತಾರೆಯ ಪ್ರಿಯಪತಿಯಾದ ಚಂದ್ರನಿಗೆ ಸಮಾನವಾದ ಗುಣವುಳ್ಳ ಒಬ್ಬ ಪುತ್ರನನ್ನು ಪ್ರಸವಿಸಿದಳು.

**ದೃಷ್ಟ್ವಾ ಪುತ್ರಂ ಗುರುರ್ಜಾತಂ ಚಕಾರ ವಿಧಿಪೂರ್ವಕಂ ।**
**ಜಾತಕರ್ಮಾದಿಕಂ ಸರ್ವಂ ಪ್ರಹೃಷ್ಟೇನಾಂತರಾತ್ಮನಾ ॥೭೬॥**

ಮಗನು ಹುಟ್ಟಿದುದನ್ನು ಗುರುವು ನೋಡಿ ಬಹಳ ಸಂತೋಷಗೊಂಡವನಾಗಿ ಆ ಮಗುವಿಗೆ ಶಾಸ್ತ್ರೋಕ್ತವಾಗಿ ಜಾತಕರ್ಮಾದಿಸಂಸ್ಕಾರಗಳನ್ನು ಮಾಡಿದನು.

**ಶ್ರುತಂ ಚಂದ್ರಮಸಾ ಜನ್ಮ ಪುತ್ರಸ್ಯ ಮುನಿಸತ್ತಮಾಃ ।**
**ದೂತಂ ಚ ಪ್ರೇಷಯಾಮಾಸ ಗುರುಂ ಪ್ರತಿ ಮಹಾಮತಿಃ ॥೭೭॥**

ಚಂದ್ರನು ಕೂಡ ಮಗನು ಹುಟ್ಟಿದ ಸಮಾಚಾರವನ್ನು ಕೇಳಿದನು. ಎಲೈ ಋಷಿಗಳಿರಾ, ಅನಂತರದಲ್ಲಿ ಬುದ್ಧಿವಂತನಾದ ಚಂದ್ರನು ಗುರುವಿನ ಹತ್ತಿರಕ್ಕೆ ಒಬ್ಬ ದೂತನನ್ನು ಕಳುಹಿಸಿದನು.

**ನ ಚಾಯಂ ತವ ಪುತ್ರೋಽಸ್ತಿ ಮಮ ವೀರ್ಯಸಮುದ್ಭವಃ ।**
**ಕಥಂ ತ್ವಂ ಕೃತವಾನ್ ಕಾಮಂ ಜಾತಕರ್ಮಾದಿಕಂ ವಿಧಿಂ ॥೭೮॥**

ಎಲೈ ಗುರುವೇ, ಈ ಬಾಲಕನು ನಿನ್ನ ಮಗನಲ್ಲವು. ಅವನು ನನ್ನ ವೀರ್ಯದಿಂದ ಹುಟ್ಟಿದ್ದಾನೆ. ಹೀಗಿರುವಾಗ ನೀನು ಹೇಗೆ ಅವನಿಗೆ ಜಾತಕರ್ಮಾದಿಸಂಸ್ಕಾರಗಳನ್ನು ಮಾಡಿದೆ ಎಂದು ಆಕ್ಷೇಪಿಸಿ ಹೇಳಿಕಳುಹಿಸಿದನು.

**ತಚ್ಛ್ರುತ್ವಾ ವಚನಂ ತಸ್ಯ ದೂತಸ್ಯ ಚ ಬೃಹಸ್ಪತಿಃ ।**
**ಉವಾಚ ಮಮ ಪುತ್ರೋ ಮೇ ಸದೃಶೋ ನಾತ್ರಸಂಶಯಃ ॥೭೯॥**

ಆ ದೂತನ ಮಾತನ್ನು ಕೇಳಿ ಬೃಹಸ್ಪತಿಯು, ಈ ಬಾಲಕನು ನನ್ನನ್ನೇ ಹೋಲುತ್ತಾ ನನಗೆ ಸಮಾನನಾಗಿರುವುದರಿಂದ ನನ್ನ ಮಗನೇ ಹೌದು. ಈ ವಿಷಯದಲ್ಲಿ ಸಂದೇಹವಿಲ್ಲವು ಎಂದನು.

**ಪುನರ್ವಿವಾದಃ ಸಂಜಾತೋ ಮಿಲಿತಾ ದೇವದಾನವಾಃ ।**
**ಯುದ್ಧಾರ್ಥಮಾಗತಾಸ್ತೇಷಾಂ ಸಮಾಜಃ ಸಮುಜಾಯತ ॥೮೦॥**

ಪುನಃ ಅವರಿಗೆ ಜಗಳ ಪ್ರಾರಂಭವಾಗಿ ದೇವತೆಗಳೂ ರಾಕ್ಷಸರೂ ಮತ್ತೆ ಯುದ್ಧಕ್ಕಾಗಿ ಬಂದು ಸೇರಿದರು. ಆಗ ಒಂದು ದೊಡ್ಡ ಕೂಟವು ಅಲ್ಲಿ ಸೇರಿತು.

**ತತ್ರಾಗತಃ ಸ್ವಯಂ ಬ್ರಹ್ಮಾ ಶಾಂತಿಕಾಮಃ ಪ್ರಜಾಪತಿಃ ।**
**ನಿವಾರಯಾಮಾಸ ಮುಖೇ ಸಂಸ್ಥಿತಾನ್ಯುದ್ಧದುರ್ಮದಾನ್ ॥೮೧॥**

ಎಲ್ಲ ಪ್ರಜೆಗಳಿಗೂ ಒಡೆಯನಾದ ಬ್ರಹ್ಮನು ಶಾಂತಿಯು ಪುನಃ ನೆಲಸುವಂತೆ ಮಾಡಲಪೇಕ್ಷೆಯಿಂದ ಅಲ್ಲಿಗೆ ಬಂದು ಕೊಬ್ಬಿನಿಂದ ಯುದ್ಧಮಾಡಲು ಆಸಕ್ತಿಯುಳ್ಳವರಾಗಿ ಎದುರಿನಲ್ಲಿ ನಿಂತಿರುವ ದೇವತೆಗಳನ್ನೂ ರಾಕ್ಷಸರನ್ನೂ ತಡೆದು ಈ ರೀತಿಯಾಗಿ ಹೇಳಿದನು.

**ತಾರಾಂ ಪಪ್ರಚ್ಛ ಧರ್ಮಾತ್ಮಾ ಕಸ್ಯಾಯಂ ತನಯಶ್ಶುಭೇ ।**
**ಸತ್ಯಂ ವದ ವರಾರೋಹೇ ಯಥಾಕ್ಲೇಶಃ ಪ್ರಶಾಮ್ಯತಿ ॥೮೨॥**

ಎಲೌ ತಾರೆಯೇ, ಈ ಮಗುವು ಯಾರಿಂದ ಹುಟ್ಟಿತು. ಅದನ್ನು ಮರೆಮಾಚದೆ ಹೇಳು. ಎಲೌ ಶೋಭನಾಂಗಿಯೇ, ಈ ವಿವಾದವು ಸರಿಯಾಗಿ ಇತ್ಯರ್ಥವಾಗದಿದ್ದಲ್ಲಿ ದೇವದಾನವರಿಗೆ ಯುದ್ಧವು ಸಂನಿಹಿತವಾಗುವುದರಿಂದ ಅದನ್ನು ತಪ್ಪಿಸಲು ನೀನು ಈ ವಿಚಾರದಲ್ಲಿ ಸತ್ಯವನ್ನೇ ಹೇಳು ಎಂದು ತಾರೆಯನ್ನು ಕೇಳಿದನು.

**ತಮುವಾಚಾಸಿತಾಪಾಂಗೀ ಲಜ್ಜಮಾನಾಪ್ಯಧೋಮುಖೀ ।**
**ಚಂದ್ರಸ್ಯೇತಿ ಶನೈರನ್ತರ್ಜಗಾಮ ವರವರ್ಣಿನೀ ॥೮೩॥**

ಕಪ್ಪಾದ ಕಡೆಗಣ್ಣಿನ ನೋಟದಿಂದ ಮೆರೆಯುವ ಆ ತಾರೆಯು ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡವಳಾಗಿ ಈ ಮಗುವು ಚಂದ್ರನ ಮಗನು ಎಂದು ಮೆಲ್ಲಗೆ ಹೇಳಿ ಒಳಕ್ಕೆ ಹೊರಟುಹೋದಳು.

**ಜಗ್ರಾಹ ತಂ ಸುತಂ ಸೋಮಃ ಪ್ರಹೃಷ್ಟೇನಾಂತರಾತ್ಮನಾ ।**
**ನಾಮ ಚಕ್ರೇ ಬುಧ ಇತಿ ಜಗಾಮ ಸ್ವಗೃಹಂ ಪುನಃ ॥೮೪॥**

ಹೀಗೆ ತಾರೆಯು ಹೇಳಿದುದರಿಂದ ಚಂದ್ರನು ಆ ಮಗುವನ್ನು ಬಹಳ ಸಂತೋಷದಿಂದ ತನ್ನ ಮನೆಗೆ ಕರೆದುಕೊಂಡು ಹೋಗಿ ಅವನಿಗೆ ಬುಧ ಎಂದು ನಾಮಕರಣವನ್ನು ಮಾಡಿದನು.

**ಯಯೌ ಬ್ರಹ್ಮಾ ಸ್ವಕಂ ಧಾಮ ಸರ್ವೇ ದೇವಾಃ ಸವಾಸವಾಃ ।**
**ಯಥಾಗತಂ ಗತಂ ಸರ್ವೈಃ ಸರ್ವಶಃ ಪ್ರೇಕ್ಷಕೈರ್ಜನೈಃ ॥೮೫॥**

ಬ್ರಹ್ಮನೂ ತನ್ನ ವಾಸಸ್ಥಳಕ್ಕೆ ಹೊರಟುಹೋದನು. ಇಂದ್ರಾದಿಸಮಸ್ತ ದೇವತೆಗಳೂ, ನೋಡುವುದಕ್ಕಾಗಿ ಬಂದಿದ್ದ ಜನಗಳೂ, ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ತಾವು ಬಂದಿದ್ದಂತೆ ಹೊರಟುಹೋದರು.

**ಕಥಿತೇಯಂ ಬುಧೋತ್ಪತ್ತಿರ್ಗುರುಕ್ಷೇತ್ರೇ ಚ ಸೋಮತಃ ।**
**ಯಥಾ ಶ್ರುತಾ ಮಯಾ ಪೂರ್ವಂ ವ್ಯಾಸಾತ್ಸತ್ಯವತೀಸುತಾತ್ ॥೮೬॥**

ಎಲೈ ಋಷಿಗಳಿರಾ, ನಾನು ಪೂರ್ವದಲ್ಲಿ ಸತ್ಯವತಿಯ ಮಗನಾದ ವ್ಯಾಸ ಋಷಿಯಿಂದ ಹೇಗೆ ಕೇಳಿದ್ದೆನೋ ಹಾಗೆ ಗುರುವಿನ ಕ್ಷೇತ್ರದಲ್ಲಿ (ಅಂದರೆ ಪತ್ನಿಯಲ್ಲಿ) ಚಂದ್ರನಿಂದ ಉತ್ಪನ್ನನಾದ ಬುಧನ ವೃತ್ತಾಂತವನ್ನು ನಿಮಗೆ ಹೇಳಿದ್ದೇನೆ ಎಂದು ಸೂತನು ಹೇಳಿದನು.

ಈ ಕಥೆಯ ಅಕ್ಷರಾರ್ಥದಲ್ಲಿ ಎಂದರೆ ವಾಚ್ಯಾರ್ಥದಲ್ಲಿ ಗ್ರಂಥಕರ್ತೃವಿಗೆ ಅಥವಾ ಇದನ್ನು ಪ್ರಚಾರಕ್ಕೆ ತಂದವರಿಗೆ ತಾತ್ಪರ್ಯವಿಲ್ಲದಿರಬಹುದು. ಎರಡು ಗ್ರಹಗಳ ಸಂಯೋಜನದ ಪರಿಣಾಮವಾಗಿ ಅವುಗಳಿಂದ ಬೇರೊಂದು ಗ್ರಹವು ಹೊರ ಹೊಮ್ಮಿದುದರಿಂದ ಖಗೋಳಚಕ್ರದಲ್ಲಿ ಸಂಭವಿಸಿದ ಬದಲಾವಣೆಯೊಂದನ್ನು ಈ ಕಥೆಯು ಸಾಂಕೇತಿಕರೀತಿಯಿಂದ ಸೂಚಿಸಿರಬಹುದೆಂದು ತೋರುತ್ತದೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಏಕಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹನ್ನೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ದ್ವಾದಶೋಽಧ್ಯಾಯಃ ||

### ಹನ್ನೆರಡನೆಯ ಅಧ್ಯಾಯವು

|| ಓಂ ||

|| ಸೂತ ಉವಾಚ ||

**ತತಃ ಪುರೂರವಾ ಜಜ್ಞೇ ಇಲಾಯಾಂ ಕಥಯಾಮಿ ವಃ ।**
**ಬುಧಪುತ್ರೋಽತಿಧರ್ಮಾತ್ಮಾ ಯಜ್ಞಕೃದ್ದಾನತತ್ಪರಃ ॥೧॥**

ಸೂತನು ಋಷಿಗಳಿಗೆ ಹೇಳಿದನು—ಎಲೈ ಋಷಿಗಳೇ, ಅನಂತರದಲ್ಲಿ ಬುಧನಿಂದ ಇಲಾ ಎಂಬುವಳಲ್ಲಿ ಧರ್ಮಿಷ್ಠನೂ ಯಜ್ಞಗಳನ್ನು ಆಚರಿಸುವವನೂ, ದಾನಮಾಡುವುದರಲ್ಲಿ ಆಸಕ್ತಿಯುಳ್ಳವನೂ ಆದ ಪುರೂವರನು ಹುಟ್ಟಿದ ಕಥೆಯನ್ನು ನಿಮಗೆ ಹೇಳುತ್ತೇನೆ.

**ಸುದ್ಯುಮ್ನೋ ನಾಮ ಭೂಪಾಲಃ ಸತ್ಯವಾದೀ ಜಿತೇಂದ್ರಿಯಃ ।**
**ಸೈಂಧವಂ ಹಯಮಾರುಹ್ಯ ಚಚಾರ ಮೃಗಯಾಂ ವನೇ ॥೨॥**

ವೈವಸ್ವತಮನುವಿನ ಮಗನಾದ, ಯಾವಾಗಲೂ ನಿಜವನ್ನೇ ಹೇಳುವವನೂ, ಇಂದ್ರಿಯಗಳನ್ನು ಜಯಿಸಿದವನೂ ಆದ ಸುದ್ಯುಮ್ನನೆಂಬ ರಾಜನಿದ್ದನು. ಅವನು ಒಂದು ದಿವಸ ಸಿಂಧುದೇಶದಲ್ಲಿ ಹುಟ್ಟಿದ ಕುದುರೆಯನ್ನು ಹತ್ತಿ ಬೇಟೆಗಾಗಿ ಕಾಡಿಗೆ ಹೋಗಿ ಸಂಚರಿಸುತ್ತಿದ್ದನು.

**ಯುತಃ ಕತಿಪಯಾಮಾತ್ಯೈರ್ದಂಶಿತಶ್ಚಾರುಕುಂಡಲಃ ।**
**ಧನುರಾಜಗವಂ ಬಧ್ವಾ ಬಾಣಸಂಘಂ ತಥಾದ್ಭುತಂ ॥೩॥**

ಮತ್ತು ಆ ರಾಜನು ಕೆಲವು ಜನ ಮಂತ್ರಿಗಳಿಂದ ಕೂಡಿದವನಾಗಿಯೂ ಮನೋಹರವಾದ ಕುಂಡಲಗಳನ್ನು ಧರಿಸಿದವನಾಗಿಯೂ, ಈಶ್ವರಸಂಬಂಧವಾದ ಧನುಸ್ಸನ್ನೂ ಅನೇಕ ಆಶ್ಚರ್ಯಕರಗಳಾದ ಬಾಣಗಳಿಂದ ತುಂಬಿರುವ ಬತ್ತಳಿಕೆಯನ್ನೂ ಧರಿಸಿದವನಾಗಿಯೂ ಹೀಗೆ ತಕ್ಕ ರಕ್ಷಣೆಯುಳ್ಳವನಾಗಿ ಬೇಟೆಗೋಸ್ಕರ ವನಕ್ಕೆ ಹೋದನು.

**ಸ ಭ್ರಮಂಸ್ತದ್ವನೋದ್ದೇಶೇ ಹನ್ಯಮಾನೋ ರುರೂನ್ ಮೃಗಾನ್ ।**
**ಶಶಾಂಶ್ಚ ಸೂಕರಾಂಶ್ಚೈವ ಖಡ್ಗಾಂಶ್ಚ ಗವಯಾಂಸ್ತಥಾ ॥೪॥**

**ಶರಭಾನ್ಮಹಿಷಾಂಶ್ಚೈವ ಸಾಮುರಾನ್ವನಕುಕ್ಕುಟಾನ್ ।**
**ನಿಘ್ನನ್ಮೇಧ್ಯಾನ್ಪಶೂನ್ ರಾಜಾ ಕುಮಾರವನಮಾವಿಶತ್ ॥೫॥**

ಆ ರಾಜನು ಕಾಡಿನಲ್ಲಿ ಅಲ್ಲಲ್ಲಿ ತಿರುಗಾಡುತ್ತಾ ಜಿಂಕೆಗಳನ್ನೂ, ಹುಲ್ಲೆಕರುಗಳನ್ನೂ, ಮೊಲಗಳನ್ನೂ, ಹಂದಿಗಳನ್ನೂ, ಖಡ್ಗಮೃಗಗಳನ್ನೂ ಕಾಡುಗೋವುಗಳನ್ನೂ, ಶರಭಗಳನ್ನೂ, ಕಾಡುಕೋಣಗಳನ್ನೂ, ಯಜ್ಞಾರ್ಹವಾದ ಪಶುಗಳನ್ನೂ ಸಂಹಾರಮಾಡುತ್ತಾ ಕುಮಾರವನವೆಂಬ ತೋಟದ ಪ್ರದೇಶವನ್ನು ಹೊಕ್ಕನು.

**ಮೇರೋರಧಸ್ತಲೇ ದಿವ್ಯಂ ಮಂದಾರದ್ರುಮರಾಜಿತಂ ।**
**ಅಶೋಕಲತಿಕಾಕೀರ್ಣಂ ಬಕುಲೈರಧಿವಾಸಿತಂ ॥೬॥**

**ಸಾಲೈಸ್ತಾಲೈಸ್ತಮಾಲೈಶ್ಚ ಚಂಪಕೈಃ ಪನಸೈಸ್ತಥಾ ।**
**ಆಮ್ರೈರ್ನೀಪೈರ್ಮಧೂಕೈಶ್ಚ ಮಾಧವೀಮಂಟಪಾವೃತಂ ॥೭॥**

**ದಾಡಿಮೈರ್ನಾರಿಕೇಲೈಶ್ಚ ಕದಲೀಖಂಡಮಂಡಿತಂ ।**
**ಯೂಥಿಕಾಮಾಲತೀಕುಂದಪುಷ್ಪವಲ್ಲೀಸಮಾವೃತಂ ॥೮॥**

ಮೇರುಪರ್ವತದ ತೊಪ್ಪಲಿನಲ್ಲಿರುವ ಉತ್ತಮವಾದ ಮಂದಾರವೃಕ್ಷಗಳಿಂದ ಪ್ರಕಾಶಮಾನವಾಗಿಯೂ, ಬಳ್ಳಿಯಂತಿರುವ ಅಶೋಕಲತೆಗಳಿಂದ ವ್ಯಾಪ್ತವಾದ ಬಕುಲಪುಷ್ಪಗಳಿಂದ ಸುವಾಸಿತವಾದ ಸಜ್ಜೆವೃಕ್ಷಗಳಿಂದಲೂ ತಾಳೆಯ ಮರಗಳಿಂದಲೂ, ಹೊಂಗೆಮರಗಳಿಂದಲೂ, ಸಂಪಿಗೆಮರಗಳಿಂದಲೂ, ಹಲಸಿನಮರಗಳಿಂದಲೂ, ಮಾವಿನಮರಗಳಿಂದಲೂ, ಈಚಲುಮರಗಳಿಂದಲೂ, ಹಿಪ್ಪೆಮರಗಳಿಂದಲೂ, ಅಲಂಕೃತವಾದ ವಾಸಂತೀಬಳ್ಳಿಯು ಹಬ್ಬಿರುವ ವಿಶ್ರಾಂತಿವಿಹಾರದ ಮಂಟಪಗಳುಳ್ಳ ಮತ್ತು ದಾಳಿಂಬೆ

ತೆಂಗು ಬಾಳೆ ಇವುಗಳ ಸಮೂಹದಿಂದಲಂಕೃತವಾದ ಯೂಥಿಕಾಲತೆ, ಜಾಜೀಬಳ್ಳಿ, ಮಲ್ಲಿಗೇ ಬಳ್ಳಿ, ಇವುಗಳಿಂದಾವೃತವಾದ ಕುಮಾರವನವನ್ನು ಹೊಕ್ಕನು.

**ಹಂಸಕಾರಂಡವಾಕೀರ್ಣಂ ಕೀಚಕಧ್ವನಿನಾದಿತಂ ।**
**ಭ್ರಮರಾಲಿರುತಾರಾಮಂ ವನಂ ಸರ್ವಸುಖಾವಹಂ ॥೯॥**

**ದೃಷ್ಟ್ವಾ ಪ್ರಮುದಿತೋ ರಾಜಾ ಸುದ್ಯುಮ್ನ ಸ್ಸೇವಕೈರ್ವೃತಃ ।**
**ವೃಕ್ಷಾನ್ಸುಪುಷ್ಪಿತಾನ್ ವೀಕ್ಷ್ಯ ಕೋಕಿಲಾರಾವಮಂಡಿತಾನ್ ॥೧೦॥**

ಹಂಸಪಕ್ಷಿಗಳು, ಚಕ್ರವಾಕಪಕ್ಷಿಗಳು ಇವುಗಳಿಂದ ಕೂಡಿದ ಕಿರುಬಿದುರಿನ ಧ್ವನಿಯುಳ್ಳ, ಭ್ರಮರಗಳ ನಾದದಿಂದ ಕೂಡಿರುವ ಚೆನ್ನಾಗಿ ಹೂಬಿಟ್ಟು, ಕೋಗಿಲೆಯ ಧ್ವನಿಯಿಂದಲೂ ಸಹಿತವಾದ ಎಲ್ಲ ಬಗೆಯ ಇಂದ್ರಿಯಸುಖಗಳನ್ನು ಕೊಡುವ ಎಲ್ಲರಿಗೂ ಸುಖವನ್ನುಂಟುಮಾಡುವ ಆ ವನವನ್ನು ನೋಡಿ ಆ ಸುದ್ಯುಮ್ನರಾಜನು ಬಹಳ ಸಂತೋಷದಿಂದ ಸುಂದರವಾದ ಆ ಕುಮಾರವನವನ್ನು ಸೇವಕರಿಂದೊಡಗೂಡಿ ಪ್ರವೇಶಿಸಿದನು.

**ಪ್ರವಿಷ್ಟಸ್ತತ್ರ ರಾಜರ್ಷಿಃ ಸ್ತ್ರೀತ್ವಮಾಪ ಕ್ಷಣಾತ್ತತಃ ।**
**ಅಶ್ವೋಽಪಿ ವಡವಾಜಾತಶ್ಚಿಂತಾವಿಷ್ಟಸ್ಸ ಭೂಪತಿಃ ॥೧೧॥**

ಅಲ್ಲಿ ಪ್ರವೇಶಮಾಡಿದ ಕ್ಷಣದಲ್ಲಿಯೇ ರಾಜನು ಹೆಂಗಸಿನ ರೂಪವನ್ನು ಪಡೆದನು. ಅವನ ಕುದುರೆಯೂ ಹೆಣ್ಣುಕುದುರೆಯಾಯಿತು. ಆಗ ರಾಜನು ಬಹಳ ಚಿಂತೆಯುಳ್ಳವನಾದನು.

**ಕಿಮೇತದಿತಿ ಚಿಂತಾರ್ತಶ್ಚಿಂತ್ಯಮಾನಃ ಪುನಃಪುನಃ ।**
**ದುಃಖಂ ಬಹುತರಂ ಪ್ರಾಪ್ತಃ ಸುದ್ಯುಮ್ನೋ ಲಜ್ಜಯಾನ್ವಿತಃ ॥೧೨॥**

ಇದು ಏನು ಹೀಗಾಯಿತೆಂದು ಚಿಂತೆಯಿಂದ ಕೂಡಿದ ರಾಜನು ಮತ್ತೆ ಮತ್ತೆ ಯೋಚನೆ ಮಾಡುತ್ತಾ ನಾಚಿಕೆಯುಳ್ಳವನೂ ತುಂಬ ದುಃಖಪಡುವವನೂ ಆದನು.

**ಕಿಂ ಕರೋಮಿ ಕಥಂ ಯಾಮಿ ಗೃಹಂ ಸ್ತ್ರೀಭಾವಸಂಯುತಃ ।**
**ಕಥಂ ರಾಜ್ಯಂ ಕರಿಷ್ಯಾಮಿ ಕೇನ ವಾ ವಂಚಿತೋಽಸ್ಮ್ಯಹಂ ॥೧೩॥**

ಈಗ ನಾನು ಹೆಂಗಸಾಗಿರುವೆನಲ್ಲಾ, ಏನನ್ನು ಮಾಡಲಿ? ಹೇಗೆ ಮನೆಗೆ ಹೋಗಲಿ? ಹೇಗೆ ರಾಜ್ಯವಾಳಲಿ? ಈ ರೀತಿಯಾಗಿ ನನ್ನನ್ನು ಮೋಸಗೊಳಿಸಿದವರು ಯಾರು? ಎಂದು ರಾಜನು ಬಹುವಾಗಿ ಚಿಂತಿಸುತ್ತಿದ್ದನು.

|| ಋಷಯ ಊಚುಃ ||

**ಸೂತಾಶ್ಚರ್ಯಮಿದಂ ಪ್ರೋಕ್ತಂ ತ್ವಯಾ ಯಲ್ಲೋಮಹರ್ಷಣ ।**
**ಸುದ್ಯುಮ್ನಃ ಸ್ತ್ರೀತ್ವಮಾಪನ್ನೋ ಭೂಪತಿರ್ದೇವಸಂನಿಭಃ ॥೧೪॥**

**ಕಿಂ ತತ್ಕಾರಣಮಾಚಕ್ಷ್ವ ವನೇ ತತ್ರ ಮನೋಹರೇ ।**
**ಕಿಂ ಕೃತಂ ತೇನ ರಾಜ್ಞಾ ಚ ವಿಸ್ತರಂ ವದ ಸುವ್ರತ ॥೧೫॥**

ಋಷಿಗಳು ಸೂತನನ್ನು ಕೇಳಿದರು—ಓ ಸೂತಮುನಿಯೇ, ನೀನು ಹೇಳಿದ ಕಥೆಯು ನಮಗೆ ಬಹಳ ಆಶ್ಚರ್ಯವನ್ನುಂಟುಮಾಡಿದೆ. ದೇವತೆಗಳಿಗೆ ಸಮಾನನಾದ ಆ ಸದ್ಯುಮ್ನರಾಜನು ಹೆಂಗಸಾಗಲು ಏನು ಕಾರಣವು? ಮನೋಹರವಾದ ಆ ವನದಲ್ಲಿ ಅನಂತರದಲ್ಲಿ ಆ ರಾಜನು ಏನನ್ನು ಮಾಡಿದನು ? ಧರ್ಮನಿಯಮಗಳನ್ನು ತಪ್ಪದೆ ಪಾಲಿಸುವ ಸೂತನೇ, ಆ ಎಲ್ಲ ಸಮಾಚಾರವನ್ನೂ ನಮಗೆ ವಿಸ್ತಾರವಾಗಿ ಹೇಳು

|| ಸೂತ ಉವಾಚ ||

**ಏಕದಾ ಗಿರಿಶಂ ದ್ರಷ್ಟುಮೃಷಯಸ್ಸನಕಾದಯಃ ।**
**ದಿಶೋ ವಿತಿಮಿರಾಭಾಸಾ ಕುರ್ವಂತಃ ಸಮುಪಾಗಮನ್ ॥೧೬॥**

ಒಂದಾನೊಂದು ಸಮಯದಲ್ಲಿ ಸನಕನೇ ಮೊದಲಾದ ಋಷಿಗಳು ತಮ್ಮ ಕಾಂತಿಯಿಂದ ದಿಕ್ಕುಗಳನ್ನೆಲ್ಲಾ ಬೆಳಗುತ್ತಾ, ಪರಮೇಶ್ವರನನ್ನು ನೋಡುವುದಕ್ಕಾಗಿ ಬಂದರು.

**ತಸ್ಮಿಂಶ್ಚ ಸಮಯೇ ತತ್ರ ಶಂಕರಃ ಪ್ರಮುದಾಯುತಃ ।**
**ಕ್ರೀಡಾಸಕ್ತೋ ಮಹಾದೇವೋ ವಿವಸ್ತ್ರಾ ಕಾಮಿನೀ ಶಿವಾ ॥೧೭॥**

ಆ ಸಮಯದಲ್ಲಿ ಶಿವನು ಪಾರ್ವತಿಯೊಡನೆ ಕ್ರೀಡೆಯಲ್ಲಿ ಆಸಕ್ತನಾಗಿದ್ದನು. ಪಾರ್ವತಿಯೂ ವಸ್ತ್ರರಹಿತಳಾಗಿ ಇದ್ದಳು.

**ಉತ್ಸಂಗೇ ಸಂಸ್ಥಿತಾ ಭರ್ತೂ ರಮಮಾಣಾ ಮನೋರಮಾ ।**
**ತಾನ್ವಿಲೋಕ್ಯಾಂಬಿಕಾ ದೇವೀ ವಿವಸ್ತ್ರಾ ವ್ರೀಡಿತಾ ಭೃಶಂ ॥೧೮॥**

ಅಲ್ಲದೆ, ಪಾರ್ವತಿಯು ತನ್ನ ಪತಿಯ ತೊಡೆಯಲ್ಲಿರುವವಳಾಗಿ ಅವನನ್ನು ಸಂತೋಷಪಡಿಸುತ್ತಿದ್ದಳು. ಸುಂದರಳಾದ ಪಾರ್ವತಿಯು ಆ ಕಾಲದಲ್ಲಿ ವಸ್ತ್ರರಹಿತಳಾಗಿದ್ದುದರಿಂದ ಆ ಋಷಿಗಳನ್ನು ನೋಡಿ ಬಹಳ ನಾಚಿಕೆಯುಳ್ಳವಳಾದಳು.

**ಭರ್ತುರಂಕಾತ್ಸಮುತ್ಥಾಯ ವಸ್ತ್ರಮಾದಾಯ ಪರ್ಯಧಾತ್ ।**
**ಲಜ್ಜಾವಿಷ್ಟಾ ಸ್ಥಿತಾ ತತ್ರ ವೇಪಮಾನಾಽತಿಮಾನಿನೀ ॥೧೯॥**

ಅನಂತರದಲ್ಲಿ ಗಂಡನ ತೊಡೆಯ ಮೇಲಿಂದೆದ್ದು ಬಟ್ಟೆಯನ್ನು ತೆಗೆದುಕೊಂಡು ಉಟ್ಟುಕೊಂಡಳು. ಈರೀತಿಯಾಗಿ ಪಾರ್ವತಿಯು ತುಂಬ ಮಾನವುಳ್ಳವಳಾದ್ದರಿಂದ ನಾಚಿಕೆಯಿಂದ ನಡುಗುತ್ತಾ ಅಲ್ಲಿ ಇದ್ದಳು.

**ಋಷಯೋಽಪಿ ತಯೋರ್ವೀಕ್ಷ್ಯ ಪ್ರಸಂಗಂ ರಮಮಾಣಯೋಃ ।**
**ಪರಿವೃತ್ಯ ಯಯುಸ್ತೂರ್ಣಂ ನರನಾರಾಯಣಾಶ್ರಮಂ ॥೨೦॥**

ಆ ಋಷಿಗಳೂ ಕೂಡ ಕ್ರೀಡಿಸುತ್ತಿರುವ ಅವರ ಆ ಸಂದರ್ಭವನ್ನು ನೋಡಿ ಹಿಂತಿರುಗಿ ನರನಾರಾಯಣರ ಆಶ್ರಮಕ್ಕೆ ಹೋದರು.

**ಹ್ರೀಯುತಾಂ ಕಾಮಿನೀಂ ವೀಕ್ಷ್ಯ ಪ್ರೋವಾಚ ಭಗವಾನ್ ಹರಃ ।**
**ಕಥಂ ಲಜ್ಜಾತುರಾಸಿ ತ್ವಂ ಸುಖಂ ತೇ ಪ್ರಕರೋಮ್ಯಹಂ ॥೨೧॥**

ನಾಚಿಕೆಗೊಂಡ ಪತ್ನಿಯನ್ನು ನೋಡಿ, ತೇಜಸ್ವಿಯಾದ ಶಿವನು ಈ ರೀತಿಯಾಗಿ ಹೇಳಿದನು. ನೀನು ಏಕೆ ಲಜ್ಜೆಯುಳ್ಳವಳಾಗಿರುತ್ತೀ, ನಿನಗೆ ಸುಖವುಂಟಾಗುವಂತೆ ಮಾಡುತ್ತೇನೆ.

**ಅದ್ಯ ಪ್ರಭೃತಿ ಯೋ ಮೋಹಾತ್ಪುಮಾನ್ ಕೋಽಪಿ ವರಾನನೇ ।**
**ವನಂ ಚ ಪ್ರವಿಶೇದೇತತ್ಸ ವೈ ಯೋಷಿದ್ಭವಿಷ್ಯತಿ ॥೨೨॥**

ಈ ದಿನ ಮೊದಲು ಮಾಡಿಕೊಂಡು ಯಾವ ಪುರುಷನು ಅಥವಾ ಗಂಡು ಪ್ರಾಣಿಯು ಈ ವನವನ್ನು ಪ್ರವೇಶಮಾಡುತ್ತಾನೆಯೋ ಅವನು ಕೂಡಲೇ ಹೆಂಗಸಾಗುವನು.

**ಇತಿ ಶಪ್ತಂ ವನಂ ತೇನ ಯೇ ಜಾನಂತಿ ಜನಾಃ ಕ್ವಚಿತ್ ।**
**ವರ್ಜಯಂತೀಹ ತೇ ಕಾಮಂ ವನಂ ದೋಷಸಮೃದ್ಧಿಮತ್ ॥೨೩॥**

ಈ ರೀತಿಯಾಗಿ ಈಶ್ವರನು ವನವನ್ನು ಶಪಿಸಿದನು ಮತ್ತು ಈ ವಿಚಾರವನ್ನು ತಿಳಿದ ಜನಗಳು ಈ ತುಂಬ ದೋಷಯುಕ್ತವಾದ ವನವನ್ನು ಪ್ರವೇಶಮಾಡದೆ ಬಿಡುತ್ತಾರೆ.

**ಸುದ್ಯುಮ್ನಸ್ತು ತದಜ್ಞಾನಾತ್ ಪ್ರವಿಷ್ಟಸ್ಸಚಿವೈಃಸಹ ।**
**ತಥೈವ ಸ್ತ್ರೀತ್ವಮಾಪನ್ನಸ್ತೈಸ್ಸಹೇತಿ ನ ಸಂಶಯಃ ॥೨೪॥**

ಆ ಸುದ್ಯುಮ್ನನು ಆ ವನಕ್ಕೆ ಬಂದಿರುವ ಶಾಪವಿಚಾರವನ್ನು ತಿಳಿಯದೆ ಮಂತ್ರಿಗಳೊಡನೆ ಪ್ರವೇಶಿಸಿದುದರಿಂದ ಅವರೊಡನೆ ತಾನೂ ಹೆಂಗಸಿನ ರೂಪವನ್ನು ಪಡೆದನು. ಈ ವಿಚಾರದಲ್ಲಿ ಸಂದೇಹವಿಲ್ಲವು.

**ಚಿಂತಾವಿಷ್ಟಸ್ಸ ರಾಜರ್ಷಿರ್ನ ಜಗಾಮ ಗೃಹಂ ಹ್ರಿಯಾ ।**
**ವಿಚಚಾರ ಬಹಿಸ್ತಸ್ಮಾದ್ವನದೇಶಾದಿತಸ್ತತಃ ॥೨೫॥**

ಅನಂತರದಲ್ಲಿ ಆ ರಾಜನು ಚಿಂತೆಯಿಂದಲೂ ನಾಚಿಕೆಯಿಂದಲೂ ಕೂಡಿದವನಾಗಿ, ಮನೆಗೆ ಹೋಗದೆ ಆ ವನದ ಹೊರಭಾಗದಲ್ಲಿ ಅಲ್ಲಲ್ಲಿಯೇ ತಿರುಗಾಡುತ್ತಿದ್ದನು.

**ಇಲೇತಿ ನಾಮ ಸಂಪ್ರಾಪ್ತಂ ಸ್ತ್ರೀತ್ವೇ ತೇನ ಮಹಾತ್ಮನಾ ।**
**ವಿಚರಂಸ್ತತ್ರ ಸಂಪ್ರಾಪ್ತೋ ಬುಧಃ ಸೋಮಸುತೋ ಯುವಾ ॥೨೬॥**

ಮಹಾತ್ಮನಾದ ಆ ರಾಜನು ಹೆಂಗಸಾಗಿದ್ದ ಆ ಸಮಯದಲ್ಲಿ ಆ ರಾಜನಿಗೆ ಇಲಾ ಎಂದು ಹೆಸರಾಯಿತು. ಆ ಸಮಯದಲ್ಲಿ ಪ್ರಾಯಸಮರ್ಥನಾದ ಚಂದ್ರನ ಮಗನಾದ ಬುಧನು ಆ ವನದ ಸಮೀಪದಲ್ಲಿ ಸಂಚರಿಸುತ್ತಾ ಅಲ್ಲಿಗೆ ಬಂದನು.

**ಸ್ತ್ರೀಭಿಃ ಪರಿವೃತಾಂ ತಾಂ ತು ದೃಷ್ಟ್ವಾ ಕಾಂತಾಂ ಮನೋರಮಾಂ ।**
**ಹಾವಭಾವಕಲಾಯುಕ್ತಾಂ ಚಕಮೇ ಭಗವಾನ್ ಬುಧಃ ॥೨೭॥**

ಅಲ್ಲಿ ಸ್ತ್ರೀಯರಿಂದ ಪರಿವೃತಳಾಗಿ, ಮನೋಹರಳಾಗಿರುವ, ಹಾವಭಾವ ವಿಲಾಸಾದಿಕೌಶಲದಿಂದ ಕೂಡಿದ ಆ ಇಲೆಯನ್ನು ನೋಡಿ ಮಹಿಮಾಶಾಲಿಯಾದ ಬುಧನು ಅವಳನ್ನು ಮೋಹಿಸಿದನು.

**ಸಾಪಿ ತಂ ಚಕಮೇ ಕಾಂತಂ ಬುಧಂ ಸೋಮಸುತಂ ಪತಿಂ ।**
**ಸಂಯೋಗಸ್ತತ್ರ ಸಂಜಾತಸ್ತಯೋಃ ಪ್ರೇಮ್ಣಾ ಪರಸ್ಪರಂ ॥೨೮॥**

ಚಂದ್ರನ ಪುತ್ರನಾದ ಬುಧನನ್ನು ನೋಡಿ ಇಲೆಯೂ ಕೂಡ ಮನೋಹರನಾದ ಅವನನ್ನು ಅಪೇಕ್ಷಿಸಿದಳು. ಅನಂತರದಲ್ಲಿ ಪರಸ್ಪರ ಪ್ರೀತಿಯಿಂದ ಅವರಿಬ್ಬರಿಗೂ ಸಂಯೋಗವುಂಟಾಯಿತು.

**ಸ ತಸ್ಯಾಂ ಜನಯಾಮಾಸ ಪುರೂರವಸಮಾತ್ಮಜಂ ॥೨೯॥**

ಆ ಬುಧನು ಅವಳಲ್ಲಿ ಪುರೂರವನೆಂಬ ಮಗನನ್ನು ಪಡೆದನು.

**ಸಾ ಪ್ರಸೂತ ಸುತಂ ಬಾಲಾ ಚಿಂತಾವಿಷ್ಟಾ ವನೇ ಸ್ಥಿತಾ ।**
**ಸಸ್ಮಾರ ಸ್ವಕುಲಾಚಾರ್ಯಂ ವಸಿಷ್ಠಂ ಮುನಿಸತ್ತಮಂ ॥೩೦॥**

ಆ ಇಲೆಯು ಪುತ್ರನನ್ನು ಪ್ರಸವಿಸಿ ಅನಂತರದಲ್ಲಿ ತನಗೆ ಪುರುಷತ್ವ ಹೋಗಿ ಸ್ತ್ರೀತ್ವಪ್ರಾಪ್ತವಾದುದಕ್ಕಾಗಿ ಚಿಂತಿಸುತ್ತಾ ಆ ವನದಲ್ಲಿಯೇ ಇದ್ದಳು ಮತ್ತು ತನ್ನ ಕುಲಗುರುವಾದ ಋಷಿಶ್ರೇಷ್ಠನಾದ ವಸಿಷ್ಠಮುನಿಯನ್ನು ಸ್ಮರಿಸಿಕೊಂಡಳು.

**ಸ ತದ್ವಾಽಸ್ಯ ದಶಾಂ ದೃಷ್ಟ್ವಾ ಸುದ್ಯುಮ್ನಸ್ಯ ಕೃಪಾನ್ವಿತಃ ।**
**ಅತೋಷಯನ್ಮಹಾದೇವಂ ಶಂಕರಂ ಲೋಕಶಂಕರಂ ॥೩೧॥**

ಆ ವಸಿಷ್ಠಋಷಿಯು ಸುದ್ಯುಮ್ನನ ಆ ಅವಸ್ಥೆಯನ್ನು ನೋಡಿ ಕನಿಕರಪಟ್ಟು, ಲೋಕಕ್ಕೆಲ್ಲಾ ಸುಖವನ್ನುಂಟುಮಾಡುವ ಶಂಕರನನ್ನು ಪೂಜಾಧ್ಯಾನಾದಿಗಳಿಂದ ಸಂತೋಷಗೊಳಿಸಿದನು.

**ತಸ್ಮೈ ಸ ಭಗವಾಂಸ್ತುಷ್ಟಃ ಪ್ರದದೌ ವಾಂಛಿತಂ ವರಂ ।**
**ವಸಿಷ್ಠಃ ಪ್ರಾರ್ಥಯಾಮಾಸ ಪುಂಸ್ತ್ವಂ ರಾಜ್ಞಃ ಪ್ರಿಯಸ್ಯ ಚ ॥೩೨॥**

ಸಂತೋಷಪಟ್ಟ ಆ ಶಿವನು ವಸಿಷ್ಠನಿಗೆ ಇಷ್ಟವಾದ ವರವನ್ನು ಕೊಟ್ಟನು. ವಸಿಷ್ಠನೂ ಕೂಡ ತನಗೆ ಪ್ರಿಯನಾದ ಆ ರಾಜನಿಗೆ ಪುರುಷತ್ವವನ್ನು ಅನುಗ್ರಹಿಸು ವಂತೆ ಶಂಕರನನ್ನು ಬೇಡಿಕೊಂಡನು.

**ಶಂಕರಸ್ತು ನಿಜಾಂ ವಾಚಂ ಋತಾಂ ಕುರ್ವನ್ನುವಾಚ ಹ ।**
**ಮಾಸಂ ಪುಮಾಂಸ್ತು ಭವಿತಾ ಮಾಸಂ ಸ್ತ್ರೀಭೂಪತಿಃ ಕಿಲ ॥೩೩॥**

ಆ ಶಂಕರನು ತನ್ನ ಪೂರ್ವದ ಮಾತನ್ನು ಎಂದರೆ ಆ ವನಕ್ಕೆ ಕೊಟ್ಟ ಶಾಪವಿಚಾರವನ್ನು ಸುಳ್ಳುಮಾಡದಿರುವುದಕ್ಕಾಗಿ, ರಾಜನು ಒಂದು ತಿಂಗಳು ಪುರುಷನೂ ಒಂದು ತಿಂಗಳು ಸ್ತ್ರೀಯೂ ಆಗುತ್ತಾನೆಂದು ಹೇಳಿದನು.

**ಇತ್ಥಂ ಪ್ರಾಪ್ಯ ವರಂ ರಾಜಾ ಜಗಾಮ ಸ್ವಗೃಹಂ ಪುನಃ ।**
**ಚಕ್ರೇ ರಾಜ್ಯಂ ಸ ಧರ್ಮಾತ್ಮಾ ವಸಿಷ್ಠಸ್ಯಾಪ್ಯನುಗ್ರಹಾತ್ ॥೩೪॥**

ಆ ರಾಜನು ಈ ರೀತಿಯಾಗಿ ವರವನ್ನು ಪಡೆದು ತನ್ನ ಮನೆಗೆ ಹೋಗಿ ಸುಖವಾಗಿದ್ದನು ಮತ್ತು ವಸಿಷ್ಠಋಷಿಯ ಅನುಗ್ರಹದಿಂದ ಆ ಧರ್ಮಾತ್ಮನಾದ ರಾಜನು ರಾಜ್ಯಭಾರವನ್ನು ಮಾಡುತ್ತಿದ್ದನು.

**ಸ್ತ್ರೀತ್ವೇ ತಿಷ್ಠತಿ ಹರ್ಮ್ಯೇಷು ಪುಂಸ್ತ್ವೇ ರಾಜ್ಯಂ ಪ್ರಶಾಸ್ತಿ ಚ ।**
**ಪ್ರಜಾಸ್ತಸ್ಮಿನ್ ಸಮುದ್ವಿಗ್ನಾ ನಾಭ್ಯನಂದನ್ಮಹೀಪತಿಂ ॥೩೫॥**

ಆ ರಾಜನು ತಾನು ಹೆಂಗಸಾಗಿರುವ ಸಮಯದಲ್ಲಿ ಅಂತಃಪುರದಲ್ಲಿ ವಾಸ ಮಾಡುತ್ತಲೂ, ಪುರುಷನಾಗಿರುವಾಗ ರಾಜಕಾರ್ಯವನ್ನು ನಿರ್ವಹಿಸುತ್ತಲೂ ಇರುವುದನ್ನು ನೋಡಿ ಪ್ರಜೆಗಳು ಖಿನ್ನರಾಗಿ ಇವನ ಈ ವಿಧವಾದ ವರ್ತನವನ್ನು ಮೆಚ್ಚಲಿಲ್ಲ.

**ಕಾಲೇ ತು ಯೌವನಂ ಪ್ರಾಪ್ತಃ ಪುತ್ರಃ ಪುರೂರವಾಸ್ತದಾ ।**
**ಪ್ರತಿಷ್ಠಾಂ ನೃಪತಿಸ್ತಸ್ಮೈ ದತ್ವಾ ರಾಜ್ಯಂ ವನಂ ಯಯೌ ॥೩೬॥**

ಈ ರೀತಿಯಾಗಿ ಕೆಲವು ಕಾಲವು ಕಳೆಯಿತು. ಅಷ್ಟು ಹೊತ್ತಿಗೆ ಮಗನಾದ ಪುರೂರವನು ಯೌವನಶಾಲಿಯಾದನು. ಆಗ ಸುದ್ಯುಮ್ನರಾಜನು ಆ ಪ್ರತಿಷ್ಠಾಪುರದ ರಾಜ್ಯಭಾರವನ್ನು ಪುರೂರವನಿಗೆ ವಹಿಸಿ ತಾನು ಕಾಡಿಗೆ ಹೋದನು.

**ಗತ್ವಾ ತಸ್ಮಿನ್ ವನೇ ರಮ್ಯೇ ನಾನಾದ್ರುಮಸಮಾಕುಲೇ ।**
**ನಾರದಾನ್ಮಂತ್ರಮಾಸಾದ್ಯ ನವಾಕ್ಷರಮನುತ್ತಮಂ ॥೩೭॥**

ಅನೇಕ ವಿಧವಾದ ಮರಗಳಿಂದ ನಿಬಿಡವಾದ, ನೋಡಲು ಸುಂದರವಾದ ಆ ವನದಲ್ಲಿ ರಾಜನು ನಾರದ ಮಹರ್ಷಿಯಿಂದ ಉತ್ತಮವಾದ ನವಾಕ್ಷರಮಂತ್ರೋಪದೇಶವನ್ನು ಪಡೆದನು.

**ಜಜಾಪ ಮಂತ್ರಮತ್ಯರ್ಥಂ ಪ್ರೇಮಪೂರಿತಮಾನಸಃ ।**

ರಾಜನು ಪ್ರೀತಿಯಿಂದ ತುಂಬಿದ ಮನಸ್ಸುಳ್ಳವನಾಗಿ ಬಹಳ ಶ್ರದ್ಧೆಯಿಂದ ಆ ಮಂತ್ರವನ್ನು ಚೆನ್ನಾಗಿ ಜಪಮಾಡಿದನು.

**ತೇನ ತುಷ್ಟಾ ತದಾ ದೇವೀ ಸಗುಣಾ ತಾರಿಣೀ ಶಿವಾ ॥೩೮॥**
**ಸಿಂಹಾರೂಢಾ ಸ್ಥಿತಾ ಚಾಗ್ರೇ ದಿವ್ಯರೂಪಾ ಮನೋರಮಾ ।**

ಆ ಮಂತ್ರಜಪದಿಂದ ಸಂತುಷ್ಟಳಾದ ಸಗುಣರೂಪಿಣಿಯಾದ ಭಕ್ತರನ್ನು ಸಂಸಾರದಿಂದ ದಾಟಿಸುವ, ಮಂಗಳಕರಳಾದ, ಪಾರ್ವತೀದೇವಿಯು ಬಹಳ ಸುಂದರವಾದ ಆಕಾರವನ್ನು ಧರಿಸಿ ಸಿಂಹಾರೂಢಳಾಗಿ ಅವನ ಮುಂದೆ ಪ್ರತ್ಯಕ್ಷವಾದಳು.

**ವಾರುಣೀಪಾನಸಂಮತ್ತಾ ಮದಾಘೂರ್ಣಿತಲೋಚನಾ ॥೩೯॥**
**ದೃಷ್ಟ್ವಾ ತಾಂ ದಿವ್ಯರೂಪಾಂ ಚ ಪ್ರೇಮಾಕುಲಿತಲೋಚನಃ ।**
**ಪ್ರಣಮ್ಯ ಶಿರಸಾ ಪ್ರೀತ್ಯಾ ತುಷ್ಟಾವ ಜಗದಂಬಿಕಾಂ ॥೪೦॥**

ಮದ್ಯಪಾನದಿಂದ ಮದಹತ್ತಿದವಳಾಗಿದ್ದ ಆ ದೇವಿಯ ಕಣ್ಣುಗಳು ಅದರ ಮತ್ತಿನಿಂದ ತಿರುಗುತ್ತಿದ್ದುವು. ಹೀಗಿರುವ ಶ್ರೇಷ್ಠವಾದ ರೂಪವುಳ್ಳ ಆ ದೇವಿಯನ್ನು ನೋಡಿ ಆ ರಾಜನು ಬಹಳ ಸಂತೋಷಗೊಂಡು ಭಕ್ತಿಪ್ರೇಮಾದಿಗಳಿಂದ ಅರಳಿದ ಕಣ್ಣುಳ್ಳವನಾಗಿ ಆ ಲೋಕಜನನಿಯಾದ ದೇವಿಗೆ ಸಾಷ್ಟಾಂಗನಮಸ್ಕಾರವನ್ನು ಮಾಡಿ ಪ್ರೀತಿಯಿಂದ ಹೀಗೆ ಸ್ತೋತ್ರಮಾಡಿದನು.

**ದಿವ್ಯಂ ಚ ತೇ ಭಗವತಿ ಪ್ರಥಿತಂ ಸ್ವರೂಪಂ**
**ದೃಷ್ಟಂ ಮಯಾ ಸಕಲಲೋಕಹಿತಾನುರೂಪಂ ।**
**ವಂದೇ ತ್ವದಂಘ್ರಿಕಮಲಂ ಸುರಸಂಘಸೇವ್ಯಂ**
**ಕಾಮಪ್ರದಂ ಜನನಿ ಚಾಪಿ ವಿಮುಕ್ತಿದಂ ಚ ॥೪೧॥**

ಓ ಪೂಜ್ಯಳಾದ ದೇವಿಯೇ, ನಿನ್ನ ಈ ಪ್ರಸಿದ್ಧವಾದ, ಎಲ್ಲಾ ಲೋಕಗಳಿಗೂ ಹಿತವನ್ನುಂಟುಮಾಡುವ ಶ್ರೇಷ್ಠವಾದ ರೂಪವನ್ನು ನಾನು ಕಂಡೆನು. ಮಹಾಮಹಿಮಳಾದ ಓ ತಾಯಿಯೇ, ದೇವತೆಗಳಿಂದಲೂ ಸೇವಿಸಲ್ಪಡುತ್ತಿರುವ, ಭಕ್ತರಿಗೆ ಬೇಕಾದ ಇಷ್ಟಾರ್ಥಗಳನ್ನು ಒದಗಿಸಿ ಕೊಡುವ, ಕೊನೆಯಲ್ಲಿ ಮೋಕ್ಷಸುಖವನ್ನೂ ಕೊಡುವ ನಿನ್ನ ಪಾದಕಮಲಗಳಿಗೆ ನಮಸ್ಕಾರವು.

**ಕೋ ವೇತ್ತಿ ತೇಽಮ್ಬ ಭುವಿ ಮರ್ತ್ಯತನುರ್ನಿಕಾಮಂ**
**ಮುಹ್ಯಂತಿ ಯತ್ರ ಮುನಯಶ್ಚ ಸುರಾಶ್ಚ ಸರ್ವೇ ।**
**ಐಶ್ವರ್ಯಮೇತದಖಿಲಂ ಕೃಪಣೇ ದಯಾಂ ಚ**
**ದೃಷ್ಟ್ವೈವ ದೇವಿ ಸಕಲಂ ಕಿಲ ವಿಸ್ಮಯೋ ಮೇ ॥೪೨॥**

ಓ ತಾಯಿಯೇ, ಯಾವ ನಿನ್ನ ಮಹಿಮೆಯನ್ನು ಋಷಿಗಳೂ, ಎಲ್ಲ ದೇವತೆಗಳೂ ತಿಳಿಯಲಾರದೆ ಇದ್ದಾರೆಯೋ, ಅಂಥ ನಿನ್ನ ಮಹಿಮೆಯನ್ನೂ, ದುಃಖಿತ

ರಾದವರಲ್ಲಿ ನಿನಗಿರುವ ಕರುಣೆಯನ್ನೂ ಭೂಲೋಕದಲ್ಲಿರುವ ಮರಣಶೀಲವಾದ ದೇಹವುಳ್ಳ ಮನುಷ್ಯನಾದವನು ಯಾವನು ತಾನೇ ಸಮಗ್ರವಾಗಿ ತಿಳಿಯುತ್ತಾನೆ. ಓ ದೇವಿಯೇ, ಈ ರೀತಿಯಾದ ನಿನ್ನ ಎಲ್ಲ ವೈಭವವನ್ನೂ, ದೀನನಾದ ನನ್ನಲ್ಲಿ ನಿನಗಿರುವ ದಯೆಯನ್ನೂ ನೋಡಿ ನನಗೆ ಬಹಳ ಆಶ್ಚರ್ಯವಾಗಿದೆ.

ಶಂಭುರ್ಹರಿಃ ಕಮಲಜೋ ಮಘವಾ ರವಿಶ್ಚ
ವಿತ್ತೇಶವಹ್ನಿವರುಣಾಃ ಪವನಶ್ಚ ಸೋಮಃ ।
ಜಾನಂತಿ ನೈವ ವಸವೋಽಪಿ ಹಿ ತೇ ಪ್ರಭಾವಂ
ಬುಧ್ಯೇತ್ಕಥಂ ತವ ಗುಣಾನಗುಣೋ ಮನುಷ್ಯಃ ॥೪೩॥

ಓ ದೇವಿಯೇ, ಶಿವನು, ವಿಷ್ಣುವು, ಬ್ರಹ್ಮನು, ಇಂದ್ರನು, ಸೂರ್ಯನು, ಕುಬೇರನು, ಅಗ್ನಿಯು, ವರುಣನು, ವಾಯುವು, ಚಂದ್ರನು, ಅಷ್ಟವಸುಗಳು, ಇಂತಹ ದೇವತೆಗಳಲ್ಲಿ ಪ್ರಮುಖರಾದವರೂ ಕೂಡ ನಿನ್ನ ಮಹಿಮೆಯನ್ನು ಸಂಪೂರ್ಣವಾಗಿ ತಿಳಿಯಲಾರರು. ಹೀಗಿರುವಲ್ಲಿ ಧ್ಯಾನ, ತಪಸ್ಸು ಮುಂತಾದ ಗುಣಗಳಿಲ್ಲದ ಮನುಷ್ಯನಾದ ನಾನು ಹೇಗೆ ನಿನ್ನ ಮಹಿಮೆಯನ್ನು ಸಮಗ್ರವಾಗಿ ತಿಳಿದೇನು ?

ಜಾನಾತಿ ವಿಷ್ಣುರಮಿತದ್ಯುತಿರಂಬ ಸಾಕ್ಷಾತ್
ತ್ವಾಂ ಸಾತ್ತ್ವಿಕೀಂ ಉದಧಿಜಾಂ ಸಕಲಾರ್ಥದಾಂ ಚ ।
ಕೋ ರಾಜಸೀಂ ಹರ ಉಮಾಂ ಕಿಲ ತಾಮಸೀಂ ತ್ವಾಂ
ವೇದಾಂಬಿಕೇ ನ ತು ಪುನಃ ಖಲುನಿರ್ಗುಣಾಂ ತ್ವಾಂ ॥೪೪॥

ಓ ತಾಯಿಯೇ, ಅಪಾರವಾದ ತೇಜಸ್ಸುಳ್ಳ ವಿಷ್ಣುವು ನಿನ್ನನ್ನು ಎಲ್ಲಾ ಇಷ್ಟಾರ್ಥಗಳನ್ನು ಕೊಡುವ ಸತ್ತ್ವಗುಣವೇ ಮುಖ್ಯವಾಗಿವುಳ್ಳ, ಕ್ಷೀರಸಮುದ್ರದಿಂದ ಹುಟ್ಟಿದ ಲಕ್ಷ್ಮಿಯನ್ನಾಗಿ ಚೆನ್ನಾಗಿ ತಿಳಿದಿರುತ್ತಾನೆ. ಬ್ರಹ್ಮನು ರಜೋಗುಣವೇ ಮುಖ್ಯವಾಗಿರುವ ನಿನ್ನನ್ನು ಸರಸ್ವತೀರೂಪಳೆಂದು ತಿಳಿದಿದ್ದಾನೆ. ಶಿವನು ನಿನ್ನನ್ನು ತಮೋಗುಣವೇ ಪ್ರಧಾನವಾಗಿವುಳ್ಳ ಪಾರ್ವತಿಯನ್ನಾಗಿ ತಿಳಿದಿದ್ದಾನೆ. ಹೀಗೆ ಇವರು ನಿನ್ನ ಸಗುಣವೂ ಸಾಕಾರವೂ ಆದ ರೂಪಗಳನ್ನು ತಿಳಿದಿದ್ದಾಗ್ಯೂ, ಸಾತ್ತ್ವಿಕ, ರಾಜಸ, ತಾಮಸಗಳೆಂಬ ಮೂರು ಗುಣಗಳ ಸಾಮ್ಯಾವಸ್ಥಾರೂಪಳಾದ ಎಂದರೆ, ಗುಣ, ಆಕಾರ, ಕ್ರಿಯೆ ಇವುಗಳ ಸಂಪರ್ಕವಿಲ್ಲದ ಗುಣಾತೀತಳಾದ ನಿನ್ನನ್ನು ಯಾರು ತಾನೇ ತಿಳಿದಿದ್ದಾರೆ? ಯಾರೂ ತಿಳಿದಿಲ್ಲವು.

ಕ್ವಾಹಂ ಸುಮಂದಮತಿರಪ್ರಥಿತಪ್ರಭಾವಃ
ಕ್ವಾಯಂ ತವಾತಿನಿಪುಣೋ ಮಯಿ ಸುಪ್ರಸಾದಃ ।
ಜಾನೇ ಭವಾನಿ ಚರಿತಂ ಕರುಣಾಸಮೇತಂ
ಯತ್ಸೇವಕಾಂಶ್ಚ ದಯಸೇ ತ್ವಯಿ ಭಾವಯುಕ್ತಾನ್ ॥೪೫॥

ಓ ಅಂಬ, ಏನೂ ತಿಳಿಯದ ಪ್ರಸಿದ್ಧನೂ ಅಲ್ಲದ, ದಡ್ಡನಾದ, ನಾನು ಎಲ್ಲಿ? ನಿನ್ನ ಅಸದೃಶವಾದ ಮಹಾಮಹಿಮೆಯೆಲ್ಲಿ? ಹೀಗಿದ್ದರೂ ನನ್ನ ವಿಷಯದಲ್ಲಿ ನಿನಗಿರುವ, ತಪ್ಪದೆ ಫಲಕಾರಿಯಾದ ಅನುಗ್ರಹವೆಲ್ಲಿ? ಹೇ ಭವಾನಿ, ಕರುಣೆಯಿಂದ ಸಹಿತವಾದ ನಿನ್ನ ನಡೆವಳಿಕೆಯ ಸ್ವಭಾವವನ್ನು ನಾನು ಬಲ್ಲೆ. ಏಕೆಂದರೆ ನಿನ್ನಲ್ಲಿ ಮನಸ್ಸಿಟ್ಟಿರುವ ಭಕ್ತರಾದ ಸೇವಕರನ್ನೂ ನೀನು ಕಾಪಾಡುವವಳಾಗಿರುತ್ತೀಯೆ. ಎಂದರೆ, ನೀನು ಕರುಣಾಶೀಲಳಾದುದರಿಂದ ನಿನ್ನ ಭಕ್ತರು ಅಲ್ಪವಾದ ಯೋಗ್ಯತೆಯುಳ್ಳವರಾಗಿದ್ದರೂ, ಸೇವಕರಾಗಿದ್ದರೂ ಅವರನ್ನು ತಪ್ಪದೆ ಪ್ರಸನ್ನಳಾಗಿ ಅನುಗ್ರಹಿಸುತ್ತೀಯೆ ಎಂದು ತಾತ್ಪರ್ಯವು.

ವೃತ್ತಸ್ತ್ವಯಾ ಹರಿರಸೌ ವನಜೇಶಯಾಪಿ
ನೈವಾಚರತ್ಯಪಿ ಮುದಂ ಮಧುಸೂದನಶ್ಚ ।
ಪಾದೌ ತವಾದಿಪುರುಷಃ ಕಿಲ ಪಾವಕೇನ
ಕೃತ್ವಾ ಕರೋತಿ ಚ ಕರೇಣ ಶುಭೌ ಪವಿತ್ರೌ ॥೪೬॥

ನಿನ್ನ ಬೆಂಬಲದಿಂದ ಮಧುವೆಂಬ ರಾಕ್ಷಸನನ್ನು ಸಂಹರಿಸಿದ ವಿಷ್ಣುವು ಕಮಲದಲ್ಲಿ ವಾಸಮಾಡುವ ಲಕ್ಷ್ಮಿಯನ್ನು ಪಡೆದಿದ್ದರೂ ಅವಳು ನಿನ್ನ ಅನಂತಶಕ್ತಿಗಳಲ್ಲಿ ಒಂದು ಶಕ್ತಿಮಾತ್ರವಾಗಿರುವುದರಿಂದ ಪರಾಶಕ್ತಿ ಸ್ವರೂಪಳಾದ ನಿನ್ನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರದೆ ನಿನಗೆ ತಕ್ಕವನಲ್ಲವೆಂದು ತಿಳಿದು ತೃಪ್ತಿ ಸಂತೋಷದಿಂದ ವ್ಯವಹಾರಮಾಡುತ್ತಿಲ್ಲವು. ಆದರೂ ನಿನ್ನಿಂದ ಮೊದಲು ಸೃಷ್ಟಿಸಲ್ಪಟ್ಟ ಇಂತಹ ವಿಷ್ಣುವು ಆ ಲಕ್ಷ್ಮಿಯ ಕೈಗಳಿಂದ ತನ್ನ ಕಾಲನ್ನು ಒತ್ತಿಸಿಕೊಳ್ಳುತ್ತಿರುವಿಕೆಯು ಅದನ್ನು ಲೋಕಾನುಗ್ರಹಕಾರ್ಯದಲ್ಲಿ ಬೇಕಾದ ಪರಿಶುದ್ಧಿಯುಳ್ಳುದನ್ನಾಗಿಯೂ, ಮಂಗಳಕರವಾದುದನ್ನಾಗಿಯೂ ಮಾಡಿಕೊಳ್ಳುವುದಕ್ಕೇ ಹೊರತು ತನ್ನ ಸುಖಕ್ಕಲ್ಲವು. ನಿನ್ನ ಶಕ್ತಿಯು ಬೆಂಕಿಯಂತೆ ದೋಷಗಳನ್ನು ಸುಟ್ಟು ನಿರ್ಮೂಲಮಾಡಿ ಶುದ್ಧಿಯನ್ನುಂಟುಮಾಡಬಲ್ಲುದು. ಈ ಕಾರಣದಿಂದ ವಿಷ್ಣುವು ಲೋಕದ ರಕ್ಷಣ ಕಾರ್ಯವನ್ನು ಮಾಡುತ್ತಿದಾನೆ.

ವಾಂಛತ್ಯತೋ ಹರಿರಶೋಕ ಇವಾತಿಕಾಮಂ
ಪಾದಾಹತಿಂ ಪ್ರಮುದಿತಃ ಪುರುಷಃ ಪುರಾಣಃ ।
ತಾಂ ತ್ವಂ ಕರೋಷಿ ರುಷಿತಾ ಪ್ರಣತಂ ಚ ಪಾದೇ
ದೃಷ್ಟ್ವಾ ಪತಿಂ ಸಕಲದೇವನುತಂ ಸ್ಮರಾರ್ತಂ ॥೪೭॥

ಎಲ್ಲರಿಗಿಂತ ಹಿರಿಯ ಪುರುಷನಾದ ವಿಷ್ಣುವು ನಿನ್ನ ಪಾದಗಳ ಸಂಬಂಧವನ್ನು ಬಹುವಾಗಿ ಅಪೇಕ್ಷಿಸುತ್ತಾನೆ. ಅಶೋಕವೃಕ್ಷವು ಹೂವು ಹಣ್ಣುಗಳನ್ನು ಹೊರಹೊಮ್ಮಿಸಬೇಕಾದರೆ ಹೇಗೆ ಉತ್ತಮರಾದ ಸ್ತ್ರೀಯರ ಪಾದತಾಡನವನ್ನ ಪೇಕ್ಷಿಸುವುದೋ ಅದರಂತೆಯೇ ಆ ವಿಷ್ಣುವೂ ಕಾಮಪೀಡಿತನಾಗಿ, ಕೋಪಗೊಂಡಿದ್ದ ನಿನ್ನನ್ನು ಸಮಾಧಾನಪಡಿಸಲು ನಮಸ್ಕರಿಸಿ ಕ್ಷಮೆಯನ್ನು ಬೇಡುತ್ತಿರುವ ಸಮಯದಲ್ಲಿ ನೀನೂ ಅವನ ಆ ಇಚ್ಛೆಯನ್ನು ಪೂರ್ತಿಗೊಳಿಸುತ್ತೀಯೆ. ಪ್ರಣಯಕೋಪವೂ ತಮೋವೃತ್ತಿಯೇ ಆದುದರಿಂದ ನಿನಗೆ ದೋಷವಿಲ್ಲವು. ಎಲ್ಲ ದೇವತೆಗಳಿಂದ ಹೊಗಳಿಸಿಕೊಳ್ಳುವ ವಿಷ್ಣುವಿನ ಮನೋರಥವೂ ಪೂರ್ಣವಾದಂತಾಯಿತು ಎಂದು ತಾತ್ಪರ್ಯವು.

ವಕ್ಷಃಸ್ಥಲೇ ವಸಸಿ ದೇವಿ ಸದೈವ ತಸ್ಯ
ಪರ್ಯಂಕವತ್ಸುಚರಿತೇ ವಿಪುಲೇಽತಿಶಾಂತೇ ।
ಸೌದಾಮನೀವ ಸುಘನೇ ಸುವಿಭೂಷಿತೇ ಚ
ಕಿಂ ತೇನ ವಾಹನಮಸೌ ಜಗದೀಶ್ವರೋಽಪಿ ॥೪೮॥

ಓ ಒಳ್ಳೆಯ ನಡತೆಯುಳ್ಳ ದೇವಿಯೇ, ನೀನು ವಿಷ್ಣುವಿನ ವಕ್ಷಸ್ಸ್ಥಲದಲ್ಲಿ ಯಾವಾಗಲೂ ಮಂಚದ ಮೇಲೆ ಪವಡಿಸಿರುವಂತೆ ನೆಲೆಸಿರುತ್ತೀಯೆ. ಕಪ್ಪುಬಣ್ಣದ ಮೈಯುಳ್ಳ ವಿಷ್ಣುವಿನ ಆ ಹೃದಯವು ವಿಸ್ತಾರವಾಗಿಯೂ, ಚೆನ್ನಾಗಿ ಅಲಂಕರಿಸಲ್ಪಟ್ಟುದಾಗಿಯೂ, ಶಾಂತಿಗುಣಪ್ರಧಾನವಾದುದಾಗಿಯೂ ಇದೆ. ಇಂಥ ವಕ್ಷಸ್ಸ್ಥಲದಲ್ಲಿ ಕಪ್ಪಾದ ಮೇಘದ ಮಧ್ಯದಲ್ಲಿ ಬಳ್ಳಿಮಿಂಚಿನಂತೆ ನೀನು ವಾಸಮಾಡುತ್ತೀಯೆ. ಎಲ್ಲ ಪ್ರಪಂಚಕ್ಕೂ ಒಡೆಯನಾದರೂ ಆ ವಿಷ್ಣುವೂ ಹೀಗೆ ನಿನಗೆ ವಾಹನದಂತೆ ಇದ್ದಾನಲ್ಲವೇ ? ಆದುದರಿಂದ ಅನಂತಶಕ್ತಿಸ್ವರೂಪಳೂ, ಮೂಲಪ್ರಕೃತಿ ಸ್ವರೂಪಳೂ ಆದ ನಿನ್ನ ಮಹಿಮೆಯು ವರ್ಣನೆಗೆ ನಿಲುಕದಂಥಾದ್ದಾಗಿದೆ !

ತ್ವಂ ಚೇಜ್ಜಹಾಸಿ ಮಧುಸೂದನಮಂಬ ಕೋಪಾ-
ನ್ನೈವಾರ್ಚಿತೋಽಪಿ ಸ ಭವೇತ್ಕಿಲ ಶಕ್ತಿಹೀನಃ ।

**ಪ್ರತ್ಯಕ್ಷಮೇವ ಪುರುಷಂ ಸ್ವಜನಾಸ್ತ್ಯಜಂತಿ**
**ಶಾಂತಂ ಶ್ರಿಯೋಜ್ಝಿತಮತೀವ ಗುಣೈರ್ವಿಯುಕ್ತಂ ॥೪೯॥**

ಓ ತಾಯಿಯೇ, ನೀನು ಪ್ರಣಯಕೋಪದಿಂದಲೂ ಆ ವಿಷ್ಣುವನ್ನು ಬಿಟ್ಟರು ವುದಾದರೆ ಶಕ್ತಿಯಿಲ್ಲದ ಅವನನ್ನು ಲೋಕದಲ್ಲಿ ಯಾರೂ ಪೂಜಿಸುವುದಿಲ್ಲ. ಲೋಕ ದಲ್ಲಿ ಗುಣಗಳಿಲ್ಲದ, ಐಶ್ವರ್ಯವಿಲ್ಲದ ಅಥವಾ ಸಂಪತ್ತನ್ನು ಕಳೆದುಕೊಂಡಿರುವ ಮನುಷ್ಯನು, ಅವನು ಶಾಂತಿಗುಣವುಳ್ಳವನಾದರೂ ಅವನನ್ನು ಅವನ ಸ್ವಕೀಯ ರಾದ ಜನಗಳೇ ಬಿಡುತ್ತಾರೆಂಬುದು ಪ್ರತ್ಯಕ್ಷವಾಗಿಯೇ ಕಂಡುಬಂದು ಇದೆ.

**ಬ್ರಹ್ಮಾದಯಸ್ಸುರಗಣಾ ನ ತು ಕಿಂ ಯುವಶ್ಯೋ**
**ಯೇ ತ್ವತ್ಪದಾಂಬುಜಮಹರ್ನಿಶಮಾಶ್ರಯಂತಿ ।**
**ಮನ್ಯೇ ತ್ವಯೈವ ವಿಹಿತಾಃ ಖಲು ತೇ ಪುಮಾಂಸಃ**
**ಕಿಂ ವರ್ಣಯಾಮಿ ತವ ಶಕ್ತಿಮನಂತವೀರ್ಯೇ ॥೫೦॥**

ಸರ್ವಶಕ್ತಿಸ್ವರೂಪಳಾದುದರಿಂದ ಅಪಾರವಾದ ಪರಾಕ್ರಮವುಳ್ಳವಳೇ, ನಾನು ಹೆಂಗಸಾಗಿದ್ದೇನೆ. ಆದರೇನು ? ನನ್ನಂತೆಯೇ ನಿನ್ನ ಪಾದಕಮಲಗಳನ್ನು ಯಾವಾ ಗಲೂ ಆಶ್ರಯಿಸುತ್ತಿರುವ ಬ್ರಹ್ಮಾದಿಗಳೂ ಮಣಿದ್ವೀಪದಲ್ಲಿ ಹೆಂಗಸರಾಗಿರಲಿಲ್ಲವೇ ? (ಈ ಕಥೆಯು ಪುರಾಣಾಂತರದಲ್ಲಿಯೂ ಪ್ರಸಿದ್ಧವು.) ಅವರನ್ನು ನೀನೇ ಪುರುಷರನ್ನಾಗಿ ಮಾಡಲಿಲ್ಲವೇ ? ಹೀಗಿರುವಲ್ಲಿ ನಿನ್ನ ಶಕ್ತಿಯನ್ನು ನಾನು ಎಷ್ಟು ವರ್ಣಿಸಲಿ ?

**ತ್ವಂ ನಾಪುಮಾನ್ನ ಚ ಪುಮಾನಿತಿ ಮೇ ವಿಕಲ್ಪೋ**
**ಯಾ ಕಾಸಿ ದೇವಿ ಸಗುಣಾ ನನು ನಿರ್ಗುಣಾ ವಾ ।**
**ತಾಂ ತ್ವಾಂ ನಮಾಮಿ ಸತತಂ ಕಿಲ ಭಾವಯುಕ್ತೋ**
**ವಾಂಛಾಮಿ ಭಕ್ತಿಮಚಲಾಂ ತ್ವಯಿ ಮಾತರಂತೇ ॥೫೧॥**

ಓ ತಾಯಿಯೇ, ನೀನು ಪುರುಷರೂಪವಿಲ್ಲದವಳೂ ಅಲ್ಲವು. ಹಾಗೆಯೇ ಪುರುಷನ ರೂಪವುಳ್ಳವಳೂ ಅಲ್ಲವು. ಏಕೆಂದರೆ, ಗುಣತ್ರಯದ ಸಾಮ್ಯಾವಸ್ಥಾರೂಪ ವಾದ ಪ್ರಕೃತಿಯೇ ಉಪಾಧಿಯಾಗಿ ಉಳ್ಳ ಬ್ರಹ್ಮನಲ್ಲಿ ಲಿಂಗತ್ರಯ ಮುಂತಾದ ಭೇದಗಳ ಸಂಪರ್ಕವೇ ಇಲ್ಲ. ನೀನು ಅಂಥ ರೂಪಗಳನ್ನು ಮಿರಿರುವವಳು ಎಂದು ತಾತ್ಪರ್ಯವು. ಆದುದರಿಂದ ನೀನು ಇಂಥ ರೂಪವುಳ್ಳವಳೆಂದು ನಿರ್ಣಯಿಸಿ ಹೇಳ

ಲಾರೆನು. ನಿನ್ನ ರೂಪವು ಹೇಗಾದರೂ ಇರಲಿ, ನೀನು ಗುಣರಹಿತಳೂ ಅಲ್ಲವು. ಗುಣಸಹಿತಳೂ ಅಲ್ಲದವಳಾಗಿದ್ದೀಯೆ. ಹೀಗೆ ನೀನು ಸಗುಣಳೂ ಸಾಕಾರಳೂ ಆಗಿಯಾದರೂ ಇರು, ಅಥವಾ ನಿರ್ಗುಣಳೂ ನಿರಾಕಾರಳೂ ಆಗಿಯಾದರೂ ಇರು. ಅಂಥ ನಿನ್ನನ್ನು ನಾನು ಭಕ್ತಿಯುಳ್ಳವನಾಗಿ ನಿನಗೆ ನಮಸ್ಕಾರಮಾಡಿ ಕೊನೆಗೆ ಬೇಡುವುದೇನೆಂದರೆ, ನನಗೆ ತಾಯಿಯಾದ ನಿನ್ನಲ್ಲಿರುವ ಭಕ್ತಿಯು ದೃಢವಾದು ದಾಗಿರಲಿ ಎಂದು ಬೇಡುತ್ತೇನೆ ಎಂದು ದೇವಿಯನ್ನು ಸ್ತೋತ್ರಮಾಡಿದನು.

|| ಸೂತ ಉವಾಚ ||

**ಇತಿ ಸ್ತುತ್ವಾ ಮಹೀಪಾಲೋ ಜಗಾಮ ಶರಣಂ ತದಾ ।**
**ಪರಿತುಷ್ಟಾ ದದೌ ದೇವೀ ತತ್ರ ಸಾಯುಜ್ಯಮಾತ್ಮನಿ ॥೫೨॥**

ಸೂತನು ಹೇಳಿದನು—ಸುದ್ಯುಮ್ನರಾಜನು ಈ ರೀತಿಯಾಗಿ ಧ್ಯಾನ ಸಹಿತವಾಗಿ ಸ್ತೋತ್ರಮಾಡಿ, ಆ ದೇವಿಯನ್ನು ಶರಣುಹೊಂದಿದನು. ಇದರಿಂದ ಸಂತೋಷಪಟ್ಟ ಆ ದೇವಿಯು ಆ ರಾಜನಿಗೆ ಸಾಯುಜ್ಯರೂಪವಾದ ಎಂದರೆ ತನ್ನಲ್ಲಿ ಐಕ್ಯರೂಪವಾದ ಮುಕ್ತಿಯನ್ನು ಅನುಗ್ರಹಿಸಿದಳು.

**ಸುದ್ಯುಮ್ನಸ್ತು ತತಃ ಪ್ರಾಪ ಪದಂ ಪರಮಕಂ ಸ್ಥಿರಂ ।**
**ತಸ್ಯಾ ದೇವ್ಯಾಃ ಪ್ರಸಾದೇನ ಮುನೀನಾಮಪಿ ದುರ್ಲಭಂ ॥೫೩॥**

ಆಗ ಸುದ್ಯುಮ್ನನು ಆ ದೇವಿಯ ಅನುಗ್ರಹದಿಂದ ಮನನಶೀಲರಾದ ಋಷಿ ಗಳಿಂದಲೂ ಹೊಂದಲಸಾಧ್ಯವಾದ, ನಾಶವಾಗದ ನಿತ್ಯವಾಗಿರುವ ಉತ್ತಮವಾದ ಸದ್ಗತಿಯನ್ನು ಹೊಂದಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ದ್ವಾದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹನ್ನೆರಡನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

## || ತ್ರಯೋದಶೋಽಧ್ಯಾಯಃ ||

### ಹದಿಮೂರನೆಯ ಅಧ್ಯಾಯವು

|| ಓಂ ||

|| ಸೂತ ಉವಾಚ ||

**ಸುದ್ಯುಮ್ನೇ ತು ದಿವಂ ಯಾತೇ ರಾಜ್ಯಂ ಚಕ್ರೇ ಪುರೂರವಾಃ ।**
**ಸುಗುಣಶ್ಚ ಸುರೂಪಶ್ಚ ಪ್ರಜಾರಂಜನತತ್ಪರಃ ॥೧॥**

ಸೂತಮಹರ್ಷಿಯು ಹೇಳಿದನು—ಸುದ್ಯುಮ್ನರಾಜನು ಸ್ವರ್ಗಲೋಕವನ್ನು ಪಡೆದ ಮೇಲೆ, ಒಳ್ಳೆಯ ಗುಣಗಳುಳ್ಳವನೂ, ಸುಂದರನೂ ಆದ ಪುರೂರವಮಹಾರಾಜನು ಪ್ರಜೆಗಳನ್ನು ಸಂತೋಷಪಡಿಸುವುದರಲ್ಲಿ ಆದರವುಳ್ಳವನಾಗಿ ರಾಜ್ಯಭಾರವನ್ನು ಮಾಡುತ್ತಿದ್ದನು.

**ಪ್ರತಿಷ್ಠಾನೇ ಪುರೇ ರಮ್ಯೇ ರಾಜ್ಯಂ ಸರ್ವನಮಸ್ಕೃತಂ ।**
**ಚಕಾರ ಸರ್ವಧರ್ಮಜ್ಞಃ ಪ್ರಜಾರಕ್ಷಣತತ್ಪರಃ ॥೨॥**

ರಾಜಧರ್ಮವೇ ಮೊದಲಾದ ಎಲ್ಲ ಧರ್ಮಗಳನ್ನೂ ತಿಳಿದಿರುವ ಪುರೂರವ ಚಕ್ರವರ್ತಿಯು ಮನೋಹರವಾದ ಪ್ರತಿಷ್ಠಾನವೆಂಬ ರಾಜಧಾನಿಯಲ್ಲಿ ಪ್ರಜೆಗಳ ಯೋಗಕ್ಷೇಮಗಳನ್ನು ಕಾಪಾಡುವುದರಲ್ಲಿ ಆಸಕ್ತನಾಗಿರುತ್ತಾ ಎಲ್ಲರ ಆದರಗೌರವಗಳಿಗೆ ಪಾತ್ರವಾಗುವಂತೆ ರಾಜ್ಯಭಾರವನ್ನು ನೆರವೇರಿಸುತ್ತಿದ್ದನು.

**ಮಂತ್ರಃ ಸುಗುಪ್ತಸ್ತಸ್ಯಾಸೀತ್ಪರಜ್ಞಾಭಿಜ್ಞತಾ ತಥಾ ।**
**ಸದೈವೋತ್ಸಾಹಶಕ್ತಿಶ್ಚ ಪ್ರಭುಶಕ್ತಿಸ್ತಥೋತ್ತಮಾ ॥೩॥**

ಆ ಪುರೂರವರಾಜನ ಮಂತ್ರಾಲೋಚನಕ್ರಮವು ಇತರರಿಗೆ ತಿಳಿಯದಂತೆ ಕಾಪಾಡಲ್ಪಡುತ್ತಿತ್ತು. ಅಲ್ಲದೆ, ಅವನು ಇತರ ರಾಜ್ಯಗಳಲ್ಲಿನ ಮಂತ್ರಾಲೋಚನೆಗಳನ್ನು ಗೂಢಚಾರರ ಮುಖಾಂತರವಾಗಿ ತಿಳಿಯಬಲ್ಲಷ್ಟು ಚತುರನಾಗಿದ್ದನು. ಈ ಮಂತ್ರಶಕ್ತಿಯ ಜೊತೆಗೆ ಉತ್ಸಾಹಶಕ್ತಿಯೂ, ಎಂದರೆ ಯಾವಾಗಲೂ ಕಾರ್ಯಗಳನ್ನು ನೆರವೇರಿಸಬಲ್ಲ ಸಾಮರ್ಥ್ಯವೂ, ಪ್ರಭುಶಕ್ತಿಯೂ ಎಂದರೆ, ಆಡಳಿತವನ್ನು ನೆರವೇರಿಸಲು ಬೇಕಾದ ಶ್ರೇಷ್ಠವಾದ ದರ್ಪವೂ ಸೇರಿ ರಾಜ್ಯಭಾರನಿರ್ವಾಹವು ಚನ್ನಾಗಿತ್ತು.

**ಸಾಮದಾನಾದಯಸ್ಸರ್ವೇ ವಶಗಾಸ್ತಸ್ಯ ಭೂಪತೇಃ ।**
**ವರ್ಣಾಶ್ರಮಾಃ ಸ್ವಧರ್ಮಸ್ಥಾಃ ಕುರ್ವನ್ ರಾಜ್ಯಂ ಶಶಾಸ ಹ ॥೪॥**

ಸಾಮ, ದಾನ, ಭೇದ, ದಂಡಗಳೆಂಬ ಚತುರುಪಾಯಗಳೆಲ್ಲವನ್ನೂ ಆ ದೊರೆಯು ಸ್ವಾಧೀನದಲ್ಲಿಟ್ಟುಕೊಂಡಿದ್ದನು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ವರ್ಣದವರನ್ನೂ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮದವರನ್ನೂ ಅವರೆಲ್ಲರೂ ತಮ್ಮ ತಮ್ಮ ಧರ್ಮಗಳನ್ನು ಬಿಡದೆ ಆಚರಿಸುತ್ತಿರುವಂತೆ ನೋಡಿಕೊಳ್ಳುತ್ತಾ ಆ ದೊರೆಯು ರಾಜ್ಯಭಾರವನ್ನು ಮಾಡುತ್ತಿದ್ದನು.

**ಯಜ್ಞಾಂಶ್ಚ ವಿವಿಧಾಂಶ್ಚಕ್ರೇ ಸ ರಾಜಾ ಬಹುದಕ್ಷಿಣಾನ್ ।**
**ದಾನಾನಿ ಚ ವಿಚಿತ್ರಾಣಿ ದದಾವಥ ನರಾಧಿಪಃ ॥೫॥**

ಅಲ್ಲದೆ ಆ ದೊರೆಯು ಪ್ರತಿನಿತ್ಯವೂ ಮಾಡಬೇಕಾದ ಐದು ಬಗೆಯ ಯಜ್ಞಗಳನ್ನೂ ನಾನಾಬಗೆಯ ಇತರ ಯಾಗಳನ್ನೂ ಆಚರಿಸುತ್ತಾ ತುಂಬ ದಕ್ಷಿಣೆಗಳನ್ನು ಕೊಡುತ್ತಿದ್ದನು. ಇವುಗಳ ಜೊತೆಗೆ ನಾನಾಪ್ರಕಾರಗಳಾದ ದಾನಗಳನ್ನೂ ಎಂದರೆ ದಶದಾನ, ನಿತ್ಯದಾನ ಮುಂತಾದವುಗಳನ್ನೂ ಔದಾರ್ಯದಿಂದ ಕೊಡುತ್ತಿದ್ದನು.

**ತಸ್ಯ ರೂಪಗುಣೌದಾರ್ಯಶೀಲದ್ರವಿಣವಿಕ್ರಮಾನ್ ।**
**ಶ್ರುತ್ವೋರ್ವಶೀ ವಶೀಭೂತಾ ಚಕಮೇ ತಂ ನರಾಧಿಪಂ ॥೬॥**

ಹೀಗೆ ಆ ರಾಜನ ಸೌಂದರ್ಯ, ಸೌಜನ್ಯ ಮುಂತಾದ ಗುಣ, ಧಾರಾಳವಾಗಿರುವಿಕೆ, ಶಾಸ್ತ್ರಾಚಾರಹಿತವಾದ ಶೀಲ, ಐಶ್ವರ್ಯ, ಸಂಪತ್ತು, ಪರಾಕ್ರಮ ಇವುಗಳನ್ನು ಕೇಳಿ ದೇವಲೋಕದ ಊರ್ವಶೀ ಎಂಬ ಅಪ್ಸರಸ್ತ್ರೀಯು ಪರವಶಳಾಗಿ ಆ ದೊರೆಯನ್ನು ಪಡೆಯಲು ಆಶಿಸಿದಳು.

**ಬ್ರಹ್ಮಶಾಪಾಭಿತಪ್ತಾ ಸಾ ಮಾನುಷಂ ಲೋಕಮಾಸ್ಥಿತಾ ।**
**ಗುಣಿನಂ ತಂ ನೃಪಂ ಮತ್ವಾ ವರಯಾಮಾಸ ಮಾನಿನೀ ॥೭॥**

ದೇವಲೋಕದ ಸ್ತ್ರೀಯಾದರೂ ಮಾನವನನ್ನು ಪ್ರೀತಿಸಿದಳೆಂಬ ಕಾರಣ ದಿಂದುಂಟಾದ ಬ್ರಹ್ಮನ ಶಾಪದಿಂದ ಸಂತಾಪವುಳ್ಳವಳಾದ, ಸ್ವರ್ಗಲೋಕದ ವಾಸದ ಯೋಗ್ಯತೆಯನ್ನು ಕಳೆದುಕೊಂಡವಳಾಗಿ ಪಶ್ಚಾತ್ತಾಪದಿಂದ ಆ ಊರ್ವಶಿಯು ಮನುಷ್ಯರು ವಾಸಿಸುವ ಈ ಭೂಲೋಕಕ್ಕೆ ಬಂದಳು. • ಮತ್ತು ಈ ಪುರೂರವ ಚಕ್ರವರ್ತಿಯು ಒಳ್ಳೆಯ ಗುಣಗಳುಳ್ಳವನೆಂಬುದನ್ನು ಮನಗಂಡು, ಆತ್ಮಗೌರವ ವುಳ್ಳ ಆ ಸ್ತ್ರೀಯು ಈ ದೊರೆಯನ್ನೇ ಮೆಚ್ಚಿ ವರಿಸಿದಳು.

**ಸಮಯಂ ಚೇದೃಶಂ ಕೃತ್ವಾ ಸ್ಥಿತಾ ತತ್ರ ವರಾಂಗನಾ ।**
**ಏತಾವುರಣಕೌ ರಾಜನ್ ನ್ಯಸ್ತೌ ರಕ್ಷಸ್ವ ಮಾನದ ॥೮॥**

ಆ ದೊರೆಯೂ ಇವಳ ಸೌಂದರ್ಯ ಮುಂತಾದ ಗುಣಗಳಿಗೆ ಮನಸೋತನು. ಆಗ ಅವಳು ಮೂರು ನಿಯಮಗಳನ್ನು ಕಾಪಾಡಬೇಕೆಂದು ಹೇಳಲು, ರಾಜನು ಒಪ್ಪಿದನು. ಆಮೇಲೆ ಆ ದೇವಸ್ತ್ರೀಯು ಆ ದೊರೆಯೊಡನೆ ಇದ್ದಳು. ಅವುಗಳಲ್ಲಿ ಮೊದಲನೆಯ ನಿಯಮವನ್ನು ಹೀಗೆ ಹೇಳಿದಳು. ನನ್ನ ಗೌರವವನ್ನು ಕಾಪಾಡಿದ ಓ ನನ್ನ ಪ್ರಿಯನೇ, ನಿನ್ನಲ್ಲಿ ನಾನು ನ್ಯಾಸವಾಗಿ ಇಡುವ ಈ ಎರಡು ಮೇಕೆಗಳನ್ನು ನೀನು ಕಾಪಾಡಿಕೊಂಡಿರುತ್ತಾ ನಾನು ಅಪೇಕ್ಷಿಸಿದಾಗ ನನಗೆ ಹಿಂತಿರುಗಿ ಕೊಡಬೇಕು.

**ಘೃತಂ ಮೇ ಭಕ್ಷಣಂ ನಿತ್ಯಂ ನಾನ್ಯತ್ಕಿಂಚಿನ್ನೃಪಾಶನಂ ।**
**ನೇಕ್ಷೇ ತ್ವಾಂ ಚ ಮಹಾರಾಜ ನಗ್ನಮನ್ಯತ್ರ ಮೈಥುನಾತ್ ॥೯॥**

ಎರಡನೆಯದಾಗಿ ನನಗೆ ಪ್ರತಿದಿನದಲ್ಲೂ ತುಪ್ಪ ಒಂದೇ ಆಹಾರವಾಗಿರಬೇಕು. ಇನ್ನೇನನ್ನೂ ನಾನು ತಿನ್ನುವಂತೆ ಮಾಡಬಾರದು. ಮೂರನೆಯದಾಗಿ ನಮ್ಮಿಬ್ಬರ ಋತುಸಂಗಮಸಮಯದಲ್ಲಿ ಹೊರತು ಮತ್ತೆ ಯಾವಾಗಲೂ ನೀನು ವಸ್ತ್ರವಿಲ್ಲದೆ ನನ್ನ ಕಣ್ಣಿಗೆ ಗೋಚರಿಸಕೂಡದು.

**ಭಾಷಾಬಂಧಸ್ತ್ವಯಂ ರಾಜನ್ ಯದಿ ಭಗ್ನೋ ಭವಿಷ್ಯತಿ ।**
**ತದಾ ತ್ಯಕ್ತ್ವಾ ಗಮಿಷ್ಯಾಮಿ ಸತ್ಯಮೇತದ್ಬ್ರವೀಮ್ಯಹಂ ॥೧೦॥**

ಓ ದೊರೆಯೇ, ಇದೇ ನನ್ನ ಪ್ರತಿಜ್ಞೆಯು. ಇದನ್ನು ನಾನು ನಿನಗೆ ಮೊದಲು ಹೇಳಿರುತ್ತೇನೆ. ಈ ನನ್ನ ಮಾತಿನ ಕಟ್ಟನ್ನು, ಎಂದರೆ ನಿನ್ನ ವಾಗ್ದಾನದ ನಿಯಮವನ್ನು ನೀನು ಯಾವಾಗಲಾದರೂ ಮುರಿಯುವೆಯಾದರೆ, ಆಗಲೇ ನಾನು ನಿನ್ನನ್ನು ಬಿಟ್ಟುಹೋಗುವೆನು. ಇದು ಸತ್ಯವು.

**ಅಂಗೀಕೃತಂ ಚ ತದ್ರಾಜ್ಞಾ ಕಾಮಿನ್ಯಾ ಭಾಷಿತಂ ತು ಯತ್ ।**
**ಸ್ಥಿತಾ ಭಾಷೇಣ-ಬಂಧೇನ ಶಾಪಾನುಗ್ರಹಕಾಮ್ಯಯಾ ॥೧೧॥**

ಗುಣವನ್ನು ಬಯಸಿ ಬಂದ ಆ ದೇವಸ್ತ್ರೀಯ ಮಾತನ್ನು ಆ ದೊರೆಯು ಒಪ್ಪಿಕೊಂಡನು. ಈ ವಾಗ್ದಾನದ ಕಟ್ಟನ್ನು ಅವಲಂಬಿಸಿ ಆ ಊರ್ವಶಿಯು ತನಗೆ ಬಂದಿದ್ದ ಬ್ರಹ್ಮನ ಶಾಪದಿಂದ ಬಿಡುಗಡೆಯಾಗಿ ಮುಂಚಿನಂತೆ ಸ್ವರ್ಗವಾಸಕ್ಕೇರಲು ತಕ್ಕ ಅನುಗ್ರಹವನ್ನು ಪಡೆಯಲು ಇಚ್ಛೆಯಿಂದ ತಕ್ಕ ಸಮಯವನ್ನು ನಿರೀಕ್ಷಿಸುತ್ತಾ ಆ ದೊರೆಯೊಡನೆ ಸುಖವಾಗಿ ಇದ್ದಳು.

**ರೇಮೇ ತದಾ ಸ ಭೂಪಾಲೋ ಲೀನೋ ವರ್ಷಗಣಾ ಬಹೂನ್ ।**
**ಧರ್ಮಕರ್ಮಾದಿಕಂ ತ್ಯಕ್ತ್ವಾ ಚೋರ್ವಶ್ಯಾ ಮದನೋಹಿತಃ ॥೧೨॥**

ಆ ದಿವ್ಯರಮಣಿಯೊಡನೆ ಆ ದೊರೆಯು ರಮಿಸುತ್ತಾ ಅನೇಕವರ್ಷಗಳವರಿವಿಗೂ ಆನಂದದಲ್ಲಿ ಮುಳುಗಿದ್ದನು. ಆ ಊರ್ವಶಿಯ ಸಹವಾಸದಿಂದುಂಟಾದ ಮುದದಿಂದ ಮಂಕುಬಡಿದವನಾಗಿ ದೊರೆಯು ರಾಜಧರ್ಮಗಳನ್ನೂ ದಿನಗಟ್ಟಲೆಯ ಕರ್ಮಗಳನ್ನೂ ಬಿಟ್ಟು ಉದಾಸೀನನಾಗಿ ಅಂತಃಪುರದಲ್ಲಿ ಸುಖಲೋಲುಪನಾಗಿರುತ್ತಿದ್ದನು.

**ಏಕಚಿತ್ತಸ್ತು ಸಂಜಾತಃ ತನ್ಮನಸ್ಕೋ ಮಹೀಪತಿಃ ।**
**ನ ಶಶಾಕ ತಯಾ ಹೀನಃ ಕ್ಷಣಮಪ್ಯತಿವೋಹಿತಃ ॥೧೩॥**

ದೊರೆಯು ಆ ಊರ್ವಶಿಯಲ್ಲಿ ನಟ್ಟ ಮನಸ್ಸುಳ್ಳವನಾಗಿ ಅವಳ ಸಹವಾಸ ಒಂದರಲ್ಲೇ ಆಸಕ್ತಿಯುಳ್ಳವನಾಗಿದ್ದನು. ಅವಳಲ್ಲಿನ ಮೋಹವು ಅತಿಯಾಗಲು ಅವಳನ್ನು ಒಂದು ಕ್ಷಣಕಾಲದ ಪರ್ಯಂತವಾಗಿಯೂ ಬಿಟ್ಟಿರಲಾರದವನಾಗಿದ್ದನು.

**ಏವಂ ವರ್ಷಗಣಾಂತೇ ತು ಸ್ವರ್ಗಸ್ಥಃ ಪಾಕಶಾಸನಃ ।**
**ಊರ್ವಶೀಂ ನಾಗತಾಂ ದೃಷ್ಟ್ವಾ ಗಂಧರ್ವಾನಾಹ ದೇವರಾಟ್ ॥**

ಈ ರೀತಿಯಲ್ಲಿ ಅನೇಕವರ್ಷಗಳು ಕಳೆದುಹೋಗಲು, ಸ್ವರ್ಗದಲ್ಲಿ ದೊರೆಯಾಗಿರುವ ಇಂದ್ರನು ಊರ್ವಶಿಯು ಬರದೆ ಇರುವುದನ್ನು ನೋಡಿ, ಗಂಧರ್ವರನ್ನು ಕುರಿತು ಹೀಗೆ ಹೇಳಿದನು.

**ಊರ್ವಶೀಮಾನಯಧ್ವಂ ಭೋ ಗಂಧರ್ವಾಸ್ಸರ್ವ ಏವ ಹಿ ।**
**ಹೃತ್ವೋರಣೌ ಗೃಹಾತ್ತಸ್ಯ ಭೂಪತೇಸ್ಸಮಯೇ ಕಿಲ ॥೧೫॥**

ಓ ಗಂಧರ್ವರೇ, ನೀವೆಲ್ಲರೂ ಪ್ರಯತ್ನಪಟ್ಟು ಅಲ್ಲಿಗೆ ಹೋಗಿ ತಕ್ಕ ಸಮಯದಲ್ಲಿ ಆ ರಾಜನ ಮನೆಯಲ್ಲಿ ನ್ಯಾಸವಾಗಿಟ್ಟಿರುವ ಮೇಕೆಗಳನ್ನು ಅಪಹರಿಸಿ ಊರ್ವಶಿಯನ್ನು ಇಲ್ಲಿಗೆ ಕರೆದುಕೊಂಡು ಬನ್ನಿರಿ.

**ಊರ್ವಶೀರಹಿತಂ ಸ್ಥಾನಂ ಮದೀಯಂ ನಾತಿಶೋಭತೇ ।**
**ಯೇನ ಕೇನಾಪ್ಯುಪಾಯೇನ ತಾಮಾನಯತ ಕಾಮಿನೀಂ ॥೧೬॥**

ಈ ನನ್ನ ರಾಜಾಸ್ಥಾನವು ಆ ಊರ್ವಶಿಯು ಇಲ್ಲದುದರಿಂದ ಚನ್ನಾಗಿ ಕಳೆಗಟ್ಟದೇ ಇದೆ. ಆದುದರಿಂದ ನೀವು ಯಾವುದಾದರೊಂದು ಉಪಾಯದಿಂದ ಇಲ್ಲಿಗೆ ಹಿಂತಿರುಗಿ ಬರಬೇಕೆಂದು ಬಯಸುತ್ತಿರುವ ಆ ಊರ್ವಶಿಯನ್ನು ಕರೆತರುವವರಾಗಿರಿ.

**ಇತ್ಯುಕ್ತಾಸ್ತೇಽಥ ಗಂಧರ್ವಾ ವಿಶ್ವಾವಸುಪುರೋಗಮಾಃ ।**
**ತತೋ ಗತ್ವಾ ಮಹಾಗಾಢತಮಸಿ ಪ್ರತ್ಯುಪಸ್ಥಿತೇ ॥೧೭॥**

**ಜಹ್ರುಸ್ತಾವುರಣೌ ದೇವಾ ರಮಮಾಣಂ ವಿಲೋಕ್ಯ ತಂ ।**
**ಚಕ್ರಂದತುಸ್ತದಾ ತೌ ತು ಹ್ರಿಯಮಾಣಾ ವಿಹಾಯಸಾ ॥೧೮॥**

ದೇವೇಂದ್ರನಿಂದ ಹೀಗೆ ಹೇಳಲ್ಪಟ್ಟ ವಿಶ್ವಾವಸು ಮೊದಲಾದ ಗಂಧರ್ವರು ಅಲ್ಲಿಂದ ಹೊರಟರು. ದಟ್ಟವಾದ ಕತ್ತಲೆಯು ಕವಿದುಕೊಂಡಿರುವ ಸಮಯವು ದೊರೆಯಿತು. ಪುರೂರವರಾಜನು ಊರ್ವಶಿಯಲ್ಲಿ ಕ್ರೀಡಿಸುತ್ತಿರುವುದನ್ನು ಕಂಡು ಆ ದೇವತೆಗಳು ಆ ನ್ಯಾಸವಾಗಿಟ್ಟಿದ್ದ ಮೇಕೆಗಳನ್ನು ಕದ್ದು ತೆಗೆದುಕೊಂಡು ಹೋದರು. ಆಕಾಶಮಾರ್ಗದಲ್ಲಿ ಅವನ್ನು ಸಾಗಿಸಿಕೊಂಡು ಹೋಗುತ್ತಿರುವಾಗ ಅವೆರಡೂ ಅರಚಿಕೊಳ್ಳುತ್ತಿದ್ದುವು.

**ಊರ್ವಶೀ ತದುಪಾಕರ್ಣ್ಯ ಕ್ರಂದಿತಂ ಸುತಯೋರಿವ ।**
**ಕುಪಿತೋವಾಚ ರಾಜಾನಂ ಸಮಯೋಽಯಂ ಕೃತೋ ಮಯಾ ॥೧೯॥**

ಊರ್ವಶಿಯು ಆ ಮೇಕೆಗಳ ಧ್ವನಿಯನ್ನು ಕೇಳಿ ಮಕ್ಕಳ ಅಳುವಿನ ಧ್ವನಿಯನ್ನು ಕೇಳಿದ ತಾಯಿಯಂತೆ ಕೋಪಗೊಂಡವಳಾಗಿ ದೊರೆಯನ್ನು ಕುರಿತು ಹೀಗೆ ಹೇಳಿದಳು. ಓ ದೊರೆಯೇ, ನಾನು ಮೊದಲು ನಿನ್ನೊಡನೆ ವಾಗ್ದಾನದ ಕಟ್ಟುಪಾಡನ್ನು ಮಾಡಿಕೊಂಡಿದ್ದೆನು.

**ನಷ್ಟಾಽಹಂ ತವ ವಿಶ್ವಾಸಾತ್ ಹೃತೌ ಚೋರೈರ್ಮಮೋರಣೌ ।**
**ರಾಜನ್ ಪುತ್ರಸಮಾವೇತೌ ತ್ವಂ ಕಿಂ ಶೇಷೇ ಸ್ತ್ರಿಯಾ ಸಮಃ ॥೨೦॥**

ಓ ದೊರೆಯೇ, ನಿನ್ನಲ್ಲಿ ನಂಬಿಕೆಯನ್ನಿಟ್ಟು ನಾನು ಕೆಟ್ಟೆನು. ನನ್ನ ಮಕ್ಕಳಂತಿದ್ದ ಈ ಮೇಕೆಗಳನ್ನು ಕಳ್ಳರು ಕದ್ದು ತೆಗೆದುಕೊಂಡು ಹೋದರು. ನೀನು ಏಕೆ ಹೆಂಗಸಿನಂತೆ ಹೇಡಿಯಾಗಿ ಇಲ್ಲಿ ಮಲಗಿದ್ದೀಯೆ ?

**ಹತಾಽಸ್ಮ್ಯಹಂ ಕುನಾಥೇನ ನಪುಂಸಾ ವೀರಮಾನಿನಾ ।**
**ಉರಣೌ ಮೇ ಗತೌ ಚಾದ್ಯ ಸದಾ ಪ್ರಾಣಪ್ರಿಯೌ ಮಮ ॥೨೧॥**

ಓ ದೊರೆಯೇ, ಯಾವಾಗಲೂ ನನಗೆ ಪ್ರಾಣದಂತೆ ಪ್ರೀತಿಪಾತ್ರವಾಗಿದ್ದ ನನ್ನ ಮೇಕೆಗಳು ಹಾಳಾಗಿಹೋದವು. ನೀನು ಪರಾಕ್ರಮಶಾಲಿಯೆಂದು ಜಂಬ ಮಾಡುತ್ತೀಯೆ. ವಾಸ್ತವವಾಗಿ ನಪುಂಸಕನಂತೆ ಕೈಲಾಗದವನಾಗಿದ್ದೀಯೆ. ನಿನ್ನಂತಹ ಕೆಟ್ಟ ದಣಿಯಿಂದ ನಾನು ಕೆಟ್ಟೆನು.

**ಏವಂ ವಿಲಪ್ಯಮಾನಾಂ ತಾಂ ದೃಷ್ಟ್ವಾ ರಾಜಾ ವಿಮೋಹಿತಃ ।**
**ನಗ್ನ ಏವ ಯಯೌ ತೂರ್ಣಂ ಪೃಷ್ಠತಃ ಪೃಥಿವೀಪತಿಃ ॥೨೨॥**

ಹೀಗೆ ಗೋಳಾಡುತ್ತಿರುವ ಆ ಊರ್ವಶಿಯನ್ನು ನೋಡಿ ಭೂಮಿಗೆ ಒಡೆಯನಾದ ಆ ರಾಜನು ಮಂಕುಬಡಿದವನಾದನು. ಮತ್ತು ಆತುರದಿಂದ ಬಟ್ಟೆಯನ್ನೇ ಧರಿಸದೆ ನಗ್ನನಾಗಿ ಆ ಮೇಕೆಗಳ ಧ್ವನಿಯನ್ನು ಹಿಂಬಾಲಿಸಿ ಹೊರಟನು.

**ವಿದ್ಯುತ್ಪ್ರಕಾಶಿತಾ ತತ್ರ ಗಂಧರ್ವೈರ್ನೃಪವೇಶ್ಮನಿ ।**
**ನಗ್ನಭೂತಸ್ತಯಾ ದೃಷ್ಟೋ ಭೂಪತಿರ್ಗಂತುಕಾಮಯಾ ॥೨೩॥**

ಆ ಸಮಯದಲ್ಲಿ ಗಂಧರ್ವರು ಆ ಅರಮನೆಯಲ್ಲಿ ಮಿಂಚು ಹೊಳೆಯುವಂತೆ ಮಾಡಿದರು. ಅದರಿಂದ ಅವನನ್ನು ಬಿಟ್ಟುಹೋಗಬಯಸುತ್ತಿದ್ದ ಆ ಊರ್ವಶಿಯ ಕಣ್ಣಿಗೆ ಬತ್ತಲೆಯಾಗಿದ್ದ ದೊರೆಯು ಗೋಚರವಾದನು.

ತ್ಯಕ್ತ್ವೋರಣೌ ಗತಾಸ್ಸರ್ವೇ ಗಂಧರ್ವಾಃ ಪಥಿ ಪಾರ್ಥಿವಃ ।
ನಗ್ನೋ ಜಗ್ರಾಹ ತೌ ಶ್ರಾಂತೋ ಜಗಾಮ ಸ್ವಗೃಹಂ ಪ್ರತಿ ॥೨೪॥

ಆ ಗಂಧರ್ವರೆಲ್ಲರೂ ಆ ಮೇಕೆಗಳನ್ನು ದಾರಿಯಲ್ಲಿಯೇ ಬಿಟ್ಟು ಹೊರಟು ಹೋದರು. ಬತ್ತಲೆಯಾಗಿದ್ದ ಬಳಲಿದ್ದ ದೊರೆಯು ಆ ಮೇಕೆಗಳನ್ನು ಹಿಡಿದು ಕೊಂಡು ಅರಮನೆಗೆ ಬಂದನು.

ತದೋರ್ವಶೀಂ ಗತಾಂ ದೃಷ್ಟ್ವಾ ವಿಲಲಾಪಾತಿದುಃಖಿತಃ ।
ನಗ್ನಂ ವೀಕ್ಷ್ಯ ಪತಿಂ ನಾರೀ ಗತಾ ಸಾ ವರವರ್ಣಿನೀ ॥೨೫॥

ಆಗ ದೊರೆಯು ಊರ್ವಶಿಯು ಹೊರಟುಹೋದುದನ್ನು ಕಂಡು ತುಂಬ ಸಂಕಟವುಳ್ಳವನಾಗಿ ಶೋಕಿಸಿದನು. ಸುಂದರಳಾದ ಆ ಉತ್ತಮಜಾತಿಯ ಸ್ತ್ರೀಯು ಗಂಡನನ್ನು ಬತ್ತಲೆಯಾಗಿದ್ದುದನ್ನು ನೋಡಿ ಮೊದಲುಮಾಡಿದ್ದ ವಾಗ್ದಾನದ ಕಟ್ಟು ಮುರಿದುದರಿಂದ ನನ್ನನ್ನು ಬಿಟ್ಟು ಹೊರಟುಹೋದಳು ಎಂದು ತಿಳಿದನು.

ಕ್ರಂದನ್ ಸ ದೇಶದೇಶೇಷು ಬಭ್ರಾಮ ನೃಪತಿಸ್ಸ್ವಯಂ ।
ತಚ್ಚಿತ್ತೋ ವಿಹ್ವಲಃ ಶೋಚನ್ ವಿವಶಃ ಕಾಮಮೋಹಿತಃ ॥೨೬॥

ಆ ದೊರೆಯು ಆ ಊರ್ವಶಿಯಲ್ಲಿಯೇ ಹೆಚ್ಚಾದ ಆಶೆಯಿಂದ ಮಂಕುಬಡಿದ ವನಾಗಿ, ಅವಳಲ್ಲಿಯೇ ನಟ್ಟ ಮನಸ್ಸುಳ್ಳವನಾಗಿ ಅವಳ ವಿಯೋಗದಿಂದ ದುಃಖಿಸುತ್ತಾ ಶೋಕಪರವಶನಾಗಿ ಅಳುತ್ತಾ, ಒಂದೊಂದಾಗಿ ಎಲ್ಲ ದೇಶಗಳಲ್ಲೂ ಅವಳನ್ನು ಹುಡು ಕುತ್ತಾ ತಾನೇ ಅಲೆಯುತ್ತಿದ್ದನು.

ಭ್ರಮನ್ಸ್ವೈ ಸಕಲಾಂ ಪೃಥ್ವೀಂ ಕುರುಕ್ಷೇತ್ರೇ ದದರ್ಶ ತಾಂ ।
ದೃಷ್ಟ್ವಾ ಸಂಹೃಷ್ಟವದನಃ ಪ್ರಾಹ ಸೂಕ್ತಂ ನೃಪೋತ್ತಮಃ ॥೨೭॥

ದೊರೆಗಳಲ್ಲಿ ಶ್ರೇಷ್ಠನಾದ ಆ ಪುರೂರವರಾಜನು ಈ ಪ್ರಕಾರವಾಗಿ ಈ ಭೂಲೋಕದಲ್ಲೆಲ್ಲಾ ಅಲೆಯುತ್ತಾ ಕಡೆಗೆ ಕುರುಕ್ಷೇತ್ರದಲ್ಲಿ ಆ ಊರ್ವಶಿಯನ್ನು ಕಂಡನು. ಅವಳನ್ನು ನೋಡಿ ಸಂತೋಷಪಟ್ಟ ಮುಖವುಳ್ಳವನಾಗಿ ಒಳ್ಳೆಯ ರೀತಿ ಯಲ್ಲಿ ತಕ್ಕ ಮಾತನ್ನು ಹೀಗೆ ಹೇಳಿದನು.

ಅಯೆ, ಜಾಯೇ ತಿಷ್ಠ ತಿಷ್ಠ ಘೋರೇ ನ ತ್ಯಕ್ತುಮರ್ಹಸಿ ।
ಮಾಂ ತ್ವಂ ತ್ವನ್ಮಾನಸಂ ಕಾಂತಂ ವಶಗಂ ಚಾಪ್ಯನಾಗಸಂ ॥೨೮॥

ಓ ನನ್ನ ಪತ್ನಿಯೇ, ನಿಲ್ಲು, ನಿಲ್ಲು, ಓ ಕಠಿನಸ್ವಭಾವದವಳೇ, ನನ್ನನ್ನು ಬಿಟ್ಟು ಹೋಗುವುದು ನಿನಗೆ ತಕ್ಕುದಲ್ಲವು. ನಾನು ನಿನ್ನಲ್ಲಿಯೇ ನಟ್ಟ ಮನಸ್ಸುಳ್ಳವನಾಗಿದ್ದೇನೆ. ಮನೋಹರವಾಗಿ ಪ್ರೀತಿಗೆ ಅರ್ಹನಾಗಿಯೂ, ನಿನ್ನ ಮಾತಿನಂತೆ ವಿಧೇಯನಾಗಿರುವವನೂ, ಯಾವ ತಪ್ಪನ್ನೂ ಮಾಡದವನೂ ಆಗಿದ್ದೇನೆ. ಆದುದರಿಂದ ನನ್ನನ್ನು ಬಿಡಬೇಡ.

**ಸ ದೇಹೋಽಯಂ ಪತತ್ಯತ್ರ ದೇವಿ ದೂರಂ ಹತಸ್ತ್ವಯಾ ।**
**ಖಾದಂತ್ಯೇನಂ ವೃಕಾಃ ಕಾಕಾಃ ತ್ವಯಾ ತ್ಯಕ್ತಂ ವರೋರು ಯತ್ ॥೨೯॥**

ಉತ್ತಮವಾದ ತೊಡೆಗಳುಳ್ಳ ಓ ರಮಣಿಯೇ, ನಿನ್ನಿಂದ ಬಹುದೂರಪರ್ಯಂತವಾಗಿ ಶಿಕ್ಷಿಸಲ್ಪಟ್ಟಿರುವ, ಅಲೆದು ಶಕ್ತಿಗುಂದಿರುವ, ಈ ನನ್ನ ದೇಹವು ಇಲ್ಲಿಯೇ ಬಿದ್ದುಹೋಗುತ್ತದೆ. ಈ ದೇಹವನ್ನು ತೋಳಗಳೂ ಕಾಗೆಗಳೂ ತಿನ್ನುವಂತಾಗುತ್ತದೆ. ಆದುದರಿಂದ ನನ್ನನ್ನು ಬಿಡಬೇಡ.

**ಏವಂ ವಿಲಪ್ಯಮಾನಂ ತಂ ರಾಜಾನಂ ಪ್ರಾಹ ಚೋರ್ವಶೀ ।**
**ದುಃಖಿತಂ ಕೃಪಣಂ ಶ್ರಾಂತಂ ಕಾಮಾರ್ತಂ ವಿವಶಂ ಭೃಶಂ ॥೩೦॥**

ಕಾಮಬಾಧೆಯಿಂದ ಪೀಡಿತನಾಗಿರುವ, ಹೆಚ್ಚಾಗಿ ಪರವಶನಾಗಿರುವ, ಅಲೆದಲೆದು ಬಳಲಿರುವ, ಕನಿಕರವನ್ನುಂಟುಮಾಡುತ್ತಿರುವ, ದುಃಖವುಳ್ಳವನಾಗಿರುವ, ಈ ಮೇಲೆ ಹೇಳಿದಂತೆ ಗೋಳಾಡುತ್ತಿರುವ ದೊರೆಯನ್ನು ಕುರಿತು ಊರ್ವಶಿಯು ಹೀಗೆ ಬುದ್ಧಿವಾದದ ಪ್ರತ್ಯುತ್ತರವನ್ನು ಹೇಳಿದಳು.

॥ ಊರ್ವಶ್ಯುವಾಚ ॥

**ಮೂರ್ಖೋಽಸಿ ನೃಪಶಾರ್ದೂಲ ಜ್ಞಾನಂ ಕುತ್ರ ಗತಂ ತವ ।**
**ಕ್ವಾಪಿ ಸಖ್ಯಂ ನ ಚ ಸ್ತ್ರೀಣಾಂ ವೃಕಾಣಾಮಿವ ಪಾರ್ಥಿವ ॥೩೧॥**

ಊರ್ವಶಿಯು ಹೇಳುತ್ತಾಳೆ—ಓ ರಾಜರಲ್ಲಿ ಶ್ರೇಷ್ಠನಾದವನೇ, ನೀನು ಮೂಢನೂ, ಹಟಗಾರನೂ ಆಗಿದ್ದೀಯೇ. ನಿನ್ನ ತಿಳಿವಳಿಕೆಯು ಈಗ ಎಲ್ಲಿ ಹೋಯಿತು ? ತೋಳಗಳು ಹೇಗೋ ಹಾಗೆ ಸ್ತ್ರೀಯರೂ ಖಚಿತವಾದ ಪ್ರೇಮಕ್ಕೆ ವಶರೂ ಪಾತ್ರರೂ ಆಗಲಾರರು.

**ನ ವಿಶ್ವಾಸೋ ಹಿ ಕರ್ತವ್ಯಃ ಸ್ತ್ರೀಷು ಚೌರೇಷು ಪಾರ್ಥಿವೈಃ ।**
**ಗೃಹಂ ಗಚ್ಛ ಸುಖಂ ಭುಂಕ್ಷ್ವ ಮಾ ವಿಷಾದೇ ಮನಃ ಕೃಥಾಃ ॥೩೨॥**

ಮನಸ್ಸನ್ನು ಅಪಹರಿಸುವ ಸ್ತ್ರೀಯರಲ್ಲಿ ದೊರೆಗಳು ನಂಬಿಕೆಯನ್ನು ಇಡಬಾರದು. ಓ ದೊರೆಯೇ, ಮನೆಗೆ ಹೋಗು. ಎಂದಿನಂತೆ ಊಟ ಉಪಚಾರಗಳನ್ನು ಪಡೆಯುತ್ತಾ ಸುಖವಾಗಿರು. ನನ್ನ ವಿಯೋಗದಿಂದ ಉಂಟಾಗಿರುವ ದುಃಖದಲ್ಲಿ ಮನಸ್ಸನ್ನು ಬಿಡಬೇಡ.

**ಇತ್ಯೇವಂ ಕಥಿತೋ ರಾಜಾ ನ ವಿವೇದಾತಿನೋಹಿತಃ ।**
**ದುಃಖಂ ಚ ಪರಮಂ ಪ್ರಾಪ್ತಃ ಸ್ವೈರಿಣೀಸ್ನೇಹಯಂತ್ರಿತಃ ॥೩೩॥**

ಊರ್ವಶಿಯಿಂದ ಹೀಗೆ ತಿಳಿಸಲ್ಪಟ್ಟರೂ ಪುರೂರವರಾಜನು ಅವಳಲ್ಲಿ ಹೆಚ್ಚಾದ ಕಾಮನೆಯಿಂದ ಪರವಶನಾಗಿ ಉಚಿತವಾದುದನ್ನು ವಿವೇಚಿಸಿ ತಿಳಿಯಲಾರದೆ ಹೋದನು. ಅಲ್ಲದೆ, ಮನಸ್ವಿನಿಯಾದ ಆ ರಮಣಿಯಲ್ಲಿ ಪ್ರೇಮದ ಪಾಶಯಂತ್ರಕ್ಕೆ ಸಿಕ್ಕಿಬಿದ್ದಿದ್ದ ದೊರೆಯು ಅತ್ಯಂತ ದುಃಖವನ್ನು ಹೊಂದಿದನು.

॥ ಸೂತ ಉವಾಚ ॥

**ಇತಿ ಸರ್ವಂ ಸಮಾಖ್ಯಾತಮೂರ್ವಶೀಚರಿತಂ ಮಹತ್ ।**
**ವೇದೇ ವಿಸ್ತರಿತಂ ಚೈತತ್ಸಂಕ್ಷೇಪಾತ್ಕಥಿತಂ ಮಯಾ ॥೩೪॥**

ಸೂತಋಷಿಯು ಹೇಳಿದನು—ಓ ಋಷಿಗಳೇ, ಈ ರೀತಿಯಾದ ದೊಡ್ಡದಾದ ಊರ್ವಶಿಯ ಕಥೆಯನ್ನೆಲ್ಲವನ್ನೂ ನಾನು ನಿಮಗೆ ಹೇಳಿದ್ದೇನೆ. ಈ ಕಥೆಯು ವೇದದಲ್ಲೂ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಅದನ್ನೇ ನಾನು ಸಂಗ್ರಹವಾಗಿ ನಿಮಗೆ ಹೇಳಿದ್ದೇನೆ.

ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ । ಎಂಬ ಸೂಕ್ತಿಗೆ ಈ ಕಥೆಯೂ ಒಂದು ಉದಾಹರಣೆಯಾಗಿದೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ತ್ರಯೋದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ಚತುರ್ದಶೋಽಧ್ಯಾಯಃ ||

### ಹದಿನಾಲ್ಕನೆಯ ಅಧ್ಯಾಯವು

|| ಸೂತ ಉವಾಚ ||

**ದೃಷ್ಟ್ವಾ ತಾಮಸಿತಾಪಾಂಗೀಂ ವ್ಯಾಸಶ್ಚಿಂತಾಪರೋಽಭವತ್ ।**
**ಕಿಂ ಕರೋಮಿ ನ ಮೇ ಯೋಗ್ಯಾ ದೇವಕನ್ಯೇಯಮಪ್ಸರಾಃ ॥೧॥**

ಸೂತಮಹರ್ಷಿಯು ಹೇಳಿದನು—ದೃಷ್ಟಾಂತಕ್ಕೋಸ್ಕರ ಊರ್ವಶೀಪುರೂರವರ ಕಥೆಯನ್ನು ಉದಾಹರಣೆಯಾಗಿ ಹೇಳಿ ಪ್ರಕೃತವಾಗಿದ್ದ ಶುಕಾಚಾರ್ಯನ ಜನ್ಮ ಮುಂತಾದ ಕಥೆಯನ್ನು ಈಗ ಹೇಳುತ್ತಾನೆ. ಈ ಸಂದರ್ಭದಲ್ಲಿ ಗೃಹಸ್ಥರು ತಮ್ಮ ಧರ್ಮವನ್ನು ಬಿಡದೆ ಆಚರಿಸುತ್ತಿರಬೇಕೆಂಬ ಅಂಶವನ್ನು ವಿವರಿಸಿ ವಿಧಾನ ಮಾಡಿರುತ್ತದೆ.

ವ್ಯಾಸಮಹರ್ಷಿಯು ಕಪ್ಪಾದ ಕುಡಿನೋಟವುಳ್ಳ ಘೃತಾಚೀ ಎಂಬ ಅಪ್ಸರಸ್ತ್ರೀಯನ್ನು ನೋಡಿ ಅವಳಲ್ಲಿ ಮೋಹಗೊಂಡು ಹೀಗೆ ಆಲೋಚಿಸಿದನು. ಇವಳು ದೇವಜಾತಿಗೆ ಸೇರಿದಳಾದುದರಿಂದ ಮಾನವನೂ ಗೃಹಸ್ಥನೂ ಆಗಿರುವ ನನಗೆ ಇವಳನ್ನು ತಪ್ಪದೆ ಪಡೆದಿರುವುದು ಅಸಾಧ್ಯವಾದುದಾಗಿದೆ. ಏನನ್ನು ಮಾಡಲಿ ?

**ಏವಂ ಚಿಂತಯಮಾನಂ ತು ದೃಷ್ಟ್ವಾ ವ್ಯಾಸಂ ತದಾಪ್ಸರಾಃ ।**
**ಭಯಭೀತಾ ಹಿ ಸಂಜಾತಾ ಶಾಪಂ ಮಾಂ ವಿಸೃಜೇದಯಂ ॥೨॥**

ಆಗ ಆ ಅಪ್ಸರಸ್ತ್ರೀಯು ಹೀಗೆ ಯೋಚಿಸುತ್ತಿರುವ ವ್ಯಾಸಮುನಿಯನ್ನು ನೋಡಿ ನನ್ನಿಂದ ಅವನ ಮನಸ್ಸು ಚಲಿಸುವಂತಾದುದಕ್ಕೋಸ್ಕರ ಕೋಪಗೊಂಡು ಈ ಮುನಿಯು ನನಗೆ ಶಾಪವನ್ನು ಕೊಟ್ಟಾನು ಎಂದು ಭಯಪಟ್ಟಳು.

**ಸಾ ಕೃತ್ವಾಽಥ ಶುಕೀರೂಪಂ ನಿರ್ಗತಾ ಭಯವಿಹ್ವಲಾ ।**
**ಕೃಷ್ಣಸ್ತು ವಿಸ್ಮಯಂ ಪ್ರಾಪ್ತೋ ವಿಹಂಗೀಂ ತಾಂ ವಿಲೋಕಯನ್ ॥೩॥**

ಆ ಅಪ್ಸರಸ್ತ್ರೀಯು ಹೆದರಿ ಗಾಬರಿಗೊಂಡವಳಾಗಿ ಹೆಣ್ಣುಗಿಣಿಯ ರೂಪವನ್ನು ಧರಿಸಿ ಅಲ್ಲಿಂದ ಹೊರಟಳು. ಕೃಷ್ಣದ್ವೈಪಾಯನನೆಂದು ಪ್ರಸಿದ್ಧಿಗೊಂಡ ವ್ಯಾಸ ಮುನಿಯು ಆ ಹೆಣ್ಣುಹಕ್ಕಿಯನ್ನು ನೋಡಿ ತುಂಬ ಆಶ್ಚರ್ಯಪಟ್ಟನು.

**ಕಾಮಸ್ತು ದೇಹೇ ವ್ಯಾಸಸ್ಯ ದರ್ಶನಾದೇವ ಸಂಗತಃ ।**
**ಮನೋಽತಿವಿಸ್ಮಿತಂ ಜಾತಂ ಸರ್ವಗಾತ್ರೇಷು ವಿಸ್ಮಿತಃ ॥೪॥**

ಅವಳನ್ನು ನೋಡಿದೊಡನೆಯೇ ವ್ಯಾಸಮುನಿಯ ಶರೀರದಲ್ಲಿ ಕಾಮವು ಸಂಬಂಧಿಸಿ ಬೇರೂರಿತು. ಅವನ ಮನಸ್ಸೂ ತುಂಬ ಅಚ್ಚರಿಗೊಂಡಿತ್ತು. ಹೀಗೆ ಕಾಮವು ಅವನ ಎಲ್ಲ ಅವಯವಗಳಲ್ಲೂ ಪ್ರಫುಲ್ಲವಾಗಿ ವಿಕಾಸಗೊಂಡಿತು.

**ಸ ತು ಧೈರ್ಯೇಣ ಮಹತಾ ನಿಗೃಹ್ಣನ್ ಮಾನಸಂ ಮುನಿಃ ।**
**ನ ಶಶಾಕ ನಿಯಂತುಂ ಚ ಸ ವ್ಯಾಸಃ ಪ್ರಸೃತಂ ಮನಃ ॥೫॥**

ಆ ವ್ಯಾಸಮುನಿಯು ತನ್ನ ಮನಸ್ಸನ್ನು ಹೆಚ್ಚಾದ ಧೈರ್ಯ (ವಿಚಾರಬುದ್ಧಿ ಬಲ)ದಿಂದ ಬಿಗಿಹಿಡಿಯಲು ಪ್ರಯತ್ನಿಸಿದನು. ಆದರೂ ಹೀಗೆ ಚಲನೆಯನ್ನು ಪಡೆದಿದ್ದ ಅವನ ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸಮರ್ಥನಾಗಲಿಲ್ಲ.

**ಬಹುಶೋ ಗೃಹ್ಯಮಾಣಂ ಚ ಘೃತಾಚ್ಯಾ ಮೋಹಿತಂ ಮನಃ ।**
**ಭಾವಿತ್ವಾನ್ನೈವ ವಿಧೃತಂ ವ್ಯಾಸಸ್ಯಾಮಿತತೇಜಸಃ ॥೬॥**

ಹೀಗೆ ಅನೇಕರೀತಿಯಲ್ಲಿ ತಡೆದರೂ, ಅಪಾರವಾದ ತಪಸ್ಸಿನ ವರ್ಚಸ್ಸುಳ್ಳವ ನಾದರೂ ಆ ವ್ಯಾಸಮುನಿಯ ಮನಸ್ಸು ಆ ಘೃತಾಚೀ ಎಂಬ ದಿವ್ಯ ಸ್ತ್ರೀಯಲ್ಲಿ ಮೋಹಗೊಂಡಿದ್ದುದರಿಂದಲೂ, ಅವನ ಮುಂದಿನ ಅದೃಷ್ಟದ ಪ್ರಾಬಲ್ಯದಿಂದಲೂ ಹತೋಟಿಗೆ ಬರಲಿಲ್ಲವು.

**ಮಂಥನಂ ಕುರ್ವತಸ್ತಸ್ಯ ಮುನೇರಗ್ನಿಚಿಕೀರ್ಷಯಾ ।**
**ಅರಣ್ಯಾಮೇವ ಸಹಸಾ ತಸ್ಯ ಶುಕ್ರಮಥಾಪತತ್ ॥೭॥**

ಅಗ್ನಿಹೋತ್ರಕ್ಕೆ ಬೇಕಾದ ಶ್ರೌತಾಗ್ನಿಯನ್ನು ಉಂಟುಮಾಡಿಕೊಳ್ಳುವ ಉದ್ದೇಶದಿಂದ ಆ ವ್ಯಾಸಮುನಿಯು ಅರಣಿ (ಬನ್ನಿಮರದ ತುಂಡು) ಯಲ್ಲಿ ಕಡೆಯು

ತ್ತಿರಲು, ಈ ಮೇಲೆ ಹೇಳಿದ ಮನೋವಿಕಾರದಿಂದ ಚಲಿತವಾದ ಅವನ ವೀರ್ಯವು ತಟ್ಟನೆ ಆ ಅರಣಿಯಲ್ಲಿ ಬಿದ್ದಿತು.

**ಸೋಽವಿಚಿಂತ್ಯ ತಥಾಪಾತಂ ಮಮಂಥಾರಣಿಮೇವ ಚ ।**
**ತಸ್ಮಾಚ್ಛುಕಸ್ಸಮುದ್ಭೂತಃ ವ್ಯಾಸಾಕೃತಿಮನೋಹರಃ ॥೮॥**

ಆ ಮುನಿಯು ಹಾಗೆ ವೀರ್ಯವು ಬಿದ್ದುದನ್ನು ಗಮನಿಸಲಿಲ್ಲವು. ಮತ್ತು ಅರಣಿಯಲ್ಲಿ ಕಡೆಯುವಿಕೆಯನ್ನು ಮುಂದುವರಿಯಿಸುತ್ತಲೇ ಇದ್ದನು. ಹೀಗಿರುವಲ್ಲಿ ವ್ಯಾಸನನ್ನು ಹೋಲುವ ಆಕಾರದಿಂದ ಮನೋಹರವಾಗಿರುವ ಶುಕಮುನಿಯು ಆ ಅರಣಿಯಿಂದ ಉದ್ಭವಿಸಿದನು.

**ವಿಸ್ಮಯಂ ಜನಯನ್ ಬಾಲಃ ಸಂಜಾತಸ್ತದರಣ್ಯಜಃ ।**
**ಯಥಾಧ್ವರೇ ಸಮಿದ್ಧೋಽಗ್ನಿಃ ಭಾತಿ ಹವ್ಯೇನ ದೀಪ್ತಿಮಾನ್ ॥೯॥**

ಯಜ್ಞಯಾಗಗಳಲ್ಲಿ ಸಮಿತ್ತು ತುಪ್ಪ ಮುಂತಾದ ಹೋಮದ್ರವ್ಯದಿಂದ ಹೆಚ್ಚಿದ ಅಗ್ನಿ ದೇವನು ಹೇಗೆ ಪ್ರಕಾಶವುಳ್ಳವನಾಗಿ ಬೆಳಗುತ್ತಾನೋ ಹಾಗೆ ಕಾಡಿನಲ್ಲಿ ಬೆಳೆದ ಮರದ ತುಂಡಾದ ಅರಣಿಯಲ್ಲಿ ಹುಟ್ಟಿದ ಬಾಲಕನಾದ ಆ ಶುಕಮುನಿಯೂ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತಾ ಉದ್ಭವಿಸಿದನು.

**ವ್ಯಾಸಸ್ತು ಸುತಮಾಲೋಕ್ಯ ವಿಸ್ಮಯಂ ಪರಮಂ ಗತಃ ।**
**ಕಿಮೇತದಿತಿ ಸಂಚಿಂತ್ಯ ವರದಾನಾಚ್ಛಿವಸ್ಯ ವೈ ॥೧೦॥**

ವ್ಯಾಸಮುನಿಯಾದರೋ ಪವಿತ್ರನೂ ತೇಜಸ್ವಿಯೂ ಆಗಿರುವ ಮಗನನ್ನು ನೋಡಿ ತುಂಬ ಆಶ್ಚರ್ಯಪಟ್ಟನು. ಇದೇನೆಂದು ಯೋಚಿಸಿ ಪರಮೇಶ್ವರನ ಅನುಗ್ರಹದ ಫಲವೆಂದು ತಿಳಿದನು.

**ತೇಜೋರೂಪೀ ಶುಕೋ ಜಾತೋಽಪ್ಯರಣೀಗರ್ಭಸಂಭವಃ ।**
**ದ್ವಿತೀಯೋಽಗ್ನಿರಿವಾತ್ಯರ್ಥಂ ದೀಪ್ಯಮಾನಸ್ಸ್ವತೇಜಸಾ ॥೧೧॥**

ಅರಣಿಯ ಮಧ್ಯದಿಂದ ಉದ್ಭವಿಸಿದ ಹೆಚ್ಚಾದ ಬ್ರಹ್ಮವರ್ಚಸ್ಸುಳ್ಳ ಶುಕಮುನಿಯು ಎರಡನೆಯ ಅಗ್ನಿದೇವನೋ ಎನ್ನುವ ಹಾಗೆ ತನ್ನ ಆತ್ಮತೇಜಸ್ಸಿನಿಂದ ಹೆಚ್ಚಾಗಿ ಪ್ರಕಾಶಿಸುತ್ತಿದ್ದನು.

ವಿಲೋಕಯಾಮಾಸ ತದಾ ವ್ಯಾಸಸ್ತು ಮುದಿತಂ ಸುತಂ ।
ದಿವ್ಯೇನ ತೇಜಸಾ ಯುಕ್ತಂ ಗಾರ್ಹಪತ್ಯಮಿವಾಪರಂ ॥೧೨॥

ಆಗ ವ್ಯಾಸಮುನಿಯು ಎರಡನೆಯ ಗಾರ್ಹಪತ್ಯವೆಂಬ ಅಗ್ನಿಯೋಪಾದಿಯಲ್ಲಿ ಯಾವಾಗಲೂ ನಂದದೆ, ಪವಿತ್ರವಾದ ಕಾಂತಿಯುಳ್ಳ, ಉತ್ತಮವಾದ ಬ್ರಹ್ಮತೇಜಸ್ಸಿನಿಂದ ಕೂಡಿರುವ, ಬ್ರಹ್ಮಾನಂದಾನುಭವದಿಂದ ಸಂತುಷ್ಟನಾಗಿರುವ ಮಗನಾದ ಶುಕಮುನಿಯನ್ನು ನೋಡಿದನು.

ಗಂಗಾಂತಃ ಸ್ನಾಪಯಾಮಾಸ ಸಮಾಗತ್ಯ ಗಿರೇಸ್ತದಾ ।
ಪುಷ್ಪವೃಷ್ಟಿಸ್ತು ಖಾಜ್ಜಾತಾ ಶಿಶೋರುಪರಿ ತಾಪಸಾಃ ॥೧೩॥

ಓ ಋಷಿಗಳಿರಾ, ಆಗ ವ್ಯಾಸಮುನಿಯು ಹಿಮಾಲಯಪರ್ವತದಿಂದ ಹರಿದು ಬರುತ್ತಿರುವ ಗಂಗಾಪ್ರವಾಹದಲ್ಲಿ ಆ ಮಗುವಿಗೆ ಸ್ನಾನಮಾಡಿಸಿದನು. ದೇವತೆಗಳು ಆ ಮಗುವಿನ ಮೇಲೆ ಅಂತರಿಕ್ಷದಿಂದ ಹೂವಿನ ಮಳೆಯನ್ನು ಕರೆಸಿದರು.

ಜಾತಕರ್ಮಾದಿಕಂ ಚಕ್ರೇ ವ್ಯಾಸಸ್ತಸ್ಯ ಮಹಾತ್ಮನಃ ।
ದೇವದುಂದುಭಯೋ ನೇದುಃ ನನೃತುಶ್ಚಾಪ್ಸರೋಗಣಾಃ ॥೧೪॥

ವ್ಯಾಸಮಹರ್ಷಿಯು ಮಹಾನುಭಾವನಾದ ಆ ಮಗುವಿಗೆ ಜಾತಕರ್ಮ ಮುಂತಾದ ಸಂಸ್ಕಾರಗಳನ್ನು ನೆರವೇರಿಸಿದನು. ದೇವತೆಗಳ ನಗಾರಿಗಳು ಮೊಳಗಿದುವು. ಅಪ್ಸರಸ್ತ್ರೀಯರ ಗುಂಪುಗಳು ನರ್ತನವನ್ನು ಮಾಡಿದವು. ಹೀಗೆ ಎಲ್ಲೆಡೆಯಲ್ಲೂ ಸಂತೋಷಕಾರ್ಯಗಳು ಬೆಳೆದುವು.

ಜಗುರ್ಗಂಧರ್ವಪತಯಃ ಮುದಿತಾಸ್ತೇ ದಿದೃಕ್ಷವಃ ।
ವಿಶ್ವಾವಸುರ್ನಾರದಶ್ಚ ತುಂಬುರುಶ್ಶುಕಸಂಭವೇ ॥೧೫॥

ಗಂಧರ್ವರೆಂಬ ದೇವತೆಗಳು ಗಾನಮಾಡಿದರು. ಅವರಲ್ಲಿ ಪ್ರಮುಖರಾದ ವಿಶ್ವಾವಸು, ನಾರದ, ತುಂಬುರು, ಮುಂತಾದ ನಾಯಕರು ಆ ಮಗುವನ್ನು ನೋಡಲು ಅಪೇಕ್ಷೆಯುಳ್ಳವರಾಗಿ ಅದರ ಜನ್ಮಸಮಯದಲ್ಲಿ ಸಂತೋಷಗೊಂಡರು.

ತುಷ್ಟುವುರ್ಮುದಿತಾಸ್ಸರ್ವೇ ದೇವಾ ವಿದ್ಯಾಧರಾಸ್ತಥಾ ।
ದೃಷ್ಟ್ವಾ ವ್ಯಾಸಸುತಂ ದಿವ್ಯಂ ಅರಣೀಗರ್ಭಸಂಭವಂ ॥೧೬॥

ಹಾಗೆ ಅರಣೀಮರದ ಮಧ್ಯದಿಂದ ಉದ್ಭವಿಸಿದ, ವ್ಯಾಸನ ಮಗನಾದ ಆ ಉತ್ತಮವಾದ ಮಗುವನ್ನು ನೋಡಿ ವಿದ್ಯಾಧರರೇ ಮುಂತಾದ ದೇವತೆಗಳೆಲ್ಲರೂ ಸಂತೋಷಗೊಂಡವರಾಗಿ ಆ ಶುಕಮುನಿಯನ್ನು ಶ್ಲಾಘಿಸಿದರು.

**ಅಂತರಿಕ್ಷಾತ್ಪಪಾತೋರ್ವ್ಯಾಂ ದಂಡಃ ಕೃಷ್ಣಾಜಿನಂ ಶುಭಂ ।**
**ಕಮಂಡಲುಸ್ತಥಾ ದಿವ್ಯಃ ಶುಕಸ್ಯಾರ್ಥೇ ದ್ವಿಜೋತ್ತಮಾಃ ॥೧೭॥**

ಓ ಶ್ರೇಷ್ಠರಾದ ಬ್ರಾಹ್ಮಣರೇ, ಆ ಶುಕಮುನಿಯ ಉಪಯೋಗಕ್ಕೋಸ್ಕರ ಸನ್ಯಾಸಾಶ್ರಮದ ಧರ್ಮಾಚರಣೆಗೆ ಬೇಕಾದ ದಂಡವೂ, ಮಂಗಳಕರವಾದ ಕೃಷ್ಣಾಜಿನವೂ, ಕಮಂಡಲು ಎಂಬ ನೀರಿನ ಪಾತ್ರೆಯೂ ದೇವಲೋಕದಿಂದ ಬಿದ್ದುವು.

**ಸದ್ಯಸ್ಸ ವವೃಧೇ ಬಾಲಃ ಜಾತಮಾತ್ರೋಽತಿದೀಪ್ತಿಮಾನ್ ।**
**ತಸ್ಯೋಪನಯನಂ ಚಕ್ರೇ ವ್ಯಾಸೋ ವಿದ್ಯಾವಿಧಾನವಿತ್ ॥೧೮॥**

ಆ ಶುಕನು ಹುಟ್ಟುತ್ತಿರುವಾಗಲೇ ತುಂಬ ಕಾಂತಿಯುಳ್ಳವನಾಗಿದ್ದು, ಕೂಡಲೇ ಬೇಗ ಬೇಗ ಹುಡುಗನಾಗಿ ಬೆಳೆದನು. ವಿದ್ಯಾಭ್ಯಾಸಮಾಡಿಸುವ ರೀತಿಯನ್ನು ಚೆನ್ನಾಗಿ ಬಲ್ಲವನಾದ ವ್ಯಾಸನು ಅವನಿಗೆ ಉಪನಯನಸಂಸ್ಕಾರವನ್ನೂ ನೆರವೇರಿಸಿದನು. ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿಯನ್ನು ಗುರುವಿನ ಸಮೀಪಕ್ಕೆ ಕರೆದುಕೊಂಡು ಹೋಗಿ ಬಿಡುವುದಕ್ಕೆ ಉಪನಯನವೆಂದು ಹೆಸರು.

**ಉತ್ಪನ್ನಮಾತ್ರಂ ತಂ ವೇದಾಃ ಸರಹಸ್ಯಾಸ್ಸಸಂಗ್ರಹಾಃ ।**
**ಉಪತಸ್ಥುರ್ಮಹಾತ್ಮಾನಂ ಯಥಾಽಸ್ಯ ಪಿತರಂ ತಥಾ ॥೧೯॥**

ಶಾಸ್ತ್ರಗಳ ಸಿದ್ಧಾಂತಗಳಲ್ಲಿನ ರಹಸ್ಯವಿಷಯಗಳಿಂದ ಕೂಡಿದ, ಸೂತ್ರಗಳೇ ಮುಂತಾದ ಸಂಗ್ರಹಗ್ರಂಥಗಳಿಂದೊಡಗೂಡಿದ, ಎಲ್ಲ ವೇದಗಳೂ ಆ ಶುಕನ ತಂದೆಯಾದ ವ್ಯಾಸನನ್ನು ಪಡೆದಹಾಗೆಯೇ, ಈ ಶುಕನು ಹುಟ್ಟುತ್ತಿದ್ದಹಾಗೆಯೇ ಇವನನ್ನೂ ಪಡೆದುವು. ಎಂದರೆ, ಇವನ ಮನಸ್ಸಿನಲ್ಲಿ ಅವೆಲ್ಲವೂ ಸ್ಫುರಿಸಿದವು. ಇತರರಂತೆ ಕ್ರಮವಾಗಿ ವ್ಯಾಸಂಗಮಾಡಿ ಜ್ಞಾನವನ್ನು ಸಂಪಾದಿಸಬೇಕಾಗಲಿಲ್ಲವು. ಪೂರ್ವಜನ್ಮದಲ್ಲಿನ ಸಂಸ್ಕಾರಬಲದಿಂದಲೇ ಜ್ಞಾನಿಯಾದನು ಎಂದು ತಾತ್ಪರ್ಯವು.

**ಯತೋ ದೃಷ್ಟಂ ಶುಕೀರೂಪಂ ಘೃತಾಚ್ಯಾಸ್ಸಂಭವೇ ತದಾ ।**
**ಶುಕೇತಿ ನಾಮ ಪುತ್ರಸ್ಯ ಚಕಾರ ಮುನಿಸತ್ತಮಾಃ ॥೨೦॥**

ಓ ಋಷಿಶ್ರೇಷ್ಠರಿರಾ, ಈ ಶುಕಮುನಿಯು ಪ್ರಾದುರ್ಭವಿಸಿದ ಸಮಯದಲ್ಲಿ ಈ ಶುಕನ ತಂದೆಯಾದ ವ್ಯಾಸನ ಮನಸ್ಸು ಮತ್ತು ವೀರ್ಯ ಇವುಗಳ ಚಲನೆಗೆ ಕಾರಣ ಳಾದುದರಿಂದ ಇವನ ತಾಯಿಯಾದ ಘೃತಾಚೀ ಎಂಬ ಅಪ್ಸರಸ್ತ್ರೀಯು ಹೆಣ್ಣುಗಿಣಿಯ ರೂಪದಲ್ಲಿದ್ದುದು ಕಂಡು ಬಂದುದರಿಂದ, ವ್ಯಾಸನು ಈ ಮಗುವಿಗೆ ಶುಕ ಎಂದು ನಾಮಕರಣ ಮಾಡಿದನು.

**ಬೃಹಸ್ಪತಿಮುಪಾಧ್ಯಾಯಂ ಕೃತ್ವಾ ವ್ಯಾಸಸುತಸ್ತದಾ ।**
**ವ್ರತಾನಿ ಬ್ರಹ್ಮಚರ್ಯಸ್ಯ ಚಕಾರ ವಿಧಿಪೂರ್ವಕಂ ॥೨೦॥**

ಆಗ ವ್ಯಾಸನ ಮಗನಾದ ಶುಕನು, ದೇವತೆಗಳಿಗೆಲ್ಲ ಗುರುವಾದ ಬೃಹಸ್ಪತಿ ಯನ್ನೇ ತನಗೆ ಆಚಾರ್ಯನನ್ನಾಗಿ ಪಡೆದು ಶಾಸ್ತ್ರದಲ್ಲಿ ಹೇಳಿರುವ ರೀತಿಯನ್ನನುಸರಿಸಿ ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ನಿಯಮಗಳನ್ನೆಲ್ಲವನ್ನೂ ಲೋಕಸಂಗ್ರಹಾರ್ಥವಾಗಿ ಆಚರಿಸಿ ಪಾಲಿಸಿದನು.

**ಸೋಽಧೀತ್ಯ ನಿಖಿಲಾನ್ವೇದಾನ್ ಸರಹಸ್ಯಾನ್ ಸಸಂಗ್ರಹಾನ್ ।**
**ಧರ್ಮಶಾಸ್ತ್ರಾಣಿ ಸರ್ವಾಣಿ ಕೃತ್ವಾ ಗುರುಕುಲೇ ಶುಕಃ ॥೨೧॥**

ಆ ಶುಕನು ರಹಸ್ಯಗಳು ಎಂದರೆ ವೇದಗಳ ತಾತ್ಪರ್ಯದ ಗುಟ್ಟನ್ನು ತಿಳಿಸುವ ಉಪನಿಷತ್ತುಗಳು, ಮತ್ತು ಸಂಗ್ರಹಗಳು ಎಂದರೆ, ಕ್ರಮವಾಗಿ ಶಾಸ್ತ್ರೀಯವಾಗಿ ವೇದತತ್ತ್ವಗಳನ್ನು ತಿಳಿಸುವ ಸೂತ್ರಗಳು ಇವುಗಳಿಂದ ಕೂಡಿದ ವೇದಗಳೆಲ್ಲವನ್ನೂ ಸಮಗ್ರವಾಗಿ ಅಧ್ಯಯನಮಾಡಿ ಕಲಿತು, ಗುರುವಿನ ಆಶ್ರಯದಲ್ಲಿರುತ್ತಾ ಎಲ್ಲ ಧರ್ಮಶಾಸ್ತ್ರಗಳನ್ನೂ ಅಭ್ಯಾಸಮಾಡಿ,

**ಗುರವೇ ದಕ್ಷಿಣಾಂ ದತ್ವಾ ಸಮಾವೃತ್ತೋ ಮುನಿಸ್ತದಾ ।**
**ಆಜಗಾಮ ಪಿತುಃ ಪಾರ್ಶ್ವೇ ಕೃಷ್ಣದ್ವೈಪಾಯನಸ್ಯ ಚ ॥೨೨॥**

ಆ ಗುರುವಿಗೆ ಯಥಾಶಕ್ತಿಯಾಗಿ ದಕ್ಷಿಣೆಯನ್ನು ಸಲ್ಲಿಸಿ, ಶುಕನು ಆಗ ಗುರುಕುಲದಿಂದ ಹಿಂತಿರುಗಿದವನಾಗಿ, ಸಮಾವರ್ತನಸಂಸ್ಕಾರವನ್ನೂ ನೆರವೇರಿಸಿ ಕೊಂಡು, ಕೃಷ್ಣದ್ವೈಪಾಯನನೆಂದು ಪ್ರಸಿದ್ಧನಾದ ತನ್ನ ತಂದೆಯ ಸಮೀಪಕ್ಕೆ ಬಂದನು.

**ದೃಷ್ಟ್ವಾ ವ್ಯಾಸಶ್ಶುಕಂ ಪ್ರಾಪ್ತಂ ಪ್ರೇಮ್ಣೋತ್ಥಾಯ ಸಸಂಭ್ರಮಃ ।**
**ಆಲಿಲಿಂಗ ಮುಹುರ್ಘ್ರಾಣಂ ಮೂರ್ಧ್ನಿ ತಸ್ಯ ಚಕಾರ ಹ ॥೨೪॥**

ಹೀಗೆ ಬಂದ ಶುಕನನ್ನು ನೋಡಿ ವ್ಯಾಸನು ಪ್ರೀತಿಯಿಂದ ಎದ್ದುಬಂದು ಸಡಗರದೊಡನೆ ಅವನನ್ನು ಬಾರಿಬಾರಿಗೂ ಅಪ್ಪಿಕೊಂಡನು ಮತ್ತು ತನ್ನ ಮೂಗನ್ನು ಅವನ ತಲೆಯಲ್ಲಿಟ್ಟು ಆಘ್ರಾಣಿಸಿದನು.

**ಪಪ್ರಚ್ಛ ಕುಶಲಂ ವ್ಯಾಸಃ ತಥಾ ಚಾಧ್ಯಯನಂ ಶುಚಿಃ ।**
**ಆಶ್ವಾಸ್ಯ ಸ್ಥಾಪಯಾಮಾಸ ಶುಕಂ ತತ್ರಾಶ್ರಮೇ ಶುಭೇ ॥೨೫॥**

ಪರಿಶುದ್ಧವಾದ ನಡತೆಯುಳ್ಳ ವ್ಯಾಸನು ಶುಕನನ್ನು ಕುರಿತು ಅವನ ಯೋಗ ಕ್ಷೇಮಸಮಾಚಾರಗಳನ್ನು ಕೇಳಿ ತಿಳಿದುಕೊಂಡು, ಅವನ ಅಧ್ಯಯನವು ಸಾಂಗವಾಗಿಯೂ, ನಿರ್ವಿಘ್ನವಾಗಿಯೂ ನೆರವೇರಿತೇ ಎಂದು ವಿಚಾರಿಸಿದನು. ವ್ಯಾಸಂಗ ಕಾಲದಲ್ಲಿ ಅವನು ಪಟ್ಟ ಶ್ರಮದಿಂದ ಅವನನ್ನು ಸಮಾಧಾನಗೊಳಿಸಿ ಮಂಗಳಕರವಾದ ತನ್ನ ಆಶ್ರಮದಲ್ಲಿಯೇ ಅವನನ್ನು ಇರುವಂತೆ ಗೊತ್ತುಮಾಡಿದನು.

**ದಾರಕರ್ಮ ತತೋ ವ್ಯಾಸಃ ಶುಕಸ್ಯ ಪರ್ಯಚಿಂತಯತ್ ।**
**ಕನ್ಯಾಂ ಮುನಿಸುತಾಂ ಕಾಂತಾಮಪೃಚ್ಛದತಿವೇಗವಾನ್ ॥೨೬॥**

ಆಮೇಲೆ ವ್ಯಾಸನು ಶುಕನಿಗೆ ವಿವಾಹವನ್ನು ಮಾಡಬೇಕೆಂದು ಆಲೋಚಿಸಿದನು. ಋಷಿಪುತ್ರಿಯೂ ಮನೋಹರಳೂ ಆಗಿರುವ ಕನ್ಯೆಯನ್ನು ಜಾಗ್ರತೆಯಾಗಿ ವಿಚಾರಿಸಿ ಕೇಳಿದನು.

**ಶುಕಂ ಪ್ರಾಹ ಸುತಂ ವ್ಯಾಸೋ ವೇದೋಽಧೀತಸ್ತ್ವಯಾನಘ ।**
**ಧರ್ಮಶಾಸ್ತ್ರಾಣಿ ಸರ್ವಾಣಿ ಕುರು ಭಾರ್ಯಾಂ ಮಹಾಮತೇ ॥೨೭॥**

ವ್ಯಾಸನು ಮಗನಾದ ಶುಕನನ್ನು ಕುರಿತು ಹೀಗೆ ಹೇಳಿದನು. ಎಲೈ ಕುಶಲಮತಿಯೇ, ನೀನು ಸಾಂಗವಾಗಿ ವೇದಗಳನ್ನು ಅಧ್ಯಯನಮಾಡಿದೆ. ಎಲ್ಲ ಧರ್ಮಶಾಸ್ತ್ರಗಳನ್ನೂ ಕಲಿತೆ. ಈಗ ಹೆಂಡತಿಯೊಬ್ಬಳನ್ನು ಮದುವೆಮಾಡಿಕೊ.

**ಗಾರ್ಹಸ್ಥ್ಯಂ ಚ ಸಮಾಸಾದ್ಯ ಯಜ ದೇವಾನ್ ಪಿತೄನಥ ।**
**ಋಣಾನ್ಮೋಚಯ ಮಾಂ ಪುತ್ರ ಪ್ರಾಪ್ಯ ದಾರಾನ್ಮನೋರಮಾಂ ॥೨೮॥**

ಎಲೈ ಪುತ್ರನೇ, ಗೃಹಸ್ಥಾಶ್ರಮವನ್ನು ಅವಲಂಬಿಸಿ ದೇವತೆಗಳನ್ನೂ ಪಿತೃಗಳನ್ನೂ ಆರಾಧನೆಮಾಡಿ ಸಂತೋಷಪಡಿಸು. ಆಮೇಲೆ ಮನಸ್ಸನ್ನು ಸಂತೋಷಪಡಿಸುವ ಹೆಂಡತಿಯನ್ನು ಮದುವೆಮಾಡಿಕೊಂಡು ವಂಶವನ್ನು ಮಕ್ಕಳಿಂದ ಮುಂದುವರೆಯಿಸಿ ನನ್ನನ್ನು ಪಿತೃಋಣದಿಂದ ಬಿಡುಗಡೆಯನ್ನು ಪಡೆಯಿಸು.

**ಅಪುತ್ರಸ್ಯ ಗತಿರ್ನಾಸ್ತಿ ಸ್ವರ್ಗೋಽ ನೈವ ಚ ನೈವ ಚ ।**
**ತಸ್ಮಾತ್ಪುತ್ರ ಮಹಾಭಾಗ ಕುರುಷ್ವಾದ್ಯ ಗೃಹಾಶ್ರಮಂ ॥೨೯॥**

ಮಕ್ಕಳಿಲ್ಲದವನಿಗೆ ಸದ್ಗತಿಯು ದೊರೆಯುವುದಿಲ್ಲವು. ಸ್ವರ್ಗವನ್ನು ಪಡೆಯುವುದಂತೂ ಇಲ್ಲವೇ ಇಲ್ಲವು. ಆದುದರಿಂದ ಪುಣ್ಯಶಾಲಿಯಾದ ಮಗನೇ, ಈಗ ಗೃಹಸ್ಥಾಶ್ರಮವನ್ನು ಸ್ವೀಕರಿಸು.

**ಕೃತ್ವಾ ಗೃಹಾಶ್ರಮಂ ಪುತ್ರ ಸುಖಿನಂ ಕುರು ಮಾಂ ಶುಕ ।**
**ಆಶಾ ಮೇ ಮಹತೀ ಪುತ್ರ ಪೂರಯಸ್ವ ಮಹಾಮತೇ ॥೩೦॥**

ಮಗನಾದ ಓ ಶುಕನೇ, ಗೃಹಸ್ಥಾಶ್ರಮವನ್ನು ಅಂಗೀಕರಿಸಿ ನನ್ನನ್ನು ಸಂತೋಷವುಳ್ಳವನನ್ನಾಗಿ ಮಾಡು. ಹೆಚ್ಚಾದ ತಿಳಿವಳಿಕೆಯುಳ್ಳ ಮಗನೇ, ಹೀಗೆ ನನಗೆ ಹಿರಿಯಾಸೆಯೂ ಇದೆ. ಅದನ್ನು ನೀನು ತೃಪ್ತಿಗೊಳಿಸು.

**ತಪಸ್ತಪ್ತ್ವಾ ಮಹಾಘೋರಂ ಪ್ರಾಪ್ತೋಽಸಿ ತ್ವಮಯೋನಿಜಃ ।**
**ದೇವರೂಪೀ ಮಹಾಪ್ರಾಜ್ಞಃ ಪಾಹಿ ಮಾಂ ಪಿತರಂ ಶುಕ ॥೩೧॥**

ತುಂಬ ಕಠಿನವಾದ ತಪಸ್ಸನ್ನು ಆಚರಿಸಿ, ಇತರ ಸಾಮಾನ್ಯ ಜನರಂತೆ ಹೆಂಗಸರ ಗರ್ಭದಿಂದ ಹುಟ್ಟದೇ ಪವಿತ್ರವಾದ ಅರಣಿಯಲ್ಲಿ ಉದ್ಭವಿಸಿದ ನಿನ್ನಂತಹ ಮಗನನ್ನು ನಾನು ಪಡೆದೆನು. ಆದುದರಿಂದ ಓ ಶುಕನೇ, ನೀನು ಪರಮೇಶ್ವರನ ಅನುಗ್ರಹದಿಂದ ಉಂಟಾದವನೂ ಮತ್ತು ದೇವಾಂಶವುಳ್ಳವನೂ, ತುಂಬ ಮೇಲಾದ ತಿಳಿವಳಿಕೆಯುಳ್ಳವನೂ ಆಗಿದ್ದೀಯೆ. ತಂದೆಯಾದ ನನ್ನನ್ನು ನೀನು ಕಾಪಾಡು.

॥ ಸೂತ ಉವಾಚ ॥

**ಇತಿ ವಾದಿನಮಭ್ಯಾಶೇ ಪ್ರಾಪ್ತಃ ಪ್ರಾಹ ಶುಕಸ್ತದಾ ।**
**ವಿರಕ್ತಸ್ಸೋಽತಿರಕ್ತಂ ತಂ ಸಾಕ್ಷಾತ್ಪಿತರಮಾತ್ಮನಃ ॥೩೨॥**

ಸೂತನು ಹೇಳಿದನು—ವೈರಾಗ್ಯವನ್ನು ಪಡೆದ ಆ ಶುಕಮುನಿಯು ಹೀಗೆ ಯುಕ್ತಿಯುಕ್ತವಾಗಿ ವಾದಿಸುತ್ತಿರುವ ವ್ಯಾಸನ ಸಮೀಪವನ್ನು ಪಡೆದವನಾಗಿ ಹೆಚ್ಚಾದ ಪ್ರೇಮದ ಬಲೆಯಲ್ಲಿ ಸಿಕ್ಕಿಕೊಂಡಿರುವ ತನ್ನ ಸ್ವಂತ ತಂದೆಯಾದ ವ್ಯಾಸಮುನಿಯನ್ನು ಕುರಿತು ಹೀಗೆ ಹೇಳಿದನು.

|| ಶುಕ ಉವಾಚ ||

**ಕಿಂ ತ್ವಂ ವದಸಿ ಧರ್ಮಜ್ಞ ವೇದವ್ಯಾಸ ಮಹಾಮತೇ ।**
**ತತ್ತ್ವೇನ ಶಾಧಿ ಶಿಷ್ಯಂ ಮಾಂ ತ್ವದಾಜ್ಞಾಂ ಕರವಾಣ್ಯಲಂ ॥೩೩॥**

ಶುಕನು ಪ್ರತ್ಯುತ್ತರವನ್ನು ಹೇಳಿದನು—ಮೇಲಾದ ತಿಳಿವಳಿಕೆಯುಳ್ಳ, ವೇದಗಳನ್ನು ವಿಂಗಡಿಸಿದ, ಧರ್ಮಗಳನ್ನು ತಿಳಿದಿರುವ, ಓ ವ್ಯಾಸಮಹರ್ಷಿಯೇ, ನೀನು ಹೇಳುತ್ತಿರುವುದು ಏನು? ವಾಸ್ತವವಾದ ಶ್ರೇಯಸ್ಕರವಾದ ರೀತಿಯಿಂದ ನನಗೆ ಬುದ್ಧಿವಾದವನ್ನು ಅನುಗ್ರಹಿಸು. ನಿನ್ನ ಅಪ್ಪಣೆಯನ್ನು ಚನ್ನಾಗಿ ನೆರವೇರಿಸುವೆನು.

|| ವ್ಯಾಸ ಉವಾಚ ||

**ತ್ವದರ್ಥೇ ಯತ್ತಪಸ್ತಪ್ತಂ ಮಯಾ ಪುತ್ರ ಶತಂ ಸಮಾಃ ।**
**ಪ್ರಾಪ್ತಸ್ತ್ವಂ ಚಾತಿದುಃಖೇನ ಶಿವಸ್ಯಾರಾಧನೇನ ಚ ॥೩೪॥**

ವ್ಯಾಸಮಹರ್ಷಿಯು ಶುಕನಿಗೆ ಹೇಳಿದನು—ಓ ಮಗನೇ, ಅನೇಕವರ್ಷಗಳ ಕಾಲದಲ್ಲಿ ನಾನು ತಪಸ್ಸನ್ನು ಮಾಡಿದುದು ನಿನ್ನನ್ನು ಪಡೆಯುವುದಕ್ಕಾಗಿಯೇ. ತುಂಬ ಕಷ್ಟಗಳನ್ನು ಸಹಿಸೋಣದರಿಂದಲೂ, ಪರಮೇಶ್ವರನನ್ನು ಸಂತೋಷಪಡಿಸೋಣದರಿಂದಲೂ ನಿನ್ನನ್ನು ನಾನು ಪಡೆದೆನು.

**ದದಾಮಿ ತವ ವಿತ್ತಂ ತು ಪ್ರಾರ್ಥಯಿತ್ವಾಥ ಭೂಪತಿಂ ।**
**ಸುಖಂ ಭುಂಕ್ಷ್ವ ಮಹಾಪ್ರಾಜ್ಞ ಪ್ರಾಪ್ಯ ಯೌವನಮುತ್ತಮಂ ॥೩೫॥**

ಅಲ್ಲದೆ ದೊರೆಯನ್ನು ಕೇಳಿ ತುಂಬ ದ್ರವ್ಯ ಮುಂತಾದ ಆಸ್ತಿಯನ್ನೂ ತಂದು ನಿನಗೆ ಕೊಡುತ್ತೇನೆ. ಮೇಲಾದ ತಿಳಿವಳಿಕೆಯುಳ್ಳವನೇ, ಶ್ರೇಷ್ಠವಾದ ಯೌವನವನ್ನು ಪಡೆದು ಇರುವ ನೀನು ಸೌಖ್ಯಗಳನ್ನು ಅನುಭವಿಸು.

|| ಶುಕ ಉವಾಚ ||

**ಕಿಂ ಸುಖಂ ಮಾನುಷೇ ಲೋಕೇ ಬ್ರೂಹಿ ತಾತ ನಿರಾಮಯಂ ।**
**ದುಃಖವಿದ್ಧಂ ಸುಖಂ ಪ್ರಾಜ್ಞಾ ನ ವದಂತಿ ಸುಖಂ ಕಿಲ ॥೩೬॥**

ಶುಕನು ಹೇಳಿದನು—ಓ ತಂದೆಯೇ, ಈ ಮಾನವ ಲೋಕದಲ್ಲಿ ಆತಂಕವಿಲ್ಲದ ಶಾಶ್ವತವಾದ ಸುಖವು ಯಾವುದು ಇದೆ ? ಹೇಳು. ಎಲ್ಲ ಬಗೆಯ ಸುಖಗಳೂ ಇಲ್ಲಿ ದುಃಖಗಳಿಂದ ಕೂಡಿಯೇ ಇವೆ. ಹೀಗೆ ದುಃಖಮಿಶ್ರವಾದ ಸುಖವನ್ನು ತಿಳಿವಳಿಕೆಯುಳ್ಳವರು ನಿಜವಾದ ಸುಖವೆಂದು ಹೇಳುವುದಿಲ್ಲವಲ್ಲವೇ ?

**ಸ್ತ್ರಿಯಂ ಕೃತ್ವಾ ಮಹಾಭಾಗ ಭವಾಮಿ ತದ್ವಶಾನುಗಃ ।**
**ಸುಖಂ ಕಿಂ ಪರತಂತ್ರಸ್ಯ ಸ್ತ್ರೀಜಿತಸ್ಯ ವಿಶೇಷತಃ ॥೩೭॥**

ಪುಣ್ಯಶಾಲಿಯಾದ ವ್ಯಾಸನೇ, ಹೆಂಡತಿಯನ್ನು ಮಾಡಿಕೊಂಡರೆ ಅವಳನ್ನು ಅನುಸರಿಸಿ ಇನುವವನು ಆಗುತ್ತೇನೆ. ಹೀಗೆ ಪರಾಧೀನನಾಗಿರುವ, ಅದರಲ್ಲೂ ಹೆಂಗಸಿಗೆ ಸೋತು ಇರಬೇಕಾಗುವ, ನನಗೆ ಸುಖವು ಎಂತಹದು ?

**ಕದಾಚಿದಪಿ ಮುಚ್ಯೇತ ಲೋಹಕಾಷ್ಠಾದಿಯಂತ್ರಿತಃ ।**
**ಪುತ್ರದಾರೈರ್ನಿಬದ್ಧಸ್ತು ನ ವಿಮುಚ್ಯೇತ ಕರ್ಹಿಚಿತ್ ॥೩೮॥**

ಕಬ್ಬಿಣ ಮುಂತಾದ ಲೋಹದ ಮತ್ತು ಮರದ ಯಂತ್ರದಲ್ಲಿ ಸಿಕ್ಕಿಕೊಂಡಿರುವವನು ಒಂದಾನೊಂದು ಸಮಯದಲ್ಲಿ ಬಿಡುಗಡೆಯನ್ನು ಪಡೆಯಬಹುದು. ಆದರೆ ಹೆಂಡತಿ ಮಕ್ಕಳು ಮುಂತಾದವರಲ್ಲಿ ಮೋಹದಿಂದ ಸಿಕ್ಕಿಕೊಂಡಿರುವವನು ಎಂದಿಗೂ, ಎಲ್ಲಿಯೂ ಬಿಡುಗಡೆಯನ್ನು ಪಡೆಯುವುದಿಲ್ಲ.

**ವಿಣ್ಮೂತ್ರಸಂಭವೋ ದೇಹೋ ನಾರೀಣಾಂ ತನ್ಮಯಸ್ತಥಾ ।**
**ಕಃ ಪ್ರೀತಿಂ ತತ್ರ ವಿಪ್ರೇಂದ್ರ ವಿಬುಧಃ ಕರ್ತುಮಿಚ್ಛತಿ ॥೩೯॥**

ಮಾನವರ ಶರೀರವು ಮಲಜಲಗಳುಳ್ಳ ದೇಹಗಳಿಂದ ಉಂಟಾಗುತ್ತದೆ. ಮತ್ತು ಮಲಜಲಗಳಿಗೆ ಕಾರಣವಾಗಿರುತ್ತದೆ. ಹೆಂಗಸರ ದೇಹವೂ ಅಂತಹುದೇ ಆಗಿದೆ. ಓ ಬ್ರಾಹ್ಮಣಶ್ರೇಷ್ಠನಾದ ವ್ಯಾಸನೇ, ಅಂತಹ ದೇಹದಲ್ಲಿ ತಿಳಿವಳಿಕೆಯುಳ್ಳ ಯಾವನು ತಾನೇ ಪ್ರೇಮವನ್ನು ಇಡಲು ಅಪೇಕ್ಷಿಸಿಯಾನು ?

**ಅಯೋನಿಜೋಽಹಂ ವಿಪ್ರರ್ಷೇ ಯೋನೌ ಮೇ ಕೀದೃಶೀ ಮತಿಃ ।**
**ನ ವಾಂಛಾಮ್ಯಹಮುಗ್ರೇಽಪಿ ಯೋನಾವೇವ ಸಮುದ್ಭವಂ ॥೪೦॥**

ಓ ಬ್ರಾಹ್ಮಣೋತ್ತಮನಾದ ವ್ಯಾಸನೇ, ನಾನು ಹೆಂಗಸರ ದೇಹದಿಂದ ಹುಟ್ಟಿದವನು ಅಲ್ಲವು. ನನ್ನಂತಹವನಿಗೆ ಸ್ತ್ರೀದೇಹದ ವಿಷಯದಲ್ಲಿ ಎಂತಹ ಅಭಿಪ್ರಾಯವಿರುತ್ತದೆ ಎಂಬುದು ಗೊತ್ತಾದ ವಿಷಯವಾಗಿದೆ. ಮುಂದೆಯೂ ನಾನು ಅಂತಹ ದೇಹದಲ್ಲಿಯೇ ಹುಟ್ಟನ್ನು ಪಡೆಯುತ್ತಿರಲು ಅಪೇಕ್ಷಿಸುವುದಿಲ್ಲವು.

**ವಿಟ್ಸುಖಂ ಕಿಮು ವಾಂಛಾಮಿ ತ್ಯಕ್ತ್ವಾತ್ಮ ಸುಖಮದ್ಭುತಂ ।**
**ಆತ್ಮಾರಾಮಶ್ಚ ಭೂಯೋಽಪಿ ನ ಭವತ್ಯತಿಲೋಲುಪಃ ॥೪೧॥**

ದುಃಖದೋಷಸಂಬಂಧವಿಲ್ಲದೆ, ಆಶ್ಚರ್ಯಕರವಾದ ಆತ್ಮಾನಂದವನ್ನು ಬಿಟ್ಟು ಮಲಮುಂತಾದ ದುಃಖದೋಷಗಳ ಸಂಬಂಧದಿಂದ ಸುಖಾಭಾಸದಂತಿರುವ ಸಾಂಸಾರಿಕವಾದ ಸುಖವನ್ನು ನಾನು ಏಕೆ ಅಪೇಕ್ಷಿಸಲಿ? ಆತ್ಮಾನಂದವನ್ನು ಅನುಭವಿಸುವವನು ಪುನಃ ಸಾಂಸಾರಿಕಸುಖದಲ್ಲಿ ಹೆಚ್ಚು ಆಸಕ್ತಿಯುಳ್ಳವನಾಗನು.

**ಪ್ರಥಮಂ ಪಠಿತಾ ವೇದಾ ಮಯಾ ವಿಸ್ತಾರಿತಾಶ್ಚ ತೇ ।**
**ಹಿಂಸಾಮಯಾಸ್ತೇ ಪಠಿತಾ ಕರ್ಮಮಾರ್ಗಪ್ರವರ್ತಕಾಃ ॥೪೨॥**

ನಾನು ಮೊದಲು ವೇದಗಳನ್ನು ವ್ಯಾಸಂಗಮಾಡಿದೆನು. ಆಮೇಲೆ ಅವುಗಳ ತಾತ್ಪರ್ಯವನ್ನೂ ವಿಸ್ತಾರವಾಗಿ ವಿಚಾರಿಸಿ, ವಿಮರ್ಶಿಸಿ ತಿಳಿದೆನು. ಅವು ಕರ್ಮಮಾರ್ಗವನ್ನು ಅನುಸರಿಸುವಂತೆ ಪ್ರೇರಿಸುತ್ತವೆ. ಕರ್ಮಮಾರ್ಗವು ಹಿಂಸೆಯಿಂದ ಕೂಡಿದುದಾಗಿದೆ. ಇದನ್ನು ನಾನು ಆ ವೇದವನ್ನು ಓದಿ ತಿಳಿದಿದ್ದೇನೆ.

**ಬೃಹಸ್ಪತಿರ್ಗುರುಃಪ್ರಾಪ್ತಃ ಸೋಽಪಿ ಮಗ್ನೋ ಗೃಹಾರ್ಣವೇ ।**
**ಅವಿದ್ಯಾಗ್ರಸ್ತಹೃದಯಃ ಕಥಂ ತಾರಯಿತುಂ ಕ್ಷಮಃ ॥೪೩॥**

ಬೃಹಸ್ಪತ್ಯಾಚಾರ್ಯನನ್ನು ಗುರುವೆಂದು ಭಾವಿಸಿ ಪಡೆದೆನು. ಆತನೂ ಸಂಸಾರಸಾಗರದಲ್ಲಿ ಮುಳುಗಿದವನಾಗಿದ್ದಾನೆ. ಮತ್ತು ಅವನ ಮನಸ್ಸು ಮೂಲಾಜ್ಞಾನದಿಂದ ಗ್ರಹಣಹಿಡಿದಂತಾಗಿದೆ. ಅಂಥಾ ಗುರುವು ಹೇಗೆ ತಾನೇ ಶಿಷ್ಯನನ್ನು ಸಂಸಾರಸಾಗರವನ್ನು ದಾಟಿಸಲು ಸಮರ್ಥನಾದಾನು ?

**ರೋಗಗ್ರಸ್ತೋ ಯಥಾ ವೈದ್ಯಃ ಪರರೋಗಚಿಕಿತ್ಸಕಃ ।**
**ತಥಾ ಗುರುರ್ಮುಮುಕ್ಷೋರ್ಮೇ ಗೃಹಸ್ಥೋಽರ್ಥವಿಡಂಬನಾ ॥೪೪॥**

ರೋಗದಿಂದ ನರಳುತ್ತಿರುವ ವೈದ್ಯನು ಇತರರ ಖಾಯಿಲೆಯನ್ನು ವಾಸಿ ಮಾಡುತ್ತಾನೆನ್ನುವುದು ಹೇಗೋ ಹಾಗೆಯೇ, ಸಂಸಾರವೆಂಬ ಅಜ್ಞಾನದಲ್ಲಿ ಸಿಕ್ಕಿ ಕೊಂಡಿರುವ ಗುರುವೂ ಮೋಕ್ಷವನ್ನು ಪಡೆಯಲು ಬಯಸುತ್ತಿರುವ ನನಗೆ ಬಿಡುಗಡೆ ಯನ್ನು ಉಂಟುಮಾಡುತ್ತಾನೆಂಬುದು ನಟನೆಯೇ ಹೊರತು ವಾಸ್ತವವಾಗಲಾರದು.

**ಕೃತ್ವಾ ಪ್ರಣಾಮಂ ಗುರವೇ ತ್ವತ್ಸಮೀಪಮುಪಾಗತಃ ।**
**ತ್ರಾಹಿ ಮಾಂ ತತ್ತ್ವಬೋಧೇನ ಭೀತಂ ಸಂಸಾರಸರ್ಪತಃ ॥೪೫॥**

ಆದುದರಿಂದ ಬೃಹಸ್ಪತ್ಯಾಚಾರ್ಯನಿಗೆ ನಮಸ್ಕಾರವನ್ನು ಮಾಡಿ ನಿನ್ನ ಹತ್ತಿರಕ್ಕೆ ಬಂದಿರುವೆನು. ಸಂಸಾರದಲ್ಲಿನ ಮೋಹಪಾಶದಿಂದ ಹೆದರಿರುವ ನನ್ನನ್ನು ಪರತತ್ತ್ವದ ಸ್ವರೂಪವನ್ನು ತಿಳಿಯಹೇಳುವುದರಿಂದ ಕಾಪಾಡು.

**ಸಂಸಾರೇಽಸ್ಮಿನ್ ಮಹಾಘೋರೇ ಭ್ರಮಣಂ ನ ಭಚಕ್ರವತ್ ।**
**ನ ಚ ವಿಶ್ರಮಣಂ ಕ್ವಾಪಿ ಸೂರ್ಯಸ್ಯೇವ ದಿವಾನಿಶಿ ॥೪೬॥**

ಹುಟ್ಟು, ಮುಪ್ಪು ಸಾವುಗಳಿಂದ ತುಂಬಿ ಭಯಂಕರವಾದ ಈ ಸಂಸಾರಚಕ್ರ ದಲ್ಲಿ ಸಿಕ್ಕಿಕೊಂಡು ಸುತ್ತುತ್ತಿರುವುದು, ನಕ್ಷತ್ರಗಳಿಂದ ಕೂಡಿದ ಅಂತರಿಕ್ಷದಲ್ಲಿ ಹಗಲೂ ಇರುಳೂ, ಸುತ್ತುತ್ತಿರುವ ಸೂರ್ಯನಿಗೆ ಹೇಗೆ ಯಾವಾಗಲೂ ವಿಶ್ರಾಂತಿ ಇಲ್ಲದೆ ಇದೆಯೋ, ನನಗೂ ಹಾಗೆ ಕೊನೆಗಾಣದೆ ಇದೆ.

**ಕಿಂ ಸುಖಂ ತಾತ ಸಂಸಾರೇ ನಿಜತತ್ತ್ವವಿಚಾರಣಾತ್ ।**
**ಮೂಢಾನಾಂ ಸುಖಬುದ್ಧಿಸ್ತು ವಿಟ್ಸು ಕೀಟಸುಖಂ ಯಥಾ ॥೪೭॥**

ಓ ತಂದೆಯಾದ ವ್ಯಾಸಮುನಿಯೇ, ಇಂತಹ ಸಂಸಾರದಲ್ಲಿ ಸುಖವಿದೆಯೇ? ಇಲ್ಲವೆಂಬುದು ಪರತತ್ತ್ವದ ನಿಜಸ್ವರೂಪವನ್ನು ವಿಚಾರಣೆಮಾಡಿ ತಿಳಿಯುವುದರಿಂದ ಗೊತ್ತಾಗುತ್ತದೆ. ಆದರೆ ಅಜ್ಞಾನಿಗಳಾದ ಮೂಢರು ಈ ಸಂಸಾರದಲ್ಲಿ ಸುಖವಿದೆ ಎಂದು ವ್ಯವಹರಿಸುತ್ತಿರುವುದಾದರೋ, ಕ್ರಿಮಿಗಳು ಮಲದಲ್ಲಿ ಸುಖಭ್ರಾಂತಿಯಿಂದ ಜೀವಿಸುತ್ತಿರುವಂತೆಯೇ ಇದೆ.

**ಅಧೀತ್ಯ ವೇದಶಾಸ್ತ್ರಾಣಿ ಸಂಸಾರೇ ರಾಗಿಣಶ್ಚ ಯೇ ।**
**ತೇಭ್ಯಃ ಪರೋ ನ ಮೂರ್ಖೋಽಸ್ತಿ ಸಧರ್ಮಾ ಶ್ವಾಶ್ವಸೂಕರೈಃ ॥೪೮॥**

ವೇದಗಳನ್ನೂ ಶಾಸ್ತ್ರಗಳನ್ನೂ ವ್ಯಾಸಂಗಮಾಡಿದ ಮೇಲೂ ಯಾರು ಈ ಸಂಸಾರದಲ್ಲಿನ ಸುಖದ ಆಭಾಸದಲ್ಲಿಯೇ ಆಶೆಯುಳ್ಳವರಾಗಿರುತ್ತಾರೋ ಅಂಥವರು

ನಾಯಿ, ಕುದುರೆ, ಹಂದಿ ಇವುಗಳಂತೆ ಇರುತ್ತಾರೆಯೇ ಹೊರತು ಅಂಥವರಿಗಿಂತ ಹೆಚ್ಚಿನ ಮೂರ್ಖನಾದವನು ಈ ಲೋಕದಲ್ಲಿಲ್ಲವು. ಸತ್ಯವೂ ನಿತ್ಯವೂ ಆದ ಸುಖವು ಸಂಸಾರದಲ್ಲಿ ದೊರೆಯುವುದಿಲ್ಲವೆಂದು ವೇದಶಾಸ್ತ್ರಗಳಲ್ಲಿ ಅಡಿಗಡಿಗೆ ಹೇಳಿದ್ದರೂ, ಅನುಭವದಲ್ಲಿ ಗೊತ್ತಾಗಿದ್ದರೂ, ಈ ಸಂಸಾರದಲ್ಲಿಯೇ ಸುಖವನ್ನು ಪಡೆಯಲು ಅರಸುತ್ತಿರುವುದು ಅಂಥವರ ಮೂರ್ಖತನವಲ್ಲದೆ ಬೇರೆ ಅಲ್ಲವೆಂದು ತಾತ್ಪರ್ಯವು.

**ಮಾನುಷ್ಯಂ ದುರ್ಲಭಂ ಪ್ರಾಪ್ಯ ವೇದಶಾಸ್ತ್ರಾಣ್ಯಧೀತ್ಯ ಚ ।**
**ಬಧ್ಯತೇ ಯದಿ ಸಂಸಾರೇ ಕೋ ವಿಮುಚ್ಯೇತ ಮಾನವಃ ॥೪೯॥**

ಬಹು ಕಷ್ಟಪಟ್ಟು ಪಡೆಯಲು ಸಾಧ್ಯವಾದ ಮನುಷ್ಯಜನ್ಮವನ್ನು ಪಡೆದ ಮೇಲೂ, ವೇದಗಳನ್ನೂ ವೇದಾಂತ ಮುಂತಾದ ಶಾಸ್ತ್ರಗಳನ್ನೂ ವ್ಯಾಸಂಗಮಾಡಿದ ಮೇಲೂ ಮಾನವನು ಸಂಸಾರದಲ್ಲಿಯೇ ಅಭಿಮಾನದಿಂದ ಸಿಕ್ಕಿಕೊಂಡಿರುವುದಾದರೆ ಯಾವ ಮನುಷ್ಯನು ತಾನೇ ಬಿಡುಗಡೆಯನ್ನು ಪಡೆದಾನು ?

**ನಾತಃ ಪರತರಂ ಲೋಕೇ ಕ್ವಚಿದಾಶ್ಚರ್ಯಮದ್ಭುತಂ ।**
**ಪುತ್ರದಾರಗೃಹಾಸಕ್ತಃ ಪಂಡಿತಃ ಪರಿಗೀಯತೇ ॥೫೦॥**

ಮಕ್ಕಳು, ಹೆಂಡತಿ, ಮನೆಗಳಲ್ಲಿ ನಾನು ನನ್ನದೆಂಬ ಅಭಿಮಾನದಿಂದ ಆಸಕ್ತಿಯುಳ್ಳ ಮೇಲೆ ಹೇಳಿದಂಥವನನ್ನೂ ಪಂಡಿತನೆಂದು ಹೇಳುವುದಕ್ಕಿಂತಲೂ ಹೆಚ್ಚಿನ ಆಶ್ಚರ್ಯಕರವಾದ ವಿಷಯವು ಈ ಲೋಕದಲ್ಲಿ ಮತ್ತೊಂದಿಲ್ಲವು.

**ನ ಬಾಧ್ಯತೇ ಯಸ್ಸಂಸಾರೇ ನರೋ ಮಾಯಾಗುಣೈಸ್ತ್ರಿಭಿಃ ।**
**ಸ ವಿದ್ವಾನ್ ಸ ಚ ಮೇಧಾವೀ ಶಾಸ್ತ್ರಪಾರಂಗತೋ ಹಿ ಸಃ ॥೫೧॥**

ಯಾವ ತಿಳಿವಳಿಕೆಯುಳ್ಳ ಮನುಷ್ಯನು, ಈ ಕರ್ತೃತ್ವ, ಭೋಕ್ತೃತ್ವ, ಜನನಮರಣರೂಪವಾದ ಎಂದರೆ, ಫಲವನ್ನು ಪಡೆಯಬೇಕೆಂಬ ಉದ್ದೇಶದಿಂದ ಕರ್ಮವನ್ನು ಮಾಡುವುದು, ಅಂತಹ ಫಲಗಳನ್ನು ಅನುಭವಿಸುವುದು, ಇವುಗಳಿಗಾಗಿ ಹುಟ್ಟು ಸಾವುಗಳನ್ನು ಪಡೆಯುತ್ತಿರುವುದು, ಈ ಚಕ್ರಗತಿಯಲ್ಲಿ ಈ ಸುಳಿಯಲ್ಲಿ ಸುತ್ತುತ್ತಿರುವುದೆಂಬ ಸಂಸಾರದಲ್ಲಿ ವ್ಯವಹರಿಸುತ್ತಿದ್ದರೂ, ಮಾಯೆಯ ಸತ್ತ್ವರಜಸ್ತಮವೆಂಬ ಮೂರು ಗುಣಗಳಿಂದಲೂ, ಅದರ ಪರಿಣಾಮಗಳಾದ ಸಾಂಸಾರಿಕವಾದ ವಿಷಯಗಳು, ಸಂಗತಿಗಳು ಇವುಗಳಿಂದ ಬಾಧಿಸಲ್ಪಡುವುದಿಲ್ಲವೋ, ಅಂಥವನೇ

ಪಂಡಿತನು, ಮತ್ತು ಬುದ್ಧಿವಂತನು. ಶಾಸ್ತ್ರಗಳನ್ನು ಸಂಪೂರ್ಣವಾಗಿ ತಿಳಿದ ವಿವೇಕಿಯು ಎನ್ನಬಹುದು. ಹಾಗೆಯೇ ಸರಿ.

**ಕಿಂ ವೃಥಾಧ್ಯಯನೇನಾತ್ರ ದೃಢಬಂಧಕರೇಣ ಚ ।**
**ಪಠಿತವ್ಯಂ ತದೇವಾಶು ಮೋಚಯೇದ್ಭವಬಂಧನಾತ್ ॥೫೨॥**

ಅಂತಹ ತಿಳಿವಳಿಕೆಯನ್ನುಂಟುಮಾಡದೆ ಇರುವುದರಿಂದ ವ್ಯರ್ಥವಾಗಿರುವ ಆ ವೇದಶಾಸ್ತ್ರಗಳ ವ್ಯಾಸಂಗದಿಂದ ಈ ಲೋಕದಲ್ಲಿ ಏನೂ ಫಲವಿಲ್ಲವು. ಅಲ್ಲದೆ, ಸಂಸಾರದಲ್ಲಿ ಮೋಹದ ಕಟ್ಟನ್ನು ಬಲಪಡಿಸುವ ಆ ಪುಸ್ತಕಪಾಂಡಿತ್ಯವು ಅನಿಷ್ಟಫಲವುಳ್ಳದೂ ಆಗುತ್ತದೆ. ಆದರೆ, ಎಂತಹ ತಿಳಿವಳಿಕೆಯು ಈ ಸಂಸಾರದಲ್ಲಿ ನಮಗಿರುವ ಮೋಹದ ಕಟ್ಟನ್ನು ಸಡಲಿಸಿ ಬಿಡುಗಡೆಯನ್ನು ಉಂಟುಮಾಡುತ್ತದೆಯೋ ಅಂತಹ ವೈರಾಗ್ಯಜ್ಞಾನಗಳಲ್ಲಿ ಪರಿಣಮಿಸುವ ಶಾಸ್ತ್ರವ್ಯಾಸಂಗವನ್ನೇ ಮಾಡಬೇಕು. ಅದೇ ಸಾರ್ಥಕವಾದುದು.

**ಗೃಹ್ಣಾತಿ ಪುರುಷಂ ಯಸ್ಮಾದ್ಗೃಹಂ ತೇನ ಪ್ರಕೀರ್ತಿತಂ ।**
**ಕ್ವ ಸುಖಂ ಬಂಧನಾಗಾರೇ ತೇನ ಭೀತೋಽಸ್ಮ್ಯಹಂ ಪಿತಃ ॥೫೩॥**

ಮಾನವನನ್ನು ಸಂಸಾರದಲ್ಲಿ ಹಿಡಿದು ಕಟ್ಟಿಹಾಕುತ್ತದೆ ಎಂಬ ಕಾರಣದಿಂದ ಮನೆಯನ್ನೂ ಹೆಂಡತಿಯನ್ನೂ ಪಡೆಯಿಸುವ ಗೃಹಸ್ಥಾಶ್ರಮವನ್ನು ಗೃಹವೆನ್ನುತ್ತಾರೆ. ಇಂತಹ ಸೆರೆಮನೆಯಲ್ಲಿ ಸುಖವು ಎಲ್ಲಿದೆ? ಆದುದರಿಂದ ಓ ತಂದೆಯೇ, ಇಂತಹ ಸೆರೆಮನೆಯಂತಿರುವ ಗೃಹದಿಂದ ನಾನು ಹೆದರಿದ್ದೇನೆ.

**ಯೇಽಬುಧಾ ಮಂದಮತಯಃ ವಿಧಿನಾ ಮುಷಿತಾಶ್ಚ ಯೇ ।**
**ತೇ ಪ್ರಾಪ್ಯ ಮಾನುಷಂ ಜನ್ಮ ಪುನರ್ಬಂಧಂ ವಿಶಂತ್ಯುತ ॥೫೪॥**

ಯಾರು ಇಂತಹ ಸೂಕ್ಷ್ಮಬುದ್ಧಿಯುಳ್ಳವರಲ್ಲವೋ ಅವರು ಪಂಡಿತರಲ್ಲವು. ಅಂತಹವರು ದೈವದಿಂದ ವಂಚಿಸಲ್ಪಟ್ಟವರಾಗಿರುತ್ತಾರೆ. ಅಂಥವರು ಮನುಷ್ಯಜನ್ಮವನ್ನು ಪಡೆದಿದ್ದರೂ ಮತ್ತೆ ಮೋಹದಿಂದ ಈ ಸಂಸಾರದ ಕಟ್ಟಿನಲ್ಲಿರುತ್ತಾರೆ.

॥ ವ್ಯಾಸ ಉವಾಚ ॥

**ನ ಗೃಹಂ ಬಂಧನಾಗಾರಂ ಬಂಧನೇ ನ ಚ ಕಾರಣಂ ।**
**ಮನಸಾ ಯೋ ವಿನಿರ್ಮುಕ್ತೋ ಗೃಹಸ್ಥೋಽಪಿ ವಿಮುಚ್ಯತೇ ॥೫೫॥**

ಶುಕನ ಮಾತುಗಳನ್ನು ಕೇಳಿ ವ್ಯಾಸನು ಪುನಃ ಅವನನ್ನು ಕುರಿತು ಇಂತೆಂದನು — ಓ ಮಗನೇ, ಗೃಹಸ್ಥಾಶ್ರಮವು ಸೆರೆಮನೆಯಲ್ಲವು. ಮೋಹದ ಕಟ್ಟಿನಲ್ಲೂ ಅದು ಕಾರಣವಲ್ಲವು. ಯಾವ ಮನುಷ್ಯನು ಮನಸ್ಸಿನಿಂದ ಬಿಡುಗಡೆಯನ್ನು ಹೊಂದಿರುತ್ತಾನೋ, ಎಂದರೆ, ಸಾಂಸಾರಿಕವಿಷಯಗಳಲ್ಲಿ ವಿವೇಚನೆಯಿಂದುಂಟಾದ ವೈರಾಗ್ಯದಿಂದಲೂ, ಪರತತ್ತ್ವಜ್ಞಾನದ ಅಪರೋಕ್ಷಾನುಭವದಿಂದಲೂ ಶುದ್ಧವಾದ ಮನಸ್ಸಿನಿಂದ ಕೂಡಿದವನಾಗಿ, ಅಜ್ಞಾನದಿಂದ ಉಂಟಾಗಿದ್ದ ಮೋಹದ ಕಟ್ಟಿನಿಂದ ಬಿಡುಗಡೆಯನ್ನು ಪಡೆದಿರುತ್ತಾನೋ, ಅಂಥವನು ಗೃಹಸ್ಥಾಶ್ರಮದಲ್ಲಿದ್ದು ವ್ಯವಹರಿಸುತ್ತಿದ್ದರೂ, ಕಡೆಗೆ ಮೋಕ್ಷವನ್ನು ಪಡೆಯುತ್ತಾನೆ ಎಂದು ತಾತ್ಪರ್ಯವು.

**ನ್ಯಾಯಾಗತಧನಃ ಕುರ್ವನ್ ವೇದೋಕ್ತಂ ವಿಧಿವತ್ಕ್ರಮಾತ್ ।**
**ಗೃಹಸ್ಥೋಽಪಿ ವಿಮುಚ್ಯೇತ ಶ್ರಾದ್ಧಕೃತ್ಸತ್ಯವಾಕ್ ಶುಚಿಃ ॥೫೬॥**

ನ್ಯಾಯವಾದ ರೀತಿಯಿಂದ ಹಣವನ್ನು ಸಂಪಾದಿಸುವ, ವೇದಗಳಲ್ಲಿ ವಿಧಿಸಿರುವ ಕರ್ಮಗಳನ್ನು ಶಾಸ್ತ್ರವನ್ನನುಸರಿಸಿ ಸರಿಯಾದ ಕ್ರಮದಲ್ಲಿ ಆಚರಿಸುವ, ಭಕ್ತಿ ಆದರಗಳೊಡನೆ ಕರ್ಮಗಳನ್ನು ಮಾಡುವ, ಯಾವಾಗಲೂ ಸತ್ಯವನ್ನೇ ಹೇಳುವ, ನಿರ್ಮಲವಾದ ನಡತೆಯುಳ್ಳ ಮನುಷ್ಯನು ಗೃಹಸ್ಥಾಶ್ರಮದಲ್ಲಿದ್ದರೂ ಕಡೆಗೆ ಮೋಕ್ಷವನ್ನು ಪಡೆಯುತ್ತಾನೆ.

**ಬ್ರಹ್ಮಚಾರೀ ಯತಿಶ್ಚೈವ ವಾನಪ್ರಸ್ಥೋ ವ್ರತಸ್ಥಿತಃ ।**
**ಗೃಹಸ್ಥಂ ಸಮುಪಾಸಂತೇ ಮಧ್ಯಾಹ್ನಾತಿಕ್ರಮೇ ಸದಾ ॥೫೭॥**

ವಿದ್ಯಾಭ್ಯಾಸಮಾಡುತ್ತಿರುವ ಬ್ರಹ್ಮಚಾರಿಯಾದ ವಿದ್ಯಾರ್ಥಿಯೂ, ಗೃಹಸ್ಥಧರ್ಮವನ್ನು ಆಚರಿಸಿದ ಮೇಲೆ ಸಂಸಾರಸಂಬಂಧವನ್ನು ಬಿಟ್ಟು ಜ್ಞಾನ ವೈರಾಗ್ಯಗಳನ್ನು ಸಾಧಿಸಲು ತಕ್ಕ ನಿಯಮಗಳನ್ನು ಆಚರಿಸುತ್ತಾ ವನವಾಸದಲ್ಲಿರುವ ವಾನಪ್ರಸ್ಥನೂ, ವೈರಾಗ್ಯದಿಂದಲೂ ಜ್ಞಾನದಿಂದಲೂ ಸನ್ಯಾಸಾಶ್ರಮದಲ್ಲಿರುವ ಯತಿಯೂ, ದಿನದ ಮಧ್ಯಾಹ್ನವು ಕಳೆದಮೇಲೆ ಎಂದರೆ, ಅವರವರಿಗೆ ಉಕ್ತವಾಗಿರುವ ಆಹ್ನಿಕಕರ್ಮಗಳನ್ನು ಆಚರಿಸಿದಮೇಲೆ ಆಹಾರಭಿಕ್ಷೆಯನ್ನು ಪಡೆಯಲು ಗೃಹಸ್ಥನನ್ನು ಆಶ್ರಯಿಸುತ್ತಾರೆ. ಹೀಗೆ ಎಲ್ಲ ಆಶ್ರಮಗಳಲ್ಲಿರುವವರಿಗೂ ಗೃಹಸ್ಥನೇ ಅವಲಂಬನೆಯಾಗಿರುತ್ತಾನೆ. ಆದುದರಿಂದ ಗೃಹಸ್ಥಾಶ್ರಮವು ಶ್ರೇಷ್ಠವೂ ಪುಣ್ಯಕರವೂ ಆಗಿರುತ್ತದೆ.

**ಶ್ರದ್ಧಯಾ ಚಾನ್ನದಾನೇನ ವಾಚಾ ಸೂನೃತಯಾ ತಯಾ ।**
**ಉಪಕುರ್ವಂತಿ ಧರ್ಮಸ್ಥಾಃ ಗೃಹಾಶ್ರಮನಿವಾಸಿನಃ ॥೫೮॥**

ಗೃಹಸ್ಥಾಶ್ರಮದಲ್ಲಿರುವ, ಧರ್ಮಾಚರಣೆಯಲ್ಲಿ ಆಸಕ್ತರಾದವರು ಇತರ ಆಶ್ರಮದಲ್ಲಿರುವವರಿಗೆ ಆದರದಿಂದ ಆಹಾರಗಳನ್ನು ಕೊಡುವುದರಿಂದಲೂ, ಸತ್ಯವೂ ಹಿತವೂ ಆದ ಮಾತಿನಿಂದಲೂ ಉಪಕಾರಮಾಡುತ್ತಿರುತ್ತಾರೆ. ಇದೊಂದು ಭಾಗ್ಯವು.

**ಗೃಹಾಶ್ರಮಾತ್ಪರೋ ಧರ್ಮೋ ನ ದೃಷ್ಟೋ ನ ಚ ವೈ ಶ್ರುತಃ ।**
**ವಸಿಷ್ಠಾದಿಭಿರಾಚಾರ್ಯೈಃ ಜ್ಞಾನಿಭಿಸ್ಸಮುಪಾಶ್ರಿತಃ ॥೫೯॥**

ಗೃಹಸ್ಥಾಶ್ರಮದಲ್ಲಿರುತ್ತಾ, ಆ ಧರ್ಮವನ್ನಾಚರಿಸುವುದಕ್ಕಿಂತಲೂ ಮಿಗಿಲಾದ ಮತ್ತೊಂದು ಧರ್ಮವನ್ನು ನೋಡಿಯೂ ಇಲ್ಲವು, ಕೇಳಿಯೂ ಇಲ್ಲವು. ಆದುದರಿಂದಲೇ ವಸಿಷ್ಠಮಹರ್ಷಿಯೇ ಮುಂತಾದವರು ಜ್ಞಾನಿಗಳಾಗಿದ್ದರೂ ಈ ಗೃಹಸ್ಥಾಶ್ರಮದಲ್ಲಿರುತ್ತಾ ಆ ಧರ್ಮಗಳನ್ನೂ ಆಚರಿಸುತ್ತಿರುತ್ತಾರೆ.

**ಕಿಮಸಾಧ್ಯಂ ಮಹಾಭಾಗ ವೇದೋಕ್ತಾನಿ ಚ ಕುರ್ವತಃ ।**
**ಸ್ವರ್ಗಂ ಮೋಕ್ಷಂ ಚ ಸಜ್ಜನ್ಮ ಯದ್ಯದ್ವಾಂಛತಿ ತದ್ಭವೇತ್ ॥೬೦॥**

ಓ ಪುಣ್ಯಶಾಲಿಯಾದ ಶುಕನೇ, ವೇದಗಳಲ್ಲಿ ಹೇಳಿರುವ ಕರ್ಮಗಳನ್ನೂ, ಧರ್ಮಗಳನ್ನೂ ಆಚರಿಸುತ್ತಿರುವ ಮಾನವನಿಗೆ ಅಸಾಧ್ಯವಾದುದು ಯಾವುದು? ಯಾವುದೂ ಇಲ್ಲವು. ಸ್ವರ್ಗಸುಖವನ್ನಾಗಲೀ, ಸಂಸಾರ ನಿರ್ಬಂಧದಿಂದ ಬಿಡುಗಡೆಯನ್ನಾಗಲಿ, ಮುಂದೆ ಉತ್ತಮವಾದ ಜನ್ಮವನ್ನಾಗಲಿ, ಗೃಹಸ್ಥಾಶ್ರಮದಲ್ಲಿರುವವನು ಯಾವುದನ್ನು ಅಪೇಕ್ಷಿಸುತ್ತಾನೋ ಅದೆಲ್ಲವೂ ಆ ಧರ್ಮಾಚರಣೆಯಿಂದಲೇ ಸಿದ್ಧಿಸುತ್ತದೆ.

**ಆಶ್ರಮಾದಾಶ್ರಮಂ ಗಚ್ಛೇದಿತಿ ಧರ್ಮವಿದೋ ವಿದುಃ ।**
**ತಸ್ಮಾದಗ್ನಿಂ ಸಮಾಧಾಯ ಕುರು ಕರ್ಮಾಣ್ಯತಂದ್ರಿತಃ ॥೬೧॥**

ಬ್ರಹ್ಮಚರ್ಯಾಶ್ರಮದಿಂದ ಗೃಹಸ್ಥಾಶ್ರಮವನ್ನೂ, ಅಲ್ಲಿಂದ ವಾನಪ್ರಸ್ಥಾಶ್ರಮವನ್ನೂ, ಅಲ್ಲಿಂದ ಸನ್ಯಾಸಾಶ್ರಮವನ್ನೂ ಕ್ರಮವಾಗಿ ಪಡೆಯಬೇಕೆಂದು ಧರ್ಮವನ್ನು ತಿಳಿದವರು ಅಭಿಪ್ರಾಯಪಡುತ್ತಾರೆ. ಆದುದರಿಂದ ಓ ಶುಕನೇ, ನೀನೂ ಗೃಹಸ್ಥನಾಗಿ ಗೃಹ್ಯಾಗ್ನಿಯನ್ನು ಕಾಪಾಡಿ, ಆಧಾನಸಂಸ್ಕಾರದಿಂದ ಶ್ರೌತಾಗ್ನಿಯನ್ನು ಸೇವಿಸುತ್ತಾ ಯಜ್ಞಯಾಗಾದಿಕರ್ಮಗಳನ್ನೂ ಧರ್ಮಗಳನ್ನೂ ಆಚರಿಸಿ ಕೃತಾರ್ಥನಾಗು.

**ದೇವಾನ್ ಪಿತೄನ್ ಮನುಷ್ಯಾಂಶ್ಚ ಸಂತರ್ಪ್ಯ ವಿಧಿವತ್ಸುತ ।**
**ಪುತ್ರಮುತ್ಪಾದ್ಯ ಧರ್ಮಜ್ಞಂ ಸಂಯೋಜ್ಯ ಚ ಗೃಹಾಶ್ರಮೇ ॥೬೨॥**

ಓ ಮಗನೇ, ದೇವತೆಗಳನ್ನೂ, ಪಿತೃಗಳನ್ನೂ, ಮಾನವರನ್ನೂ ಪ್ರತಿನಿತ್ಯವೂ ಪಂಚಮಹಾಯಜ್ಞಗಳಿಂದ ಸಂತೋಷಪಡಿಸುತ್ತಾ, ಧರ್ಮವನ್ನು ತಿಳಿದು ಆಚರಿಸುವಂತಹ ಮಗನನ್ನು ಪಡೆದು, ಅವನನ್ನು ಗೃಹಸ್ಥಾಶ್ರಮದಲ್ಲಿರುವಂತೆ ಏರ್ಪಡಿಸಿ,

**ತ್ಯಕ್ತ್ವಾತ್ವ ಗೃಹಂ ವನಂ ಗತ್ವಾ ಕರ್ತಾಸಿ ವ್ರತಮುತ್ತಮಂ ।**
**ವಾನಪ್ರಸ್ಥಾಶ್ರಮಂ ಕೃತ್ವಾ ಸನ್ಯಾಸಂ ಚ ತತಃ ಪರಂ ॥೬೩॥**

ಆಮೇಲೆ ನೀನು ಗೃಹಸ್ಥಾಶ್ರಮವನ್ನು ಬಿಟ್ಟು ಅರಣ್ಯವನ್ನು ಸೇರಿ ಶ್ರೇಷ್ಠವಾದ ವಾನಪ್ರಸ್ಥಾಶ್ರಮದ ನಿಯಮಗಳನ್ನು ಪಾಲಿಸುತ್ತಾ, ಆಮೇಲೆ ಕಡೆಗೆ ಉತ್ತಮವಾದ ಸನ್ಯಾಸಾಶ್ರಮವನ್ನೂ ಪಡೆಯುವೆ.

**ಇಂದ್ರಿಯಾಣಿ ಮಹಾಭಾಗ ಮಾದಕಾನಿ ಸುನಿಶ್ಚಿತಂ ।**
**ಅದಾರಸ್ಯ ದುರಂತಾನಿ ಪಂಚೈವ ಮನಸಾ ಸಹ ॥೬೪॥**

ಓ ಪುಣ್ಯಶಾಲಿಯಾದ ಶುಕನೇ, ಕಣ್ಣು, ಮೂಗು, ಕಿವಿ, ನಾಲಿಗೆ, ತ್ವಕ್ (ಚರ್ಮ) ಎಂಬ ಐದು ಇಂದ್ರಿಯಗಳೂ ಮನಸ್ಸಿನೊಡನೆ ಸೇರಿ ಹೆಂಡತಿಯನ್ನು ಮದುವೆಯಾಗದಿರುವ ಮನುಷ್ಯನಿಗೆ ಮದವನ್ನುಂಟುಮಾಡುತ್ತವೆ. ಮತ್ತು ಕೆಟ್ಟ ಪರಿಣಾಮದಲ್ಲಿ ಕೊನೆಗಾಣಿಸುತ್ತವೆ. ಇದು ಖಂಡಿತವಾದುದು.

**ತಸ್ಮಾದ್ದಾರಾನ್ಪ್ರಕುರ್ವೀತ ತಜ್ಜಯಾಯ ಮಹಾಮತೇ ।**
**ವಾರ್ಧಕೇ ತಪ ಆತಿಷ್ಠೇದಿತಿ ಶಾಸ್ತ್ರೋದಿತಂ ವಚಃ ॥೬೫॥**

ಮೇಲಾದ ಬುದ್ಧಿಯುಳ್ಳ ಓ ಶುಕನೇ, ಈ ಕಾರಣದಿಂದ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದಕ್ಕಾಗಿ ಹೆಂಡತಿಯನ್ನು ಮದುವೆಮಾಡಿಕೊಳ್ಳಬೇಕು. ಮುಪ್ಪುಬಂದಾಗ ತಪಸ್ಸನ್ನು ಆಚರಿಸಬೇಕು. ಧರ್ಮಶಾಸ್ತ್ರಗಳಲ್ಲಿ ಹೇಳಿರುವ ವಿಧಿವಾಕ್ಯವು ಹೀಗಿದೆ.

**ವಿಶ್ವಾಮಿತ್ರೋ ಮಹಾಭಾಗ ತಪಃ ಕೃತ್ವಾತಿದುಶ್ಚರಂ ।**
**ತ್ರೀಣಿ ವರ್ಷಸಹಸ್ರಾಣಿ ನಿರಾಹಾರೋ ಜಿತೇಂದ್ರಿಯಃ ॥೬೬॥**

ಅಲ್ಲದೆ ಹಿಂದಿನ ಕಾಲದಲ್ಲಿದ್ದ ಮಹಾನುಭಾವರ ಉದಾಹರಣೆಗಳೂ ಈ ಅಂಶವನ್ನು ತಿಳಿಸುತ್ತವೆ ಎಂದು ವ್ಯಾಸಮುನಿಯು ವಿವರಿಸುತ್ತಾನೆ. ತುಂಬ ತೇಜಸ್ವಿ

ಯಾದ ಓ ಶುಕನೇ, ಪೂರ್ವಕಾಲದಲ್ಲಿ ವಿಶ್ವಾಮಿತ್ರಮುನಿಯು ಮೂರುಸಾವಿರ ವರ್ಷಗಳವರಿಗೂ ಆಹಾರವಿಲ್ಲದೆ, ಇಂದ್ರಿಯಗಳನ್ನು ಜಯಿಸಿದವನಾಗಿ, ಆಚರಿಸುವುದಕ್ಕೆ ತುಂಬ ಕಷ್ಟವಾದ ತಪಸ್ಸನ್ನು ನೆರವೇರಿಸಿದನು.

**ಮೋಹಿತಶ್ಚ ಮಹಾತೇಜಾ ವನೇ ಮೇನಕಯಾ ಸ್ಥಿತಃ ।**
**ಶಕುಂತಲಾ ಸಮುತ್ಪನ್ನಾ ಪುತ್ರೀ ತದ್ವೀರ್ಯಜಾ ಶುಭಾ ॥೬೭॥**

ಆದರೂ, ತಪಸ್ಸಿನಿಂದ ಉಂಟಾದ, ಹೆಚ್ಚಾದ ತೇಜಸ್ಸುಳ್ಳವನಾಗಿದ್ದ ಆ ವಿಶ್ವಾಮಿತ್ರನು ಆ ತಪೋವನಕ್ಕೆ ಬಂದ ಮೇನಕೆ ಎಂಬ ಅಪ್ಸರಸ್ತ್ರೀಯಿಂದ ಮೋಹಗೊಂಡವನಾಗಿ ಅವಳೊಡನೆ ವಿಹರಿಸಿದನು. ಅವನ ವೀರ್ಯದಿಂದ ಜನ್ಮವನ್ನು ಪಡೆದ ಮಂಗಳಕರಳಾದ ಶಕುಂತಲೆ ಎಂಬ ಮಗಳು ಹುಟ್ಟಿದಳು.

**ದೃಷ್ಟ್ವಾ ದಾಸಸುತಾಂ ಕಾಳೀಂ ಪಿತಾ ಮಮ ಪರಾಶರಃ ।**
**ಕಾಮಬಾಣಹತಃ ಕನ್ಯಾಂ ತಾಂ ಜಗ್ರಾಹೋಡುಪೇ ಸ್ಥಿತಃ ॥೬೮॥**

ಹಾಗೆಯೇ, ನನ್ನ ತಂದೆಯಾದ ಪರಾಶರಮಹರ್ಷಿಯೂ ಒಂದು ದಿನ ನದಿಯನ್ನು ದಾಟಲು ತೆಪ್ಪದಲ್ಲಿರುತ್ತಾ ಅಲ್ಲಿದ್ದ ಅಂಬಿಗರವನ ಮಗಳಾದ ಕಾಳೀ ಎಂಬ ಕನ್ಯೆಯನ್ನು ನೋಡಿ ಮನ್ಮಥಬಾಣಗಳ ಏಟಿಗೆ ಗುರಿಯಾದವನಾಗಿ ಅವಳನ್ನು ಸ್ವೀಕರಿಸಿದನು.

**ಬ್ರಹ್ಮಾಪಿ ಸ್ವಸುತಾಂ ದೃಷ್ಟ್ವಾ ಪಂಚಬಾಣಪ್ರಪೀಡಿತಃ ।**
**ಧಾವಮಾನಶ್ಚ ರುದ್ರೇಣ ಮೂರ್ಛಿತಶ್ಚ ನಿವಾರಿತಃ ॥೬೯॥**

ಇದರಂತೆಯೇ ಬ್ರಹ್ಮನೂ ತನ್ನ ಮಗಳನ್ನು ನೋಡಿ ಮನ್ಮಥನ ಬಾಣಗಳ ಏಟಿನ ಬಾಧೆಗೆ ಗುರಿಯಾದವನಾಗಿ ಅವಳನ್ನು ಬೆನ್ನಟ್ಟಿ ಓಡಿಹೋಗುತ್ತಿರಲು, ರುದ್ರನು ಇದನ್ನು ಕಂಡು ಅವನನ್ನು ಮೂರ್ಛಿತನನ್ನಾಗಿ ಮಾಡಿ ಆ ಅವಿವೇಕ ಕಾರ್ಯದಿಂದ ತಪ್ಪಿಸಿದನು.

**ತಸ್ಮಾತ್ತ್ವಮಪಿ ಕಲ್ಯಾಣ ಕುರು ಮೇ ವಚನಂ ಹಿತಂ ।**
**ಕುಲಜಾಂ ಕನ್ಯಕಾಂ ವೃತ್ವಾ ವೇದಮಾರ್ಗಂ ಸಮಾಶ್ರಯ ॥೭೦॥**

ಆದುದರಿಂದ ಮಂಗಳಕರನಾದ ಓ ಶುಕನೇ, ನಾನು ಹೇಳುವ ಶ್ರೇಯಸ್ಕರವಾದ ಮಾತನ್ನು ಕೇಳು. ಒಳ್ಳೆಯ ವಂಶದಲ್ಲಿ ಹುಟ್ಟಿರುವ ಕನ್ಯೆಯೊಬ್ಬಳನ್ನು ವರಿಸಿ ಮದುವೆಯಾಗಿ, ವೇದಗಳಲ್ಲಿ ಹೇಳಿರುವ ಕರ್ಮಾಚರಣೆಯ ದಾರಿಯಲ್ಲಿಯೇ ನೀನೂ ಮುಂದುವರಿಯುವವನಾಗು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಚತುರ್ದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

## || ಪಂಚದಶೋಽಧ್ಯಾಯಃ ||

### ಹದಿನೈದನೆಯ ಅಧ್ಯಾಯವು

|| ಓಂ ||

|| ಶ್ರೀಶುಕ ಉವಾಚ ||

**ನಾಹಂ ಗೃಹಂ ಕರಿಷ್ಯಾಮಿ ದುಃಖದಂ ಸರ್ವದಾ ನೃಣಾಂ ।**
**ವಾಗುರಾಸದೃಶಂ ನಿತ್ಯಂ ಬಂಧನಂ ಸರ್ವದೇಹಿನಾಂ ॥೧॥**

ಹಿಂದಿನ ಅಧ್ಯಾಯದಲ್ಲಿ ವ್ಯಾಸಮಹರ್ಷಿಯು ತನ್ನ ಪುತ್ರನಾದ ಶುಕನನ್ನು ಕುರಿತು ಯೋಗ್ಯಳಾದ ಕನ್ಯೆಯನ್ನು ಮದುವೆಯಾಗಿ, ಗೃಹಸ್ಥಾಶ್ರಮವನ್ನು ಕೈಕೊಂಡು ವೇದಮಾರ್ಗಪ್ರವರ್ತಕನಾಗಿ ಸುಖದಿಂದಿರುವುದೆಂದು ಬೋಧಿಸಲಾಗಿ, ಅದಕ್ಕೆ ಪ್ರತ್ಯುತ್ತರವಾಗಿ ಶುಕಋಷಿಯು ಈ ರೀತಿ ಹೇಳಿದನು—ಎಲೈ ತಂದೆಯೇ, ನಾನು ಗೃಹಸ್ಥಾಶ್ರಮವನ್ನು ಸ್ವೀಕರಿಸಲು ಇಷ್ಟಪಡುವುದಿಲ್ಲ. ಏಕೆಂದರೆ, ಕುದುರೆ ಮುಂತಾದ ಪಶುವನ್ನು ಕಟ್ಟುವ ಲಗಾಮುಕಡಿವಾಣದ ಹಗ್ಗದಂತೆ ಇದು ಸರ್ವಕಾಲದಲ್ಲಿಯೂ ಮನುಷ್ಯರಿಗೆ ದುಃಖವನ್ನೇ ಉಂಟುಮಾಡುತ್ತದೆ.

**ಧನಚಿಂತಾತುರಾಣಾಂ ಹಿ ಕ್ವ ಸುಖಂ ತಾತ ದೃಶ್ಯತೇ ।**
**ಸ್ವಜನೈಃ ಖಲು ಪೀಡ್ಯಂತೇ ನಿರ್ಧನಾ ಲೋಲುಪಾ ಜನಾಃ ॥೨॥**

ಎಲೈ ತಂದೆಯೇ, ಧನಾರ್ಜನೆಯಲ್ಲಿಯೇ ಚಿಂತೆಯುಳ್ಳವರಿಗೆ ಸುಖವೆಲ್ಲಿಯದು ? ಧನಹೀನರಾದ ಮತ್ತು ವಿಷಯಸುಖಗಳಲ್ಲಿ ಆಶೆಯುಳ್ಳ ದರಿದ್ರರನ್ನು ಸ್ವಜನರೂ ಹಿಂಸಿಸುತ್ತಾರೆ.

ಇಂದ್ರೋಽಪಿ ನ ಸುಖೀ ತಾದೃಗ್ಯಾದೃಶೋ ಭಿಕ್ಷುನಿಸ್ಪೃಹಃ ।
ಕೋಽನ್ಯಃ ಸ್ಯಾದಿಹ ಸಂಸಾರೇ ತ್ರಿಲೋಕೀವಿಭವೇ ಸತಿ ॥೩॥

ತ್ರಿಲೋಕಾಧಿಪತ್ಯದಿಂದ ಕೂಡಿ ಮಹಾವೈಭವಸಂಪನ್ನನಾದಾಗ್ಯೂ, ಇಂದ್ರನು ನಿಸ್ಪೃಹನಾಗಿಯೂ ವೈರಾಗ್ಯಯುಕ್ತನಾಗಿಯೂ ಇರುವ ಸನ್ಯಾಸಿಯಂತೆ ಸುಖಿಯಾಗಿಲ್ಲವೆಂದಮೇಲೆ ಈ ಸಂಸಾರದಲ್ಲಿ ಯಾರುತಾನೇ ಸುಖಿಗಳಾಗಿರಬಲ್ಲರು ?

ತಪಂತಂ ತಾಪಸಂ ದೃಷ್ಟ್ವಾ ಮಘವಾ ದುಃಖಿತೋಽಭವತ್ ।
ವಿಘ್ನಾನ್ಬಹುವಿಧಾನಸ್ಯ ಕರೋತಿ ಚ ದಿವಸ್ಪತಿಃ ॥೪॥

ತಪಸ್ಸನ್ನು ಮಾಡುವ ಯೋಗಿಯನ್ನು ನೋಡಿ ಸೈರಿಸಲಾರದೆ, ತಪಸ್ಸಿನ ಮೇಲ್ಮೆಯಿಂದ ತನ್ನ ಪದವಿಯನ್ನೂ ಆಕ್ರಮಿಸಿಯಾನು ಎಂಬ ಅಸೂಯೆಯಿಂದ ಇಂದ್ರನು ದುಃಖವುಳ್ಳವನಾಗಿ ಅವನ ತಪಸ್ಸಿಗೆ ಅನೇಕವಿಧವಾದ ತೊಂದರೆಗಳನ್ನೂ ಅಡ್ಡಿಗಳನ್ನೂ ಉಂಟುಮಾಡುವನು.

ಬ್ರಹ್ಮಾಪಿ ನ ಸುಖೀ ವಿಷ್ಣುರ್ಲಕ್ಷ್ಮೀಂ ಪ್ರಾಪ್ಯ ಮನೋರಮಾಂ ।
ಖೇದಂ ಪ್ರಾಪ್ನೋತಿ ಸತತಂ ಸಂಗ್ರಾಮೈರಸುರೈಃ ಸಹ ॥೫॥

ಬ್ರಹ್ಮನಿಗೂ ಸುಖವಿಲ್ಲವು. ಮನೋಹರಳಾದ ಪ್ರಿಯಪತ್ನಿಯಾದ ಶ್ರೀಲಕ್ಷ್ಮಿಯನ್ನು ಪಡೆದಿದ್ದರೂ ವಿಷ್ಣುವೂ ಸಹ ಪದೇಪದೇ ದೈತ್ಯರೊಡನೆ ಯುದ್ಧಮಾಡುವ ತೊಂದರೆಯನ್ನು ಹೊಂದುತ್ತಲೇ ಇರುತ್ತಾನೆ.

ಕರೋತಿ ವಿಪುಲಾನ್ಯತ್ನಾಂಸ್ತಪಶ್ಚರತಿ ದುಶ್ಚರಂ ।
ರಮಾಪತಿರಪಿ ಶ್ರೀಮಾನ್ ಕಸ್ಯಾಸ್ತಿ ವಿಪುಲಂ ಸುಖಂ ॥೬॥

ಲಕ್ಷ್ಮೀಪತಿಯಾದಾಗ್ಯೂ, ಬಹು ಪ್ರಯತ್ನಪಟ್ಟು ದುಸ್ಸಾಧ್ಯವಾದ ತಪಸ್ಸನ್ನು ಮಾಡುತ್ತಾನೆ. ಆದ್ದರಿಂದ ಅಪರಿಮಿತವಾದ ವಿಶೇಷ ಸುಖವು ಯಾರಿಗೆ ತಾನೇ ದೊರೆತು ಇದೆ?

ಶಂಕರೋಽಪಿ ಸದಾ ದುಃಖೀ ಭವತ್ಯೇವ ಚ ವೇದ್ಮ್ಯಹಂ ।
ತಪಶ್ಚರ್ಯಾಂ ಪ್ರಕುರ್ವಾಣೋ ದೈತ್ಯಯುದ್ಧಕರಃ ಸದಾ ॥೭॥

ಈಶ್ವರನೂ ಸಹ ಯಾವಾಗಲೂ ಕಠಿನವಾದ ತಪಸ್ಸನ್ನು ಮಾಡುತ್ತಲೂ ಮತ್ತು ದೈತ್ಯರೊಡನೆ ಯುದ್ಧಮಾಡುತ್ತಲೂ ಇರುವುದರಿಂದ ಅವನೂ ಸಹ ಯಾವಾಗಲೂ ದುಃಖಿಯಾಗಿರುತ್ತಾನೆಂದೇ ನಾನು ತಿಳಿಯುತ್ತೇನೆ.

**ಕದಾಚಿನ್ನ ಸುಖೀ ಶೇತೇ ಧನವಾನಪಿ ಲೋಲುಪಃ ।**
**ನಿರ್ಧನಸ್ತು ಕಥಂ ತಾತ ಸುಖಂ ಪ್ರಾಪ್ನೋತಿ ಮಾನವಃ ॥೮॥**

ಓ ತಂದೆಯೇ, ಐಶ್ವರ್ಯದಲ್ಲಿ ಮಿತಿಮೀರಿದ ಆಶೆಯಿಂದ ಕೂಡಿರುವವನಾದ ಮನುಷ್ಯನು ಒಂದು ಕಾಲದಲ್ಲೂ ಸಹ ಸುಖವಾಗಿ ನಿದ್ರಿಸುವುದಿಲ್ಲವು. ಹಾಗೆಯೇ ಧನಹೀನನಾದ ದರಿದ್ರನು ಸುಖವನ್ನು ಹೇಗೆ ಹೊಂದುವನು ?

**ಜಾನನ್ನಪಿ ಮಹಾಭಾಗ ಪುತ್ರಂ ವಾ ವೀರ್ಯಸಂಭವಂ ।**
**ನಿಯೋಕ್ಷ್ಯಸಿ ಮಹಾಘೋರೇ ಸಂಸಾರೇ ದುಃಖದೇ ಸದಾ ॥೯॥**

ಎಲೈ ಮಹಾನುಭಾವನಾದ ತಂದೆಯೇ, ಈ ವಿಚಾರಗಳನ್ನೆಲ್ಲಾ ನೀನು ತಿಳಿದವನಾದಾಗ್ಯೂ ನಿನ್ನ ಸ್ವಂತ ಮಗನಾದ ನನ್ನನ್ನು, ಯಾವಾಗಲೂ ದುಃಖವನ್ನೇ ಉಂಟುಮಾಡುವ ಘೋರವಾದ ಸಂಸಾರದಲ್ಲಿ ಎಂದರೆ ಗೃಹಸ್ಥಾಶ್ರಮದಲ್ಲಿರುವಂತೆ ಕಟ್ಟುಮಾಡುತ್ತಿರುವೆಯಲ್ಲಾ !

**ಜನ್ಮದುಃಖಂ ಜರಾದುಃಖಂ ದುಃಖಂ ಚ ಮರಣೇ ತಥಾ ।**
**ಗರ್ಭವಾಸೇ ಪುನರ್ದುಃಖಂ ವಿಷ್ಠಾಮೂತ್ರಮಯೇ ತಥಾ ॥೧೦॥**

ಮನುಷ್ಯನಿಗೆ ಹುಟ್ಟುವಾಗಲೂ ದುಃಖವೇ; ವಯಸ್ಸಾಗಿ ವೃದ್ಧಾಪ್ಯಬಂದಾಗಲೂ ದುಃಖವೇ ; ಸಾಯುವಾಗಲಂತೂ ದುಃಖವೇ ಅನುಭವವಾಗುತ್ತದೆ. ಮರಣಾನಂತರದಲ್ಲಿ ಪುನರ್ಜನ್ಮಕಾಲದಲ್ಲಿ ಮೂತ್ರಪುರೀಷ ಮುಂತಾದ ಅಶುಚಿವಸ್ತುವಿನಿಂದ ಕೂಡಿದ ಸ್ತ್ರೀಗರ್ಭದಲ್ಲಿ ವಾಸಮಾಡುವಾಗಲೂ ಅತ್ಯಂತ ದುಃಖವುಂಟಾಗುತ್ತದೆ.

**ತಸ್ಮಾದತಿಶಯಂ ದುಃಖಂ ತೃಷ್ಣಾಲೋಭಸಮುದ್ಭವಂ ।**
**ಯಾಚ್ಞಾಯಾಂ ಪರಮಂ ದುಃಖಂ ಮರಣಾದಪಿ ಮಾನದ ॥೧೧॥**

ಆದುದರಿಂದ ಇವೆಲ್ಲಕ್ಕಿಂತಲೂ, ಆಶೆ ಲೋಭ ಇವುಗಳಿಂದ ಉಂಟಾಗುವ ದುಃಖವು ಅತ್ಯಧಿಕವಾದುದು. ಮನ್ನಣೆಯನ್ನು ಉಂಟುಮಾಡುವ ತಂದೆಯೇ,

ಮಾನವುಳ್ಳವನಿಗೆ ಪರರನ್ನು ಬೇಡುವುದರಲ್ಲಿ ಆಗುವ ದುಃಖವು ಮರಣಕ್ಕಿಂತಲೂ ಹೆಚ್ಚಿನದು.

**ಪ್ರತಿಗ್ರಹಧನಾ ವಿಪ್ರಾ ನ ಬುದ್ಧಿ ಬಲಜೀವನಾಃ ।**
**ಪರಾಶಾ ಪರಮಂ ದುಃಖಂ ಮರಣಂ ಚ ದಿನೇದಿನೇ ॥೧೨॥**

ತಮ್ಮ ಬುದ್ಧಿಬಲದಿಂದ ಜೀವಿಸಲಾರದ ವಿಪ್ರರು ದಾನಪ್ರತಿಗ್ರಹಾದಿಗಳನ್ನು ಸ್ವೀಕರಿಸುತ್ತಾರೆ. ಪರಸ್ವಾಪೇಕ್ಷೆಯಿಂದ ಪ್ರತಿದಿನದಲ್ಲೂ ಮರಣಸದೃಶವಾದ ಅಪಮಾನ ದುಃಖಕ್ಕೆ ಈಡಾಗುತ್ತಿರುತ್ತಾರೆ.

**ಪಠಿತ್ವಾ ಸಕಲಾನ್ ವೇದಾನ್ ಶಾಸ್ತ್ರಾಣಿ ಚ ಸಮಂತತಃ ।**
**ಗತ್ವಾ ಚ ಧನಿನಾಂ ಕಾರ್ಯಾ ಸ್ತುತಿಃ ಸರ್ವಾತ್ಮನಾ ಬುಧೈಃ ॥೧೩॥**

ಸಕಲ ವೇದಗಳನ್ನೂ ಅಧ್ಯಯನಮಾಡಿ, ಶಾಸ್ತ್ರಗಳನ್ನು ಸಮಗ್ರವಾಗಿ ಕಲಿತಿರುವ ವಿದ್ವಾಂಸರು ಸಹ ಧನವುಳ್ಳ ಮನುಷ್ಯನನ್ನು ಧನಾರ್ಜನೆಗೋಸ್ಕರ ನಾನಾಪ್ರಕಾರವಾಗಿ ಹೊಗಳುವರು.

**ಏಕೋದರಸ್ಯ ಕಾ ಚಿಂತಾ ಪತ್ರಮೂಲಫಲಾದಿಭಿಃ ।**
**ಯೇನ ಕೇನಾಪ್ಯುಪಾಯೇನ ಸಂತುಷ್ಟ್ಯಾ ಚ ಪ್ರಪೂರ್ಯತೇ ॥೧೪॥**

ಸಂಸಾರತಾಪತ್ರಯವಿಲ್ಲದೆ ತನ್ನ ಸ್ವಂತ ಉದರವನ್ನು ಮಾತ್ರ ಪೋಷಣೆಮಾಡಬೇಕಾದವನಿಗೆ ಯಾವ ಚಿಂತೆಯೂ ಇರುವುದಿಲ್ಲ. ಕಂದಮೂಲಫಲಾದಿಗಳಿಂದಲೂ, ಎಲೆಗಳಿಂದಲೂ ಅಥವಾ ಇನ್ನಾವ ವಿಧವಾದ ಉಪಾಯಗಳಿಂದಲಾದರೂ ಈ ಉದರವನ್ನು ತೃಪ್ತಿಪಡಿಸಬಹುದು.

**ಭಾರ್ಯಾ ಪುತ್ರಾಸ್ತಥಾ ಪೌತ್ರಾಃ ಕುಟುಂಬೇ ವಿಪುಲೇ ಸತಿ ।**
**ಪೂರಣಾರ್ಥಂ ಮಹದ್ದುಃಖಂ ಕ್ವ ಸುಖಂ ಪಿತರದ್ಭುತಂ ॥೧೫॥**

ಹೆಂಡತಿ, ಮಕ್ಕಳು, ಮೊಮ್ಮಕ್ಕಳು ಮುಂತಾದವರಿಂದ ಕೂಡಿದ ಸಂಸಾರವು ದೊಡ್ಡದಾಗಿದ್ದಲ್ಲಿ ಇವರ ಉದರಪೋಷಣೆಗಾಗಿ ಬಹುಕಷ್ಟವನ್ನೂ ದುಃಖವನ್ನೂ ಅನುಭವಿಸಬೇಕಾಗುವುದು. ಆದ್ದರಿಂದ ಎಲೈ ತಂದೆಯೇ, ಈ ಸಂಸಾರದಲ್ಲಿ ಸುಖವೆಲ್ಲಿಯದು ? ಸುಖವು ದೊರೆತೀತೆಂದು ನಂಬುವುದು ಆಶ್ಚರ್ಯಕರವಾದುದು !

**ಯೋಗಶಾಸ್ತ್ರಂ ವದ ಮಮ ಜ್ಞಾನಶಾಸ್ತ್ರಂ ಸುಖಾಕರಂ ।**
**ಕರ್ಮಕಾಂಡೇಽಖಿಲೇ ತಾತ ನ ರಮೇಽಹಂ ಕದಾಚನ ॥೧೬॥**

ಆದುದರಿಂದ ಎಲೈ ತಂದೆಯೇ, ನನಗೆ ರಾಜಯೋಗಶಾಸ್ತ್ರವನ್ನೂ ಸುಖದಾಯಕವಾದ ಜ್ಞಾನಶಾಸ್ತ್ರವನ್ನೂ ಉಪದೇಶಿಸು. ಎಲ್ಲ ಬಗೆಯ ಕರ್ಮಾನುಷ್ಠಾನದಲ್ಲಿ ನನ್ನ ಮನಸ್ಸು ಸುಖವನ್ನು ಯಾವಾಗಲೂ ಪಡೆಯುವುದಿಲ್ಲ.

**ವದ ಕರ್ಮಕ್ಷಯೋಪಾಯಂ ಪ್ರಾರಬ್ಧಂ ಸಂಚಿತಂ ತಥಾ ।**
**ವರ್ತಮಾನಂ ಯಥಾ ನಶ್ಯೇತ್ತ್ರಿವಿಧಂ ಕರ್ಮಮೂಲಜಂ ॥೧೭॥**

ಕರ್ಮಕ್ಕೆ ಮೂಲಭೂತವಾದ ಅವಿದ್ಯಾಜನ್ಯವಾದ ಪ್ರಾರಬ್ಧ, ಸಂಚಿತ, ವರ್ತಮಾನ ಎಂಬ ಮೂರು ವಿಧವಾದ ಕರ್ಮಗಳನ್ನು ನಾಶಮಾಡುವ ಉಪಾಯವನ್ನು ಹೇಳು. ಮೂರು ವಿಧವಾದ ಕರ್ಮವೆಂದರೆ, ಪ್ರಾರಬ್ಧ ಹಿಂದೆ ಮಾಡಿದ ಕರ್ಮದ ಫಲವನ್ನು ಅನುಭವಿಸಲು ಪ್ರಾರಂಭಮಾಡಿ ನಡೆಯುತ್ತಿರುವುದು. ; ಸಂಚಿತ—ಅನೇಕ ಜನ್ಮಗಳಲ್ಲಿಯೂ ಈ ಜನ್ಮದಲ್ಲಿಯೂ ಇದುವರಿಗೂ ಕರ್ಮವನ್ನು ಮಾಡಿ ಅದರ ಫಲವನ್ನು ಅನುಭವಿಸದೇ ಶೇಖರವಾಗಿ ಮುಂದೆ ಫಲಾನುಭೋಗಕ್ಕಾಗಿ ಕೂಡಿಹಾಕಿಕೊಂಡಿರುವುದು. ವರ್ತಮಾನವೆಂದರೆ—ಈಗ ಮಾಡುತ್ತಿರುವ ಕರ್ಮವು ಇದರ ಫಲವು ಮುಂದೆ ಅನುಭವಿಸಲ್ಪಡುವುದು ಈ ತ್ರಿವಿಧ ಕರ್ಮಕ್ಷಯವಿಲ್ಲದೆ ಮುಕ್ತಿಯಾಗುವುದಿಲ್ಲವೆಂದರ್ಥವು.

**ಜಲೂಕೇವ ಸದಾ ನಾರೀ ರುಧಿರಂ ಪಿಬತೀತಿ ವೈ ।**
**ಮೂರ್ಖಸ್ತು ನ ವಿಜಾನಾತಿ ಮೋಹಿತೋ ಭಾವಚೇಷ್ಟಿತೈಃ ॥೧೮॥**

ಸ್ತ್ರೀಯು ಜಿಗಣೆಯ ಹಾಗೆ, ತಗಲಿಕೊಂಡರೆ ಬಿಡದೆ ಇರುತ್ತಾ, ಸರ್ವಕಾಲದಲ್ಲೂ ಪುರುಷನ ರಕ್ತವನ್ನೇ ಅಂದರೆ ಸಾರವಾದ ಶಕ್ತಿಯನ್ನೇ ಹೀರುತ್ತಿರುತ್ತಾಳೆ. ಆದರೆ ಅವಿವೇಕಿಯೂ ದಡ್ಡನೂ ಆದ ಮನುಷ್ಯನು ಅವಳ ಹಾವ, ಭಾವ, ವಿಲಾಸ, ಚೇಷ್ಟೆ, ನಟನೆ ಇವುಗಳಿಂದ ಬೆರಗಾಗಿ ಮಂಕುಕವಿದು ತನಗೆ ಉಂಟಾಗುತ್ತಿರುವ ಮೋಸವನ್ನು ಅರಿಯದೆ ಇರುತ್ತಾನೆ.

**ಭೋಗೈರ್ವೀರ್ಯಂ ಧನಂ ಪೂರ್ಣಂ ಮನಃ ಕುಟಿಲಭಾಷಣೈಃ ।**
**ಕಾಂತಾ ಹರತಿ ಸರ್ವಸ್ವಂ ಕಃ ಸ್ತೇನಸ್ತಾದೃಶೋಽಪರಃ ॥೧೯॥**

ಸ್ತ್ರೀಯು ಕಾಮಭೋಗಾದಿಗಳಿಂದ ಪುರುಷನ ವೀರ್ಯವನ್ನು ಎಂದರೆ ಸತ್ತ್ವವನ್ನು ಅಪಹರಿಸುತ್ತಾಳೆ. ಕುಟಿಲೋಪಾಯವಾದ ಮಾತುಗಳಿಂದ ಅವನನ್ನು ಬೆರಗು ಮಾಡಿ ಅವನ ಎಲ್ಲ ಧನವನ್ನೂ ಮನಸ್ಸನ್ನೂ ಅಷ್ಟೇಕೆ, ಸರ್ವಸ್ವವನ್ನೂ ಅಪಹರಿಸುತ್ತಾಳೆ. ಆದುದರಿಂದ ಅಂತಹ ಸ್ತ್ರೀಗೆ ಸಮಾನವಾದ ಮತ್ತೊಬ್ಬ ಕಳ್ಳನುಂಟೇ?

**ನಿದ್ರಾಸುಖವಿನಾಶಾರ್ಥಂ ಮೂರ್ಖಸ್ತು ದಾರಸಂಗ್ರಹಂ ।**
**ಕರೋತಿ ವಂಚಿತೋ ಧಾತ್ರಾ ದುಃಖಾಯ ನ ಸುಖಾಯ ಚ ॥೨೦॥**

ಈ ಸಂಸಾರವು ಬ್ರಹ್ಮನಿಂದ ಸುಖಕ್ಕಲ್ಲ, ದುಃಖವನ್ನು ಅನುಭವಿಸುವುದಕ್ಕೆ ಮಾತ್ರ ಸೃಷ್ಟಿಸಲ್ಪಟ್ಟಿರುವುದೆಂದು ಅರಿಯದ ಮೂರ್ಖನು ವಂಚಿಸಲ್ಪಟ್ಟವನಾಗಿ ನಿದ್ರೆ ಮತ್ತು ಸುಖ ಇವುಗಳನ್ನು ಕಳೆದುಕೊಳ್ಳುವುದಕ್ಕಾಗಿ ಮಾತ್ರವೇ ಸ್ತ್ರೀಯನ್ನು ವಿವಾಹವಾಗುತ್ತಾನೆ.

॥ ಸೂತ ಉವಾಚ ॥

**ಏವಂವಿಧಾನಿ ವಾಕ್ಯಾನಿ ಶ್ರುತ್ವಾ ವ್ಯಾಸಃ ಶುಕಸ್ಯ ಚ ।**
**ಸಂಪ್ರಾಪ ಮಹತೀಂ ಚಿಂತಾಂ ಕಿಂ ಕರೋಮೀತ್ಯಸಂಶಯಂ ॥೨೧॥**

ಸೂತಮುನಿಯು ಹೇಳಿದನು—ಈರೀತಿಯಾಗಿ ಹೇಳುತ್ತಿರುವ ತನ್ನ ಮಗನಾದ ಶುಕನ ಇಂತಹ ಮಾತುಗಳನ್ನು ವ್ಯಾಸಮಹರ್ಷಿಯು ಕೇಳಿ ಏನುಮಾಡಬೇಕೆಂದು ತೋಚದೆ ನಿಶ್ಚಯವಾಗಿಯೂ ಮಹತ್ತರವಾದ ಚಿಂತೆಯುಳ್ಳವನಾದನು.

**ತಸ್ಯ ಸುಸ್ರುವುರಶ್ರೂಣಿ ಲೋಚನಾದ್ದುಃಖಜಾನಿ ಚ ।**
**ವೇಪಥುಶ್ಚ ಶರೀರೇಽಭೂದ್ಗ್ಲಾನಿಂ ಪ್ರಾಪ ಮನಸ್ತಥಾ ॥೨೨॥**

ಹೀಗೆ ಚಿಂತಾಕುಲನಾದ ವ್ಯಾಸಋಷಿಯ ಕಣ್ಣುಗಳಿಂದ ದುಃಖದಿಂದ ಉಂಟಾದ ಕಂಬನಿಗಳು ಉದುರಿದವು. ದೇಹದಲ್ಲಿ ಕಂಪನವುಂಟಾಯಿತು. ಹಾಗೆಯೇ ಮನಸ್ಸೂ ಬಳಲಿ ಸಂತಾಪಯುಕ್ತವಾಯಿತು.

**ಶೋಚಂತಂ ಪಿತರಂ ದೃಷ್ಟ್ವಾ ದೀನಂ ಶೋಕಪರಿಪ್ಲುತಂ ।**
**ಉವಾಚ ಪಿತರಂ ವ್ಯಾಸಂ ವಿಸ್ಮಯೋತ್ಫುಲ್ಲಲೋಚನಃ ॥೨೩॥**

ಹೀಗೆ ಶೋಕಾಕುಲನಾಗಿ ದುಃಖಿಸುತ್ತಿರುವ ತಂದೆಯಾದ ವ್ಯಾಸನ ದೀನವಾದ ಮುಖವನ್ನು ನೋಡಿ, ಆಶ್ಚರ್ಯದಿಂದ ಅರಳಿದ ಕಣ್ಣುಗಳುಳ್ಳವನಾಗಿ ಶುಕನು ಈರೀತಿ ಹೇಳಿದನು.

**ಅಹೋ ಮಾಯಾಬಲಂ ಚೋಗ್ರಂ ಯನ್ಮೋಹಯತಿ ಪಂಡಿತಂ ।**
**ವೇದಾಂತಸ್ಯ ಚ ಕರ್ತಾರಂ ಸರ್ವಜ್ಞಂ ವೇದಸಂಮಿತಂ ॥೨೪॥**

ಆಹಾ, ಈ ಭಯಂಕರವಾದ ಮಾಯೆಯ ಬಲವು ಎಷ್ಟು ಆಶ್ಚರ್ಯಕರವಾದುದು! ವೇದಾಂತ ಎಂದರೆ ತತ್ತ್ವವನ್ನು ತಿಳಿಯಿಸುವ ಮತ್ತು ಬ್ರಹ್ಮಸೂತ್ರಗಳ ಕರ್ತೃವೂ, ಸರ್ವಜ್ಞನೂ, ವೇದದಂತೆ ಸತ್ಯವಾಕ್ಯುಳ್ಳವನೂ, ಮಹಾಪಂಡಿತನೂ ಆದ ವ್ಯಾಸಋಷಿಯನ್ನು ಸಹ ಈ ಅಜ್ಞಾನವೆಂಬ ಮಾಯೆಯು ತನ್ನ ಶಕ್ತಿಯಿಂದ ಮೋಹಗೊಳಿಸುತ್ತದೆ.

**ನ ಜಾನೇ ಕಾ ಚ ಸಾ ಮಾಯಾ ಕಿಂಸ್ವಿತ್ಸಾತೀವ ದುಷ್ಕರಾ ।**
**ಯಾ ಮೋಹಯತಿ ವಿದ್ವಾಂಸಂ ವ್ಯಾಸಂ ಸತ್ಯವತೀಸುತಂ ॥೨೫॥**

ವಿದ್ವಾಂಸನೂ, ಸತ್ಯವತೀದೇವಿಯ ಮಗನೂ ಆದ ವ್ಯಾಸಋಷಿಯನ್ನು ಸಹ ಮೋಹಗೊಳಿಸುವ ಈ ಮಾಯೆಯು ಎಂತಹದು ? ಈ ಮಾಯಾಶಕ್ತಿಯ ಮಹತ್ತ್ವವನ್ನು ನಾನು ತಿಳಿಯುವುದು ತುಂಬ ಅಸಾಧ್ಯವು ಎಂದು ತೋರುತ್ತದೆ!

**ಪುರಾಣಾನಾಂ ಚ ವಕ್ತಾ ಚ ನಿರ್ಮಾತಾ ಭಾರತಸ್ಯ ಚ ।**
**ವಿಭಾಗಕರ್ತಾ ವೇದಾನಾಂ ಸೋಽಪಿ ಮೋಹಮುಪಾಗತಃ ॥೨೬॥**

ಈ ವ್ಯಾಸಋಷಿಯು ಹದಿನೆಂಟು ಮಹಾಪುರಾಣಗಳನ್ನು ರಚಿಸಿದವನು. ಭಾರತವೆಂಬ ಇತಿಹಾಸವನ್ನು ರಚಿಸಿದವನು. ವೇದಗಳನ್ನು ಋಗ್ಯಜುಸ್ಸಾಮಾಥರ್ವಣಗಳೆಂದು ವಿಭಾಗಮಾಡಿದವನು. ಇಂಥ ಮಹಾತ್ಮನು ಸಹ ಈ ಮಾಯಾಪ್ರಭಾವದಿಂದ ಮೋಹಗೊಂಡಿದ್ದಾನೆ!

**ತಾಂ ಯಾಮಿ ಶರಣಂ ದೇವೀಂ ಯಾ ಮೋಹಯತ್ತಿ ವೈ ಜಗತ್ ।**
**ಬ್ರಹ್ಮವಿಷ್ಣುಹರಾದೀಂಶ್ಚ ಕಥಾಽನ್ಯೇಷಾಂ ಚ ಕೀದೃಶೀ ॥೨೭॥**

ಇತರ ಕ್ಷುಲ್ಲಕಜನರ ಮಾತಂತಿರಲಿ, ಬ್ರಹ್ಮವಿಷ್ಣುಮಹೇಶ್ವರಾದಿಗಳನ್ನೂ ಈ ಸಮಸ್ತ ಪ್ರಪಂಚವನ್ನೂ ಸಹ ಮೋಹಗೊಳಿಸುವ ಆ ದೇವಿಯನ್ನೇ ನಾನು ಮರೆ ಹೋಗುತ್ತೇನೆ. ಅವಳು ಈ ವ್ಯಾಸನಿಗೆ ಮನಶ್ಶಾಂತಿಯನ್ನು ಕರುಣಿಸಲಿ.

**ಕೋಽಪ್ಯಸ್ತಿ ತ್ರಿಷು ಲೋಕೇಷು ಯೋ ನ ಮುಹ್ಯತಿ ಮಾಯಯಾ ।**
**ಯನ್ಮೋಽಹಂ ಗಮಿತಾಃ ಪೂರ್ವೇ ಬ್ರಹ್ಮವಿಷ್ಣುಹರಾದಯಃ ॥೨೮॥**

ಮೊದಲಿನವರಾದ ಬ್ರಹ್ಮ ವಿಷ್ಣು ಈಶ್ವರಮುಂತಾದವರೂ ಸಹ ಯಾರಿಂದ ಮೋಹವಶರಾದರೋ ಆ ಮಾಯೆಯ ಮೋಹಕ್ಕೆ ವಶನಾಗದ ಮನುಷ್ಯನು ಈ ಮೂರು ಲೋಕಗಳಲ್ಲಿ ಯಾವನಾದರೂ ಇರುವನೇ ?

**ಅಹೋ ಬಲಮಹೋ ವೀರ್ಯಂ ದೇವ್ಯಾ ಖಲು ವಿನಿರ್ಮಿತಂ ।**
**ಮಾಯಯೈವ ವಶಂ ನೀತಃ ಸರ್ವಜ್ಞ ಈಶ್ವರಃ ಪ್ರಭುಃ ॥೨೯॥**

ಈ ದೇವಿಯು ನಿರ್ಮಿಸುವ ಮಾಯೆಯ ಬಲ ಮತ್ತು ಸಾಮರ್ಥ್ಯಗಳು ಆಶ್ಚರ್ಯಕರಗಳಾಗಿವೆಯಲ್ಲವೇ ? ಈ ದೇವಿಯ ಮಾಯೆಯ ಪ್ರಭಾವದಿಂದ ಸರ್ವಜ್ಞನೂ ಸ್ವಾಮಿಯೂ ಸಮರ್ಥನೂ ಆದ ವಿಷ್ಣುವೂ ಮೋಹವಶನಾದನು.

**ವಿಷ್ಣ್ವಂಶಸಂಭವೋ ವ್ಯಾಸ ಇತಿ ಪೌರಾಣಿಕಾ ಜಗುಃ ।**
**ಸೋಽಪಿ ಮೋಹಾರ್ಣವೇ ಮಗ್ನೋ ಭಗ್ನಪೋತೋ ವಣಿಗ್ಯಥಾ ॥೩೦॥**

ಈ ವ್ಯಾಸಋಷಿಯು ಆ ವಿಷ್ಣುವಿನ ಅಂಶದಿಂದ ಹುಟ್ಟಿದವನೆಂದು ಪುರಾಣಜ್ಞರು ಹೇಳುತ್ತಾರೆ. ಅಂಥ ವ್ಯಾಸನೂ, ಸಮುದ್ರಮಧ್ಯದಲ್ಲಿ ಯಾನಮಾಡುತ್ತಿರುವ ವರ್ತಕನು ನಾವೆಯು ಮುರಿಯಲು ಸಮುದ್ರದಲ್ಲಿ ಮುಳುಗಿಹೋಗುವಂತೆ, ಮೋಹವೆಂಬ ಸಮುದ್ರದಲ್ಲಿ ಮುಳುಗಿರುತ್ತಾನೆ ಎಂದರೆ, ಮೋಹಪರವಶನಾಗಿರುತ್ತಾನೆ.

**ಅಶ್ರುಪಾತಂ ಕರೋತ್ಯದ್ಯ ವಿವಶಃ ಪ್ರಾಕೃತೋ ಯಥಾ ।**
**ಅಹೋ ಮಾಯಾಬಲಂ ಚೈತದ್ದುಸ್ತ್ಯಜಂ ಪಂಡಿತೈರಪಿ ॥೩೧॥**

ಅಂಥ ವ್ಯಾಸನು ಈಗ ಮೋಹವಶನಾದ ಸಾಧಾರಣನೂ ಪಾಮರನೂ ಆದ ಮನುಷ್ಯನಂತೆ ಕಣ್ಣೀರನ್ನು ಸುರಿಸುತ್ತಿರುವನು ! ಆಹಾ, ಇದೆಲ್ಲವೂ ಆ ಮಾಯಾಶಕ್ತಿಯ ಪ್ರಾಬಲ್ಯದ ಫಲವು. ಇದನ್ನು ಪಂಡಿತರು ಸಹ ಬಿಡಲಾರರು !

**ಕೋಽಯಂ ಕೋಽಹಂ ಕಥಂ ಚೇಹ ಕೀದೃಶೋಽಯಂ ಭ್ರಮಃಕಿಲ ।**
**ಪಂಚಭೂತಾತ್ಮಕೇ ದೇಹೇ ಪಿತಾಪುತ್ರೇತಿ ವಾಸನಾ ॥೩೨॥**

ಈ ವ್ಯಾಸನು ಯಾರು, ನಾನು ಯಾರು, ಈ ವಿಧವಾದ ಸಂಬಂಧದ ಭ್ರಮೆಯು ಹೇಗೆ ಉಂಟಾಯಿತು ? ಎಂದರೆ, ಪಂಚಭೂತಾತ್ಮಕವಾದ ದೇಹದಲ್ಲಿ, ಇವನು ನನ್ನ ತಂದೆಯು, ನಾನು ಇವನ ಮಗನು ಎಂಬ ಮುಂತಾದ ಭ್ರಮೆಯು ಅನಾದಿಕಾಲ ದಿಂದಲೂ ಬಂದಿರುವ ವಾಸನಾವಿಶೇಷದಿಂದ ಉಂಟಾಗುವುದು, ಆಶ್ಚರ್ಯಕರವಾಗಿದೆ.

**ಬಲಿಷ್ಠಾ ಖಲು ಮಾಯೇಯಂ ಮಾಯಿನಾಮಪಿ ಮೋಹಿನೀ ।**
**ಯಯಾಽಭಿಭೂತಃ ಕೃಷ್ಣೋಽಪಿ ಕರೋತಿ ರೋದನಂ ದ್ವಿಜಃ ॥೩೩॥**

ಈ ಮಾಯೆಯು ಮಹಾಪ್ರಭಾವಶಾಲಿಯಾದುದು. ಆದುದರಿಂದಲೇ ಇದು ಯಾರು ಮಾಯೆಯನ್ನು ಉಪಯೋಗಿಸುತ್ತಾರೋ, ಯಾರು ಮಾಯೆಯಮೇಲೆ ಅಧಿಕಾರವುಳ್ಳವರಾಗಿ ಕೆಲವು ಸಂದರ್ಭಗಳಲ್ಲಿ ವ್ಯವಹರಿಸುತ್ತಿರುತ್ತಾರೋ, ಅಂಥವ ರನ್ನೂ ಆವರಿಸಿ ಮಂಕುತನ ಕವಿದಿರುವಂತೆ ಮಾಡಬಲ್ಲುದು. ಈ ಕಾರಣದಿಂದ ಕೃಷ್ಣನೆಂದು ಹೆಸರುಳ್ಳ, ವೇದಗಳನ್ನು ವಿಂಗಡಿಸಿದ, ಮಹಾಪುರಾಣಗಳನ್ನೂ ರಚಿಸಿ ಬೋಧಿಸಿದ, ಕೃಷ್ಣದ್ವೈಪಾಯನ, ವ್ಯಾಸ ಎಂದು ಮುಂತಾದ ಹೆಸರುಗಳಿಂದ ಪ್ರಸಿದ್ಧ ನಾದ ವ್ಯಾಸಮುನಿಯೂ ಈ ಮಾಯಾಪ್ರಾಬಲ್ಯದಿಂದ ಮೋಹಕ್ಕೆ ಒಳಗಾಗಿ ಅನೇಕ ಸಂದರ್ಭಗಳಲ್ಲಿ ದುಃಖಿಸುತ್ತಾನೆ !

॥ ಸೂತ ಉವಾಚ ॥

**ತಾಂ ನತ್ವಾ ಮನಸಾ ದೇವೀಂ ಸರ್ವಕಾರಣಕಾರಣಂ ।**
**ಜನನೀಂ ಸರ್ವದೇವಾನಾಂ ಬ್ರಹ್ಮಾದೀನಾಂ ತಥೇಶ್ವರೀಂ ॥೩೪॥**

ಸೂತನು ಹೇಳಿದನು—ಎಲ್ಲ ಬಗೆಯ ಕಾರ್ಯಕಾರಣಗಳಿಗೂ ಮೂಲ ಕಾರಣಳಾಗಿರುವ ಮತ್ತು ಬ್ರಹ್ಮಾದಿಸಮಸ್ತದೇವತೆಗಳಿಗೂ ತಾಯಿಯೂ, ಬ್ರಹ್ಮ ವಿಷ್ಣು ಈಶ್ವರ ಮುಂತಾದವರಿಗೂ ಒಡೆಯಳೂ ಆದ ಆ ದೇವಿಯನ್ನು ಮನಸ್ಸಿನಲ್ಲೇ ನಮಸ್ಕಾರಮಾಡಿ

**ಪಿತರಂ ಪ್ರಾಹ ದೀನಂ ತಂ ಶೋಕಾರ್ಣವಪರಿಪ್ಲುತಂ ।**
**ಅರಣೀಸಂಭವೋ ವ್ಯಾಸಂ ಹೇತುಮದ್ವಚನಂ ಶುಭಂ ॥೩೫॥**

ಅರಣಿಯಲ್ಲಿ ಹುಟ್ಟಿದ ಶುಕನು ದುಃಖಸಮುದ್ರದಲ್ಲಿ ಮುಳುಗಿ ದೀನಮನಸ್ಕನಾದ ತನ್ನ ತಂದೆಯಾದ ವ್ಯಾಸನನ್ನು ಕುರಿತು ಯುಕ್ತಿ ವಿವರಣೆಗಳಿಂದ ಕೂಡಿ ಮಂಗಳಕರವಾಗಿಯೂ ಇರುವ ಈ ಮಾತುಗಳನ್ನು ಹೇಳಿದನು.

**ಪಾರಾಶರ್ಯ ಮಹಾಭಾಗ ಸರ್ವೇಷಾಂ ಬೋಧದಃ ಸ್ವಯಂ ।**
**ಕಿಂ ಶೋಕಂ ಕುರುಷೇ ಸ್ವಾಮಿನ್ ಯಥಾಽಜ್ಞಃ ಪ್ರಾಕೃತೋ ನರಃ ॥೩೬॥**

ಓ ತಂದೆಯೇ, ನೀನು ಪರಾಶರಮಹರ್ಷಿಯ ಪುತ್ರನಾಗಿರುವೆ. ಉತ್ತಮವಾದ ಯೋಗ್ಯತೆಯುಳ್ಳವನಾಗಿರುವೆ. ಸ್ವತಃ ಸಮಸ್ತರಿಗೂ ಒಳ್ಳೆಯ ತಿಳಿವಳಿಕೆಯನ್ನು ಉಪದೇಶಮಾಡಬಲ್ಲವನಾಗಿರುವೆ. ಹೀಗಿರುವ ಗಟ್ಟಿಗನಾದ ನೀನೂ ಸಹ ಅಜ್ಞಾನಿಯಾದ ಸಾಧಾರಣಮನುಷ್ಯನಂತೆ ಏಕೆ ದುಃಖಿಸುವೆ ?

**ಅದ್ಯಾಹಂ ತವ ಪುತ್ರೋಽಸ್ಮಿ ನ ಜಾನೇ ಪೂರ್ವಜನ್ಮನಿ ।**
**ಕೋಽಹಂ ಕಸ್ತ್ವಂ ಮಹಾಭಾಗ ವಿಭ್ರಮೋಽಯಂ ಮಹಾತ್ಮನಿ ॥೩೭॥**

ಈಗ ಎಂದರೆ ಈ ಜನ್ಮದಲ್ಲಿ ನಾನು ನಿನ್ನ ಮಗನಾಗಿದ್ದೇನೆ. ಹಿಂದಿನ ಜನ್ಮದಲ್ಲಿ ನಾನು ಯಾರಾಗಿದ್ದೆ ? ಎಂಬುದನ್ನು ನಾನು ತಿಳಿಯೆನು. ಹೆಚ್ಚಾದ ತಿಳಿವಳಿಕೆಯಿಂದ ಮಹಾಮಹಿಮನೇ ಆಗಿರುವೆ. ಆದುದರಿಂದ ತಂದೆ ಮಗ ಎಂದು ಮುಂತಾದ ಸಂಬಂಧದ ಈ ಭ್ರಾಂತಿಯು ಮಹಾತ್ಮನಾದ ನಿನ್ನಲ್ಲಿ ಹೇಗೆ ಸಂಭವಿಸುವುದು ?

**ಕುರು ಧೈರ್ಯಂ ಪ್ರಬುಧ್ಯಸ್ವ ಮಾ ವಿಷಾದೇ ಮನಃಕೃಥಾಃ ।**
**ಮೋಹಜಾಲಮಿಮಂ ಮತ್ವಾ ಮುಂಚ ಶೋಕಂ ಮಹಾಮತೇ ॥೩೮॥**

ಆದುದರಿಂದ ವಿವೇಕದ ಧೈರ್ಯವನ್ನವಲಂಬಿಸು. ತಿಳಿವಳಿಕೆಯನ್ನು ತಂದುಕೊಂಡು ಇರು. ದುಃಖದಲ್ಲಿ ಮನಸ್ಸನ್ನು ಇರಗೊಡಬೇಡ. ನೀನು ಮಹಾಬುದ್ಧಿಶಾಲಿಯಾದುದರಿಂದ, ಈ ಪಿತಾಪುತ್ರಭ್ರಾಂತಿಯು, ಮೋಹಮಾತ್ರವೆಂದೂ, ವಾಸ್ತವವಲ್ಲವೆಂದೂ, ಅಜ್ಞಾನದಿಂದ ಉಂಟಾದುದೆಂದೂ ತಿಳಿದು ದುಃಖವನ್ನು ಬಿಡು.

**ಕ್ಷುಧಾನಿವೃತ್ತಿರ್ಭಕ್ಷ್ಯೇಣ ನ ಪುತ್ರದರ್ಶನೇನ ಚ ।**
**ಪಿಪಾಸಾ ಜಲಪಾನೇನ ಯಾತಿ ನೈವಾತ್ಮಜೇಕ್ಷಣಾತ್ ॥೩೯॥**

ಭಕ್ಷ್ಯಾದಿಗಳನ್ನು ತಿನ್ನುವುದರಿಂದ ಹಸಿವೆಯು ನಿವಾರಣೆಯಾಗುವುದೇ ಹೊರತು ಮಗನನ್ನು ನೋಡುವುದರಿಂದ ಅಲ್ಲವು. ಹಾಗೆಯೇ ಬಾಯಾರಿಕೆಯಾದರೆ

ಜಲವನ್ನು ಪಾನಮಾಡುವುದರಿಂದ ದಾಹವು ಶಮನವಾಗುವುದು. ತನ್ನ ಪುತ್ರನ ಮುಖದರ್ಶನಮಾತ್ರದಿಂದ ಬಾಯಾರಿಕೆಯು ಎಂದಿಗೂ ಶಮನವಾಗಲಾರದು.

**ಘ್ರಾಣಂ ಸುಖಂ ಸುಗಂಧೇನ ಕರ್ಣಜಂ ಶ್ರವಣೇನ ಚ ।**
**ಸ್ತ್ರೀಸುಖಂ ತು ಸ್ತ್ರಿಯಾ ನೂನಂ ಪುತ್ರೋಽಹಂ ಕಿಂ ಕರೋಮಿ ತೇ ॥೪೦॥**

ಹಾಗೆಯೇ ಘ್ರಾಣೇಂದ್ರಿಯದ ಸುಖವು (ಮೂಗು) ಸುಗಂಧವನ್ನು ಆಘ್ರಾಣಿಸುವುದರಿಂದಲೂ, ಕರ್ಣೇಂದ್ರಿಯದ ಸುಖವು (ಕಿವಿಯು) ಶ್ರಾವ್ಯವಾದ ಶಬ್ದವನ್ನು ಕೇಳುವುದರಿಂದಲೂ, ಸ್ತ್ರೀಯಿಂದ ಉಂಟಾಗುವ ಸುಖವು ಸ್ತ್ರೀಯನ್ನು ಹೊಂದುವುದರಿಂದಲೂ ಉಂಟಾಗುವುದಲ್ಲದೆ ಅನ್ಯಥಾ ಅಲ್ಲವು. ನಾನು ನಿನ್ನ ಪುತ್ರನು. ಆದರೂ ನಾನು ನಿನಗೇನನ್ನು ಮಾಡಬಲ್ಲೆನು ?

**ಅಜೀಗರ್ತೇನ ಪುತ್ರೋಽಪಿ ಹರಿಶ್ಚಂದ್ರಾಯ ಭೂಭುಜೇ ।**
**ಪಶುಕಾಮಾಯ ಯಜ್ಞಾರ್ಥಂ ದತ್ತೋ ಮೌಲ್ಯೇನ ಸರ್ವಥಾ ॥೪೧॥**

ಹಿಂದೆ ಅಜೀಗರ್ತನೆಂಬ ಬ್ರಾಹ್ಮಣನು ಹಣವನ್ನು ತೆಗೆದುಕೊಂಡು ಹರಿಶ್ಚಂದ್ರನೆಂಬ ರಾಜನಿಗೆ ಯಜ್ಞದಲ್ಲಿ ತನ್ನ ಮಗನನ್ನು ಪಶುವನ್ನಾಗಿ ಉಪಯೋಗಿಸಲು ವಿಕ್ರಯಿಸಿದನು.

**ಸುಖಾನಾಂ ಸಾಧನಂ ದ್ರವ್ಯಂ ಧನಾತ್ಸುಖಸಮುಚ್ಚಯಃ ।**
**ಧನಮರ್ಜಯ ಲೋಭಶ್ಚೇತ್ಪುತ್ರೋಽಹಂ ಕಿಂಕರೋಮ್ಯಹಂ ॥೪೨॥**

ಸುಖಗಳಿಗೆ ಧನವೇ ಸಾಧನವಾಗಿರುವುದು. ಹಣದಿಂದಲೇ ಅಶಿಶಯವಾದ ಸುಖವನ್ನೂ ಪಡೆಯಬಹುದು. ಆದುದರಿಂದ ಈ ರೀತಿಯಾಗಿ ಸುಖದಲ್ಲಿ ನಿನಗೆ ಆಶೆಯಿದ್ದಲ್ಲಿ ಹಣವನ್ನು ಸಂಪಾದಿಸು. ಪುತ್ರನಾದ ನಾನು ನಿನಗೆ ಏನು ಉಪಕಾರವನ್ನು ತಾನೇ ಮಾಡಬಲ್ಲೆನು ?

**ಮಾಂ ಪ್ರಬೋಧಯ ಬುದ್ಧ್ಯಾ ತ್ವಂ ದೈವಜ್ಞೋಽಸಿ ಮಹಾಮತೇ ।**
**ಯಥಾ ಮುಚ್ಯೇಯಮತ್ಯಂತಂ ಗರ್ಭವಾಸಭಯಾನ್ಮುನೇ ॥೪೩॥**

ಆದುದರಿಂದ ಮಹಾಸೂಕ್ಷ್ಮಬುದ್ಧಿಯುಳ್ಳ ನೀನು ನಿನ್ನ ಬುದ್ಧಿಶಕ್ತಿಯಿಂದ ನನಗೆ ಜ್ಞಾನೋದಯವನ್ನುಂಟುಮಾಡು ಮತ್ತು ಪುನರ್ಜನ್ಮಸಂಬಂಧದಲ್ಲಿ ಒದಗುವ

ತಾಯಿಯ ಗರ್ಭವಾಸದಿಂದ ಉಂಟಾಗುವ ದುಃಖದ ಭಯವನ್ನು ತಪ್ಪಿಸಿಕೊಳ್ಳಲು ಜ್ಞಾನೋಪದೇಶದಿಂದ ಅವಕಾಶವನ್ನುಂಟುಮಾಡು. ಎಂದರೆ, ಪುನಃ ನನಗೆ ಜನ್ಮವು ಬಾರದಂತೆ ಈ ಜನ್ಮದಲ್ಲಿಯೇ ಮೋಕ್ಷವು ದೊರೆಯುವಂತೆ ತಿಳಿವಳಿಕೆಯನ್ನು ಅನುಗ್ರಹಿಸು.

**ದುರ್ಲಭಂ ಮಾನುಷಂ ಜನ್ಮ ಕರ್ಮಭೂಮಾವಿಹಾನಘ ।**
**ತತ್ರಾಪಿ ಬ್ರಾಹ್ಮಣತ್ವಂ ವೈ ದುರ್ಲಭಂ ಚೋತ್ತಮೇ ಕುಲೇ ॥೪೪॥**

ಎಲೈ ಮಹಾನುಭಾವನೇ, ಈ ಕರ್ಮಭೂಮಿಯಲ್ಲಿ ಮನುಷ್ಯಜನ್ಮ ದೊರೆಯುವುದೇ ದುರ್ಲಭವು. ಅದರಲ್ಲೂ ಉತ್ತಮ ಕುಲದಲ್ಲಿ ಬ್ರಾಹ್ಮಣನಾಗಿ ಜನಿಸುವುದು ಅತ್ಯಂತ ದುರ್ಲಭವು.

**ಬದ್ಧೋಽಹಮಿತಿ ಮೇ ಬುದ್ಧಿರ್ನಾಪಸರ್ಪತಿ ಚಿತ್ತತಃ ।**
**ಸಂಸಾರವಾಸನಾಜಾಲೇ ನಿವಿಷ್ಟಾ ವೃದ್ಧಗಾಮಿನೀ ॥೪೫॥**

ನಾನು ಈ ಸಂಸಾರದ ಬಲೆಯಲ್ಲಿ ಸಿಕ್ಕಿಕೊಂಡಿದ್ದೇನೆ ಎಂಬ ಬುದ್ಧಿಯು ಬೆಳೆಯುತ್ತಾ ದೃಢವಾಗುತ್ತಿದೆ. ಅಲ್ಲದೆ ಹಿಂದಿನ ಅನಾದಿಕಾಲದಿಂದಲೂ ಬಂದಿರುವ ವಾಸನೆಗಳ ಬಲೆಯಲ್ಲಿ ಹೊಕ್ಕಿರುವ ನನ್ನ ಮನಸ್ಸಿನಿಂದ ಹೋಗದೆ ಇದೆ.

**ಇತ್ಯುಕ್ತಸ್ತು ತದಾ ವ್ಯಾಸಃ ಪುತ್ರೇಣಾಮಿತಬುದ್ಧಿನಾ ।**
**ಪ್ರತ್ಯುವಾಚ ಶುಕಂ ಶಾಂತಂ ಚತುರ್ಥಾಶ್ರಮಮಾನಸಂ ॥೪೬॥**

ಸೂತನು ಹೇಳಿದನು—ಈ ರೀತಿ ಮಹಾಬುದ್ಧಿಶಾಲಿಯಾದ ತನ್ನ ಮಗನು ಹೇಳಿದ ಮಾತನ್ನು ಕೇಳಿ ವ್ಯಾಸಋಷಿಯು ಶಾಂತಸ್ವಭಾವವುಳ್ಳವನಾಗಿಯೂ ನಾಲ್ಕನೆಯ ಆಶ್ರಮ ಅಂದರೆ ಸನ್ಯಾಸಾಶ್ರಮದ ಸ್ವೀಕಾರದಲ್ಲಿ ಮನಸ್ಸುಳ್ಳವನಾಗಿಯೂ ಇರುವ ಶುಕನನ್ನು ಕುರಿತು ಈ ರೀತಿ ಪ್ರತ್ಯುತ್ತರವನ್ನು ಹೇಳಿದನು.

॥ ವ್ಯಾಸ ಉವಾಚ ॥

**ಪಠ ಪುತ್ರ ಮಹಾಭಾಗ ಮಯಾ ಭಾಗವತಂ ಕೃತಂ ।**
**ಶುಭಂ ನ ಚಾತಿವಿಸ್ತೀರ್ಣಂ ಪುರಾಣಂ ಬ್ರಹ್ಮಸಂಮಿತಂ ॥೪೭॥**

ವ್ಯಾಸಋಷಿಯು ಹೇಳಿದನು— ಎಲೈ ಮಹಿಮಾಶಾಲಿಯಾದ ಪುತ್ರನೇ, ನನ್ನಿಂದಲೇ ರಚಿತವಾಗಿಯೂ, ಮಂಗಳಕರವಾಗಿಯೂ, ಅತಿದೊಡ್ಡದಾಗಿಲ್ಲದೆಯೂ ವೇದದಂತೆ ಪ್ರಾಮಾಣಿಕವಾದುದಾಗಿಯೂ ಆದುದರಿಂದ ವಿಶ್ವಾಸಕ್ಕೆ ಅರ್ಹವಾದುದಾಗಿಯೂ ಇರುವ ಈ ಭಾಗವತವೆಂಬ ಮಹಾಪುರಾಣವನ್ನು ಓದಿನೋಡು.

**ಸ್ಕಂಧಾ ದ್ವಾದಶ ತತ್ರೈವ ಪಂಚಲಕ್ಷಣಸಂಯುತಂ ।**
**ಸರ್ವೇಷಾಂ ಚ ಪುರಾಣಾನಾಂ ಭೂಷಣಂ ಮಮ ಸಂಮತಂ ॥೪೮॥**

ಅದರಲ್ಲಿ ಹನ್ನೆರಡು ಸ್ಕಂಧಗಳೆಂಬ ವಿಭಾಗಗಳಿವೆ. ಮತ್ತು ಪುರಾಣಗಳಿಗೆ ಇರಬೇಕಾದ ಸರ್ಗ, ಪ್ರತಿಸರ್ಗ, ವಂಶ, ಮನ್ವಂತರ, ವಂಶಾನುಚರಿತಗಳೆಂಬ ಐದು ಲಕ್ಷಣಗಳಿಂದ ಕೂಡಿದೆ. ಇದರಲ್ಲಿರುವ ಗುಣಗಳಿಂದ ಇದು ಇತರ ಎಲ್ಲ ಪುರಾಣಗಳಿಗೂ ಭೂಷಣಪ್ರಾಯವಾಗಿದೆ ಮತ್ತು ನನಗೆ ಈ ಪುರಾಣವು ಅತ್ಯಂತಪ್ರಿಯವಾಗಿದೆ.

**ಸದಸದ್ಜ್ಞಾನವಿಜ್ಞಾನಂ ಶ್ರುತಮಾತ್ರೇಣ ಜಾಯತೇ ।**
**ಯೇನ ಭಾಗವತೇನೇಹ ತತ್ಪಠ ತ್ವಂ ಮಹಾಮತೇ ॥೪೯॥**

ಈ ಭಾಗವತವನ್ನು ಶ್ರವಣಮಾಡುವುದರಿಂದಲೇ, ಬ್ರಹ್ಮ, ಜಗತ್ತು, ಇವುಗಳ ಜ್ಞಾನವೂ ಎಂದರೆ ಪರೋಕ್ಷವಾದ ಶಾಬ್ದಜ್ಞಾನವೂ, ಅಪರೋಕ್ಷವಾದ ಸಾಕ್ಷಾತ್ಕಾರದ ಅನುಭವಜ್ಞಾನವೂ ಉಂಟಾಗುತ್ತದೆ. ಆದುದರಿಂದ ಮಹಾಬುದ್ಧಿಶಾಲಿಯಾದ ನೀನು ಇದನ್ನು ಪಠನಮಾಡು.

**ವಟಪತ್ರಶಯಾನಾಯ ವಿಷ್ಣವೇ ಬಾಲರೂಪಿಣೇ ।**
**ಕೇನಾಸ್ಮಿ ಬಾಲಭಾವೇನ ನಿರ್ಮಿತೋಽಹಂ ಚಿದಾತ್ಮನಾ ॥೫೦॥**

**ಕಿಮರ್ಥಂ ಕೇನ ದ್ರವ್ಯೇಣ ಕಥಂ ಜಾನಾಮಿ ಚಾಖಿಲಂ ।**
**ಇತ್ಯೇವಂ ಚಿಂತ್ಯಮಾನಾಯ ಮುಕುಂದಾಯ ಮಹಾತ್ಮನೇ ॥೫೧॥**

ಈ ಬಾಲಭಾವವು ನನಗೆ ಯಾರಿಂದ ಉಂಟಾಯಿತು ? ಯಾರು ನನ್ನನ್ನು ಸೃಷ್ಟಿಸಿದರು ? ಏತಕ್ಕೋಸ್ಕರ ಯಾವ ದ್ರವ್ಯಗಳಿಂದ ನಾನು ನಿರ್ಮಿತನಾದೆನು ? ಈ ಎಲ್ಲವನ್ನೂ ನಾನು ತಿಳಿಯುವ ಬಗೆ ಹೇಗೆ ? ಎಂದು ಯೋಚಿಸುತ್ತಿರುವ ಸಣ್ಣ

ಶಿಶುವಿನ ರೂಪದಲ್ಲಿ ಆಲದ ಎಲೆಯಲ್ಲಿ ಮಲಗಿರುವ ಮಹಾತ್ಮನಾದ ಜ್ಞಾನಚೈತನ್ಯ ರೂಪನಾದ ವಿಷ್ಣುವನ್ನು ಕುರಿತು,

**ಶ್ಲೋಕಾರ್ಧೇನ ತಯಾ ಪ್ರೋಕ್ತಂ ಭಗವತ್ಯಾಖಿಲಾರ್ಥದಂ ।**
**" ಸರ್ವಂ ಖಲ್ವಿದಮೇವಾಹಂ ನಾನ್ಯದಸ್ತಿ ಸನಾತನಂ " ॥೫೨॥**

" ಈ ಸಮಸ್ತ ವಿಶ್ವವೂ ನಾನೇ. ನನ್ನ ಹೊರತು ಸನಾತನವೂ ನಾಶರಹಿತವೂ ಆದ ಬೇರೊಂದು ವಸ್ತುವು ಯಾವುದೊಂದೂ ಇಲ್ಲವು." ಎಂಬ ಸಮಸ್ತ ಅರ್ಥವನ್ನೂ ಒಳಗೊಂಡಿರುವ ಅರ್ಧಶ್ಲೋಕವು ವಿಷ್ಣುವಿನ ಸಂಶಯಗಳಿಗೆ ಪ್ರತ್ಯುತ್ತರವಾಗಿ ಭಗವತಿಯಾದ ಮಹಾದೇವಿಯಿಂದ ಹೇಳಲ್ಪಟ್ಟಿತು.

**ತದ್ವಚೋ ವಿಷ್ಣುನಾ ಪೂರ್ವಂ ಸಂವಿಜ್ಞಾತಂ ಮನಸ್ಯಪಿ ।**
**ಕೇನೋಕ್ತಾ ವಾಗಿಯಂ ಸತ್ಯಾ ಚಿಂತಯಾಮಾಸ ಚೇತಸಾ ॥೫೩॥**

ಪೂರ್ವದಲ್ಲಿ ವಿಷ್ಣುವು ಈ ವಾಕ್ಯವನ್ನು ಮನಸ್ಸಿನಲ್ಲಿ ಧಾರಣೆಮಾಡಿ, ಅದರ ಅರ್ಥವನ್ನು ಚನ್ನಾಗಿ ತಿಳಿದು, ಈ ಸತ್ಯವಾದ ವಾಕ್ಯವನ್ನು ಯಾರು ಆಡಿದರೆಂದು ಮನಸ್ಸಿನಲ್ಲಿಯೇ ಆಲೋಚನೆಮಾಡಿದನು.

**ಕಥಂ ವೇದ್ಮಿ ಪ್ರವಕ್ತಾರಂ ಸ್ತ್ರೀಪುಂಸೌ ವಾ ನಪುಂಸಕಂ ।**
**ಇತಿ ಚಿಂತಾಪ್ರಪನ್ನೇನ ಧೃತಂ ಭಾಗವತಂ ಹೃದಿ ॥೫೪॥**

ಈ ಸತ್ಯವಾಕ್ಯವನ್ನು ಹೇಳಿದವರು ಸ್ತ್ರೀಯೇ, ಪುರುಷನೇ ಅಥವಾ ನಪುಂಸಕನೇ ಎಂದು ತಿಳಿಯುವ ಬಗೆ ಹೇಗೆಂದು ಯೋಚಿಸುತ್ತಾ ಭಗವತೀವಾಕ್ಯವನ್ನು ತನ್ನ ಹೃದಯದಲ್ಲಿ ಸ್ಥಿರವಾಗಿ ನಿಲ್ಲಿಸಿದನು, ಎಂದರೆ ಅದನ್ನೇ ಯಾವಾಗಲೂ ಮನನಮಾಡುತ್ತಿದ್ದನು.

**ಪುನಃಪುನಃ ಕೃತೋಚ್ಚಾರಸ್ತಸ್ಮಿನ್ನೇವಾಸ್ತಚೇತಸಾ ।**
**ವಟಪತ್ರೇ ಶಯಾನಸ್ಸನ್ ಅಭೂಚ್ಚಿಂತಾಸಮನ್ವಿತಃ ॥೫೫॥**

ಆಲದ ಎಲೆಯಲ್ಲಿ ಮಲಗಿ ಹಿಂದೆ ಹೇಳಿದ ಭಗವತೀವಾಕ್ಯದ ಧ್ಯಾನದಲ್ಲಿಯೇ ನೆಲಸಿದ ಮನಸ್ಸುಳ್ಳವನಾಗಿ, ಅದನ್ನೇ ಪುನಃಪುನಃ ಉಚ್ಚಾರಣೆಮಾಡುತ್ತಾ ಚಿಂತಾಪರವಶನಾಗಿದ್ದನು.

**ತದಾ ಶಾಂತಾ ಭಗವತೀ ಪ್ರಾದುರಾಸ ಚತುರ್ಭುಜಾ ।**
**ಶಂಖಚಕ್ರಗದಾಪದ್ಮವರಾಯುಧಧರಾ ಶಿವಾ ॥೫೬॥**

ಆ ಕಾಲದಲ್ಲಿ ಸೌಮ್ಯಸ್ವಭಾವವುಳ್ಳವಳಾಗಿಯೂ, ನಾಲ್ಕು ಭುಜಗಳಿಂದ ಕೂಡಿದವಳಾಗಿಯೂ, ಶಂಖ, ಚಕ್ರ, ಗದಾ, ಪದ್ಮ ಮುಂತಾದ ಉತ್ತಮವಾದ ಆಯುಧಗಳನ್ನು ಧರಿಸಿಕೊಂಡು ಮಂಗಳಕರವಾದ ರೂಪವುಳ್ಳವಳಾಗಿ, ಮಹಾ ಮಹಿಮಶಾಲಿನಿಯಾದ ದೇವಿಯು ವಿಷ್ಣುವಿನ ಮುಂದೆ ಕಾಣಿಸಿಕೊಂಡಳು.

**ದಿವ್ಯಾಂಬರಧರಾ ದೇವೀ ದಿವ್ಯಭೂಷಣಭೂಷಿತಾ ।**
**ಸಂಯುತಾ ಸದೃಶೀಭಿಶ್ಚ ಸಖೀಭಿಃ ಸ್ವವಿಭೂತಿಭಿಃ ॥೫೭॥**

ಆ ದೇವಿಯು ಉತ್ತಮವಾದ ವಸ್ತ್ರಗಳನ್ನು ಧರಿಸಿ, ಶ್ರೇಷ್ಠವಾದ ಒಡವೆಗ ಳಿಂದ ಅಲಂಕರಿಸಿಕೊಂಡಿರುವವಳಾಗಿ, ತನ್ನಂತೆಯೇ ಇರುವ ತನ್ನ ಮಹಿಮೆಯ ಅಂಶಗಳಾದ ಸಖೀಜನರಿಂದ ಕೂಡಿದವಳಾಗಿ ವಿಷ್ಣುವಿನ ಮುಂದೆ ಮೈದೋರಿದಳು.

**ಪ್ರಾದುರ್ಬಭೂವ ತಸ್ಯಾಗ್ರೇ ವಿಷ್ಣೋರಮಿತತೇಜಸಃ ।**
**ಮಂದಹಾಸ್ಯಂ ಪ್ರಯುಂಜಾನಾ ಮಹಾಲಕ್ಷ್ಮೀಃ ಶುಭಾನನಾ ॥೫೮॥**

ಮಂಗಳಕರವಾದ ಮುಖದಿಂದ ಶೋಭಿಸುವ ಈ ಮಹಾಲಕ್ಷ್ಮಿಯು ಮುಗುಳು ನಗೆಯನ್ನು ಬೀರುತ್ತಾ, ಮಹಾತೇಜಸ್ಸುಳ್ಳ ಆ ವಿಷ್ಣುವಿನ ಮುಂಭಾಗದಲ್ಲಿ ಆವಿರ್ಭ ವಿಸಿದಳು.

|| ಸೂತ ಉವಾಚ ||

**ತಾಂ ತಥಾ ಸಂಸ್ಥಿತಾಂ ದೃಷ್ಟ್ವಾ ಹೃದಯೇ ಕಮಲೇಕ್ಷಣಃ ।**
**ವಿಸ್ಮಿತಃ ಸಲಿಲೇ ತಸ್ಮಿನ್ನಿರಾಧಾರಾಂ ಮನೋರಮಾಂ ॥೫೯॥**

ಸೂತನು ಹೇಳಿದನು--ಆ ನೀರಿನಲ್ಲಿ ಯಾವ ಆಧಾರವೂ ಇಲ್ಲದೆ ನಿಂತು ಮನೋ ಹರವಾದ ರೂಪಿನಿಂದ ಒಪ್ಪುತ್ತಿರುವ ಆ ದೇವಿಯನ್ನು ಕಮಲದಂತಿರುವ ಕಣ್ಣುಳ್ಳ ವಿಷ್ಣುವು ನೋಡಿ ಮನಸ್ಸಿನಲ್ಲಿ ಅತ್ಯಂತ ಆಶ್ಚರ್ಯವನ್ನು ಹೊಂದಿದನು.

**ರತಿರ್ಭೂತಿಸ್ತಥಾ ಬುದ್ಧಿರ್ಮತಿಃ ಕೀರ್ತಿಃ ಸ್ಮೃತಿರ್ಧೃತಿಃ ।**
**ಶ್ರದ್ಧಾ ಮೇಧಾ ಸ್ವಧಾ ಸ್ವಾಹಾ ಕ್ಷುಧಾ ನಿದ್ರಾ ದಯಾ ಗತಿಃ ॥೬೦॥**

**ತುಷ್ಟಿಃ ಪುಷ್ಟಿಃ ಕ್ಷಮಾ ಲಜ್ಜಾ ಜೃಂಭಾ ತಂದ್ರಾ ಚ ಶಕ್ತಯಃ ।**
**ಸಂಸ್ಥಿತಾಃ ಸರ್ವತಃ ಪಾರ್ಶ್ವೇ ಮಹಾದೇವ್ಯಾಃ ಪೃಥಕ್ಪೃಥಕ್ ॥೬೧॥**

ಸಖೀರೂಪದಲ್ಲಿರುವ ಶಕ್ತಿಗಳು ಯಾರೆಂದರೆ—ಪ್ರೀತಿಭಾವ, ಮಹಿಮೆ, ನಿಶ್ಚಯಿಸುವ ಶಕ್ತಿ, ಧ್ಯಾನಿಸುವ ಶಕ್ತಿ, ಒಳ್ಳೆಯ ಹೆಸರಿನ ಪ್ರಸಿದ್ಧಿ, ಜ್ಞಾಪಿಸುವ ಶಕ್ತಿ, ಧರಿಸುವ ಶಕ್ತಿ, ಕೆಲಸದಲ್ಲಿ ಆದರ, ಪ್ರತಿಭಾಶಕ್ತಿ, ಪಿತೃಗಳಿಗೆ ಹವಿಸ್ಸನ್ನು ತಲಪಿಸಬಲ್ಲ ಶಕ್ತಿ, ಹಸಿವು, ನಿದ್ರೆ, ಇತರರ ದುಃಖವನ್ನು ನಿವಾರಿಸುವ ಮನೋವೃತ್ತಿ, ಇವಕ್ಕೆ ತಕ್ಕ ಚಲನೆ, ಸಂತೋಷ, ಬೆಳವಳಿಗೆ, ಸಹನೆ, ನಾಚಿಕೆ, ಆಕಳಿಕೆ, ಆಲಸ್ಯ ಈ ಶಕ್ತಿಗಳು ಮಹಾದೇವಿಯ ಸುತ್ತಲೂ ಪಾರ್ಶ್ವಗಳಲ್ಲಿ ಪ್ರತ್ಯೇಕಪ್ರತ್ಯೇಕವಾಗಿ ರೂಪವೆತ್ತು ನಿಂತು ಓಲೈಸುತ್ತಿದ್ದರು.

**ವರಾಯುಧಧರಾಃ ಸರ್ವಾ ನಾನಾಭೂಷಣಭೂಷಿತಾಃ ।**
**ಮಂದಾರಮಾಲಾಕಲಿತಾ ಮುಕ್ತಾಹಾರವಿರಾಜಿತಾಃ ॥೬೨॥**

ಈ ದೇವಿಯ ಪರಿವಾರದವರೆಲ್ಲರೂ ತಮ್ಮ ಹಸ್ತಗಳಲ್ಲಿ ದಿವ್ಯಾಯುಧಗಳನ್ನು ಧರಿಸಿದವರಾಗಿ, ಸರ್ವಾಲಂಕಾರಭೂಷಿತೆಯರಾಗಿ, ಮಂದಾರಪುಷ್ಪಮಾಲೆಗಳಿಂದಲೂ ಮುತ್ತಿನ ಸರಗಳಿಂದಲೂ ಅಲಂಕೃತರಾಗಿ ವಿರಾಜಿಸುತ್ತಿದ್ದರು.

**ತಾಂ ದೃಷ್ಟ್ವಾ ತಾಶ್ಚ ಸಂವೀಕ್ಷ್ಯ ತಸ್ಮಿನ್ನೇಕಾರ್ಣವೇ ಜಲೇ ।**
**ವಿಸ್ಮಯಾವಿಷ್ಟಹೃದಯಃ ಸಂಬಭೂವ ಜನಾರ್ದನಃ ॥೬೩॥**

ಆ ಒಂದೇ ಜಲಮಯವಾದ ಸಮುದ್ರಜಲದ ಮಧ್ಯದಲ್ಲಿ ಆ ಆದಿಲಕ್ಷ್ಮೀದೇವಿಯನ್ನೂ, ಆ ದೇವಿಯ ಪರಿವಾರದೇವತೆಗಳನ್ನೂ ನೋಡಿ ದುಷ್ಟರನ್ನು ನಿಗ್ರಹಿಸುವ ಆ ವಿಷ್ಣುವು ಮನಸ್ಸಿನಲ್ಲಿ ಬಹಳವಾಗಿ ಆಶ್ಚರ್ಯಪಟ್ಟನು.

**ಚಿಂತಯಾಮಾಸ ಸರ್ವಾತ್ಮಾ ದೃಷ್ಟ್ವಾ ಮಾಯೇತಿ ವಿಸ್ಮಿತಃ ।**
**ಕುತೋ ಭೂತಾಃ ಸ್ತ್ರಿಯಃ ಸರ್ವಾಃ ಕುತೋಽಹಂ ವಟತಲ್ಪಗಃ ॥೬೪॥**

ಎಲ್ಲರಿಗೂ ಆತ್ಮರೂಪನಾಗಿ ಅಂತರ್ಯಾಮಿಯಾಗಿರುವ ವಿಷ್ಣುವು ಆ ದೇವಿಯನ್ನು ನೋಡಿ, "ಮಾಯೆಯನ್ನು ನೋಡಿದೆನು." ಎಂದು ಆಶ್ಚರ್ಯಪಟ್ಟು ಈ ಸ್ತ್ರೀಯರೆಲ್ಲರೂ ಯಾರು ? ಎಲ್ಲಿಂದ ಬಂದರು ? ಈ ಆಲದ ಎಲೆಯ ಹಾಸಿಗೆಯನ್ನು ನಾನು ಹೇಗೆ ಪಡೆದಿದ್ದೇನೆ ? ಎಂದು ಯೋಚಿಸಿದನು.

**ಅಸ್ಮಿನ್ನೇಕಾರ್ಣವೇ ಘೋರೇ ನ್ಯಗ್ರೋಧಃ ಕಥಮುತ್ಥಿತಃ ।**
**ಕೇನಾಹಂ ಸ್ಥಾಪಿತೋऽಸ್ಯತ್ರ ಶಿಶುಂ ಕೃತ್ವಾ ಶುಭಾಕೃತಿಃ ॥೬೫॥**

ಈ ಮಹಾಭಯಂಕರವಾದ ಸಮುದ್ರದಲ್ಲಿ ಆಲದ ಮರವು ಹೇಗೆ ಹುಟ್ಟಿತು ? ಈ ಮನೋಹರವಾದ ಶಿಶುವಿನ ಆಕೃತಿಯನ್ನು ಉಂಟುಮಾಡಿ ಇಲ್ಲಿ ನನ್ನನ್ನು ಯಾರು ಇಟ್ಟರು ?

**ಮಮೇಯಂ ಜನನೀ ನೋವಾ ಮಾಯಾ ವಾ ಕಾಪಿ ದುರ್ಘಟಾ ।**
**ದರ್ಶನಂ ಕೇನ ಚಿತ್ತ್ವದ್ಯ ದತ್ತಂ ವಾ ಕೇನ ಹೇತುನಾ ॥೬೬॥**

ಈ ದೇವಿಯೇ ನನಗೆ ತಾಯಿಯಾಗಿರಬಹುದೇ ? ಅಥವಾ ಯಾವುದಾದರೂ ಮಹಾಶಕ್ತಿಯುಳ್ಳ ಮಾಯೆಯೇ ? ಈ ದೇವಿಯ ದರ್ಶನವನ್ನು ಯಾರು ನನಗೆ ಅನುಗ್ರಹಿಸಿದರು ? ಅಥವಾ ಯಾವ ಕಾರಣಕ್ಕೋಸ್ಕರ ಇದು ಸಂಭವಿಸಿತು ?

**ಕಿಂ ಮಯಾ ಚಾತ್ರ ವಕ್ತವ್ಯಂ ಗಂತವ್ಯಂ ವಾ ನ ವಾ ಕ್ವಚಿತ್ ।**
**ಮೌನಮಾಸ್ಥಾಯ ತಿಷ್ಠೇಯಂ ಬಾಲಭಾವಾದತಂದ್ರಿತಃ ॥೬೭॥**

ನಾನು ಈಗ ಏನನ್ನು ಹೇಳಬೇಕು ? ಎಲ್ಲಿಗೆ ಹೋಗಬೇಕು ? ಅಥವಾ ಎಲ್ಲಿಗೂ ಹೋಗದೆ ಇರಬೇಕೇ ? ಎನ್ನುವುದು ನನಗೆ ತಿಳಿಯದೇ ಇರುವುದರಿಂದ ಶಿಶುವಿನಂತೆ ಏನೊಂದನ್ನೂ ಹೇಳದೆ ಮೌನವನ್ನೇ ಅವಲಂಬಿಸಿ ಇರುವೆನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಪಂಚದಶೋऽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹದಿನೈದನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ಷೋಡಶೋಽಧ್ಯಾಯಃ ||

### ಹದಿನಾರನೆಯ ಅಧ್ಯಾಯವು

|| ವ್ಯಾಸ ಉವಾಚ ||

**ದೃಷ್ಟ್ವಾ ತಂ ವಿಸ್ಮಿತಂ ದೇವಂ ಶಯಾನಂ ವಟಪತ್ರಕೇ ।**
**ಉವಾಚ ಸಸ್ಮಿತಂ ವಾಕ್ಯಂ ವಿಷ್ಣೋ ಕಿಂ ವಿಸ್ಮಿತೋ ಹ್ಯಸಿ ॥೧॥**

ವ್ಯಾಸನು ಹೇಳಿದನು—ಹೀಗೆ ಆಲದೆಲೆಯಲ್ಲಿ ಮಲಗಿ ಆಶ್ಚರ್ಯಪಡುತ್ತಿರುವ ವಿಷ್ಣುವನ್ನು ನೋಡಿ, ದೇವಿಯು ಮಂದಹಾಸಪೂರ್ವಕವಾಗಿ ವಿಷ್ಣುವನ್ನು ಕುರಿತು ಎಲೈ ವಿಷ್ಣುವೇ, ಏಕೆ ಆಶ್ಚರ್ಯಯುಕ್ತನಾಗಿದ್ದೀಯೆ ? ಎಂದು ಕೇಳಿದಳು.

**ಮಹಾಶಕ್ತ್ಯಾಃ ಪ್ರಭಾವೇನ ತ್ವಂ ಮಾಂ ವಿಸ್ಮೃತವಾನ್ ಪುರಾ ।**
**ಪ್ರಭವೇ ಪ್ರಲಯೇ ಜಾತೇ ಭೂತ್ವಾ ಭೂತ್ವಾ ಪುನಃಪುನಃ ॥೨॥**

ಪುನಃಪುನಃ ನಡೆಯುತ್ತಿರುವ ಪ್ರಳಯದಲ್ಲಿಯೂ, ಸೃಷ್ಟಿಯಲ್ಲಿಯೂ, ನೀನು ಹುಟ್ಟುತ್ತಿದ್ದರೂ ಮಹಾಶಕ್ತಿಯ ಮಾಯಾಪ್ರಭಾವದಿಂದ ನೀನು ಈ ನನ್ನನ್ನು ಮರೆತಿರುತ್ತೀಯೆ.

**ನಿರ್ಗುಣಾ ಸಾ ಪರಾ ಶಕ್ತಿಃ ಸಗುಣಸ್ತ್ವಂ ತಥಾಪ್ಯಹಂ ।**
**ಸಾತ್ತ್ವಿಕೀ ಕಿಲ ಯಾ ಶಕ್ತಿಸ್ತಾಂ ಶಕ್ತಿಂ ವಿದ್ಧಿ ಮಾಮಿಕಾಂ ॥೩॥**

ಆ ಪರಾಶಕ್ತಿಯು ಗುಣರಹಿತವಾದದ್ದು ಎಂದರೆ ಗುಣಗಳು ಸಾಮ್ಯಾವಸ್ಥೆಯಲ್ಲಿರಲು ಪರಿಣಾಮಗಳಿಲ್ಲದ ಸ್ಥಿತಿಯಲ್ಲಿರುವಂಥಾದ್ದು. ನೀನು ಸಗುಣನು ಎಂದರೆ ಸತ್ತ್ವರಜಸ್ತಮೋಗುಣಗಳು ಹೆಚ್ಚುಕಡಿಮೆಯಾಗಿರಲು ಉಂಟಾಗುವ ಪರಿಣಾಮ

ರೂಪದಿಂದ ಯುಕ್ತನು. ಈ ನಾನೂ ಅದರಂತೆಯೇ ಗುಣವುಳ್ಳವಳು. ಸತ್ತ್ವಗುಣದಿಂದ ಕೂಡಿರುವ ಸಾತ್ತ್ವಕೀ ಎಂಬ ಯಾವ ಶಕ್ತಿಯುಂಟೋ ಅದು ನನ್ನ ಶಕ್ತಿಯೆಂದೇ ತಿಳಿ.

ತ್ವನ್ನಾಭಿಕಮಲಾದ್ಬ್ರಹ್ಮಾ ಭವಿಷ್ಯತಿ ಪ್ರಜಾಪತಿಃ ।
ಸ ಕರ್ತಾ ಸರ್ವಲೋಕಸ್ಯ ರಜೋಗುಣಸಮನ್ವಿತಃ ॥೪॥

ನಿನ್ನ ನಾಭಿಕಮಲದಿಂದ ಪ್ರಜೆಗಳನ್ನು ಸೃಷ್ಟಿಸುವವನು ಎಂಬ ಹೆಸರಿನಿಂದ ಪ್ರಸಿದ್ಧನಾದ ಚತುರ್ಮುಖಬ್ರಹ್ಮನು ಹುಟ್ಟುವನು. ಅವನು ಮುಂದಾಗಿರುವ ರಜೋಗುಣದಿಂದ ಕೂಡಿದವನಾಗಿ ಸಮಸ್ತ ಲೋಕಗಳನ್ನೂ ಸೃಷ್ಟಿಮಾಡುವನು.

ಸ ತದಾ ತಪ ಆಸ್ಥಾಯ ಪ್ರಾಪ್ಯ ಶಕ್ತಿಮನುತ್ತಮಾಂ ।
ರಜಸಾ ರಕ್ತವರ್ಣಂ ಚ ಕರಿಷ್ಯತಿ ಜಗತ್ತ್ರಯಂ ॥೫॥

ಆ ಬ್ರಹ್ಮನು ಆಗ ತಪಸ್ಸನ್ನು ಮಾಡಿ ಉತ್ತಮವಾದ ಶಕ್ತಿಯನ್ನು ಪಡೆದು, ಎಂದರೆ ಸೃಷ್ಟಿಮಾಡಲು ತಕ್ಕ ಸಾಮರ್ಥ್ಯವನ್ನು ಪಡೆದು, ರಜೋಗುಣವು ಪ್ರಧಾನವಾಗಿರುವ ಉಪಾಧಿಯಿಂದ ಕೆಂಪುಬಣ್ಣವನ್ನೂ, ಮೂರುಲೋಕಗಳನ್ನೂ ಸೃಷ್ಟಿಸುವನು.

ಸಗುಣಾನ್ಪಂಚಭೂತಾಂಶ್ಚ ಸಮುತ್ಪಾದ್ಯ ಮಹಾಮತಿಃ ।
ಇಂದ್ರಿಯಾಣೀಂದ್ರಿಯೇಶಾಂಶ್ಚ ಮನಃಪೂರ್ವಾನ್ಸಮಂತತಃ ॥೬॥

ಸತ್ತ್ವರಜಸ್ತಮೋಗುಣಗಳಿಂದ ಕೂಡಿರುವ ಪೃಥಿವ್ಯಾದಿಪಂಚಭೂತಗಳನ್ನೂ, ಪಂಚೇಂದ್ರಿಯಗಳನ್ನೂ, ಅವುಗಳ ಅಭಿಮಾನಿದೇವತೆಗಳನ್ನೂ, ಮನಸ್ಸು ಮೊದಲಾದುವನ್ನೂ ಸಹ ಆ ಮಹಾಬುದ್ಧಿಶಾಲಿಯಾದ ಬ್ರಹ್ಮನು ಸೃಷ್ಟಿಮಾಡುವನು.

ಕರಿಷ್ಯತಿ ತತಃ ಸರ್ಗಂ ತೇನ ಕರ್ತಾ ಸ ಉಚ್ಯತೇ ।
ವಿಶ್ವಸ್ಯಾಸ್ಯ ಮಹಾಭಾಗ ತ್ವಂ ವೈ ಪಾಲಯಿತಾ ತಥಾ ॥೭॥

ಅನಂತರದಲ್ಲಿ ಬ್ರಹ್ಮನು ಜೀವಾದಿಜಗತ್ಸೃಷ್ಟಿಯನ್ನು ಮಾಡುವನು. ಆದುದರಿಂದ ಅವನನ್ನು ಸೃಷ್ಟಿಕರ್ತನೆಂದು ಹೇಳುತ್ತಾರೆ. ಎಲೈ, ಮಹಾನುಭಾವನೇ ನೀನು ಆ ಸಮಸ್ತಜಗತ್ತಿಗೂ ರಕ್ಷಣಕರ್ತನಾಗಿರುತ್ತೀಯೆ.

**ತದ್ಭ್ರುವೋರ್ಮಧ್ಯದೇಶಾಚ್ಚ ಕ್ರೋಧಾದ್ರುದ್ರೋ ಭವಿಷ್ಯತಿ ।**
**ತಪಃ ಕೃತ್ವಾ ಮಹಾಘೋರಂ ಪ್ರಾಪ್ಯ ಶಕ್ತಿಂ ತು ತಾಮಸೀಂ ॥೮॥**

ಆ ದೇವಿಯ ಭ್ರೂಮಧ್ಯ ಎಂದರೆ ಹುಬ್ಬುಗಳ ನಡುವೆ ಇರುವ ಪ್ರದೇಶದಿಂದ, ಕೋಪಾವಿಷ್ಟಳಾಗಿರುವಾಗ ರುದ್ರನು ಹುಟ್ಟುವನು. ಆ ರುದ್ರನು ಮಹಾಕಠಿನವಾದ ತಪಸ್ಸನ್ನು ಮಾಡಿ ತಮೋಗುಣಯುಕ್ತವಾದ ಶಕ್ತಿಯನ್ನು ಪಡೆದು,

**ಕಲ್ಪಾಂತೇ ಸೋಽಪಿ ಸಂಹರ್ತಾ ಭವಿಷ್ಯತಿ ಮಹಾಮತೇ ।**
**ತೇನಾಹಂ ತ್ವಾಮುಪಾಯಾತಾ ಸಾತ್ತ್ವಿಕೀಂ ತ್ವಮವೇಹಿ ಮಾಂ ॥೯॥**

ಎಲೈ ಮಹಾಬುದ್ಧಿಶಾಲಿಯಾದ ವಿಷ್ಣುವೇ, ಕಲ್ಪದ ಕೊನೆಯಲ್ಲಿ ಆ ರುದ್ರನು ಈ ಸಮಸ್ತ ಜಗತ್ತನ್ನೂ ಉಪಸಂಹಾರಮಾಡುವನು. ಹೀಗೆ ಸೃಷ್ಟ್ಯಾದಿಕರ್ಮದ ನೆರವೇರುವಿಕೆಯ ನಿಮಿತ್ತವಾಗಿ ನಾನು ನಿನ್ನ ಸಮೀಪಕ್ಕೆ ಬಂದಿರುವೆನು. ನೀನು ನನ್ನನ್ನು ಸಾತ್ತ್ವಿಕೀಶಕ್ತಿರೂಪಳೆಂದು ತಿಳಿ.

**ಸ್ಥಾಸ್ಯೇಽಹಂ ತ್ವತ್ಸಮೀಪಸ್ಥಾ ಸದಾಹಂ ಮಧುಸೂದನ ।**
**ಹೃದಯೇ ತೇ ಕೃತಾವಾಸಾ ಭವಾಮಿ ಸತತಂ ಕಿಲ ॥೧೦॥**

ಎಲೈ ಮಧುಸೂದನನೇ, ನಾನು ಯಾವಾಗಲೂ ನಿನ್ನ ಸಮೀಪದಲ್ಲಿಯೇ ಇರುವೆನು. ಅಷ್ಟೇಕೆ, ನಿನ್ನ ಹೃದಯದಲ್ಲಿಯೇ ಸರ್ವಕಾಲದಲ್ಲಿಯೂ ವಾಸಮಾಡಿ ಕೊಂಡಿರುವೆನು.

॥ವಿಷ್ಣುರುವಾಚ ॥

**ಶ್ಲೋಕಸ್ಯಾರ್ಧಂ ಮಯಾ ಪೂರ್ವಂ ಶ್ರುತಂ ದೇವಿ ಸ್ಫುಟಾಕ್ಷರಂ ।**
**ತತ್ಕೇನೋಕ್ತಂ ವರಾರೋಹೇ ರಹಸ್ಯಂ ಪರಮಂ ಶಿವಂ ॥೧೧॥**

ವಿಷ್ಣುವು ದೇವಿಯನ್ನು ಕೇಳಿದನು—ಓ ದೇವಿಯೇ, ವರ್ಣಗಳು ಸ್ಪಷ್ಟ ವಾಗಿ ಕೇಳುವಂತೆ ಸ್ಫುಟವಾದ ಉಚ್ಚಾರಣೆಯಿಂದ ಕೂಡಿದ " ಸರ್ವಂ ಖಲ್ವಿದಮೇ ವಾಹಂ ನಾನ್ಯದಸ್ತಿ ಸನಾತನಂ " ಎಂಬ ಶ್ಲೋಕಾರ್ಧವು ನನ್ನಿಂದ ಹಿಂದೆ ಕೇಳ ಲ್ಪಟ್ಟಿತು. ಗೂಢತತ್ತ್ವಾರ್ಥಯುಕ್ತವಾಗಿಯೂ, ಉತ್ತಮವಾಗಿಯೂ, ಮಂಗಳಕರ ವಾಗಿಯೂ ಇರುವ ಆ ಶ್ಲೋಕಾರ್ಧವನ್ನು ಯಾರು ಹೇಳಿದರು. ?

**ತನ್ಮೇ ಬ್ರೂಹಿ ವರಾರೋಹೇ ಸಂಶಯೋಽಯಂ ವರಾನನೇ ।**
**ನಿರ್ಧನೋ ಹಿ ಯಥಾ ದ್ರವ್ಯಂ ತತ್ಸ್ಮರಾಮಿ ಪುನಃಪುನಃ ॥೧೨॥**

ಓ ಶೋಭನಮುಖವುಳ್ಳ ಸುಖವನ್ನುಂಟುಮಾಡುವ ದೇವಿಯೇ, ಆ ಶ್ಲೋಕವನ್ನು ಯಾರು ಹೇಳಿದರೆಂಬ ವಿಷಯದಲ್ಲಿ ಸಂಶಯವು ನನಗೆ ಉಂಟಾಗಿದೆ. ದರಿದ್ರನು ಯಾವಾಗಲೂ ದ್ರವ್ಯದ ವಿಷಯವನ್ನೇ ಚಿಂತಿಸುತ್ತಿರುವಂತೆ, ನಾನು ಆ ಶ್ಲೋಕಾರ್ಥವನ್ನೇ ಸದಾಕಾಲದಲ್ಲಿಯೂ ಸ್ಮರಣಮಾಡುತ್ತಿರುತ್ತೇನೆ. ಆದುದರಿಂದ ಅದನ್ನು ನೀನು ನನಗೆ ಹೇಳು.

॥ ವ್ಯಾಸ ಉವಾಚ ॥

**ವಿಷ್ಣೋಸ್ತದ್ವಚನಂ ಶ್ರುತ್ವಾ ಮಹಾಲಕ್ಷ್ಮೀಃ ಸಿತಾನನಾ ।**
**ಉವಾಚ ಪರಯಾ ಪ್ರೀತ್ಯಾ ವಚನಂ ಚಾರುಹಾಸಿನೀ ॥೧೩॥**

ವ್ಯಾಸಋಷಿಯು ಹೇಳಿದನು—ವಿಷ್ಣುವಿನ ಈ ಮಾತನ್ನು ಕೇಳಿ ಮಂದಹಾಸದಿಂದ ಕೂಡಿದ ಮುಖವುಳ್ಳ ಆ ಮಹಾದೇವಿಯು ಮುಗುಳುನಗೆಯಿಂದ ಕೂಡಿರುತ್ತಾ ಅತಿಪ್ರೀತಿಯಿಂದ ಪ್ರತ್ಯುತ್ತರವನ್ನು ಹೇಳಿದಳು.

॥ ಮಹಾಲಕ್ಷ್ಮೀರುವಾಚ ॥

**ಶೃಣು ಶೌರೇ ವಚೋ ಮಹ್ಯಂ ಸಗುಣಾಹಂ ಚತುರ್ಭುಜಾ ।**
**ಮಾಂ ಜಾನಾಸಿ ನ ಜಾನಾಸಿ ನಿರ್ಗುಣಾಂ ಸಗುಣಾಲಯಾಂ ॥೧೪॥**

ಮಹಾಲಕ್ಷ್ಮಿಯು ಹೇಳಿದಳು—ಎಲೈ ವಿಷ್ಣುವೇ ನನ್ನ ಮಾತನ್ನು ಕೇಳು. ಈಗ ನಾನು ಸಗುಣಸ್ವರೂಪಳೂ ನಾಲ್ಕು ತೋಳುಗಳುಳ್ಳವಳೂ ಆಗಿದ್ದೇನೆ. ಈ ರೀತಿಯಾಗಿರುವ ನನ್ನನ್ನು ನೀನು ತಿಳಿಯಬಲ್ಲೆ. ಗುಣಗಳಿಗೆ ಆವಾಸಭೂತಳಾದಾಗ್ಯೂ ಗುಣಗಳ ಸಂಬಂಧವಿಲ್ಲದ ನನ್ನ ಸ್ವರೂಪವನ್ನು ನೀನೇ ತಿಳಿಯಲಾರೆ.

**ತ್ವಂ ಜಾನೀಹಿ ಮಹಾಭಾಗ ತಯಾ ತತ್ಪ್ರಕಟೀಕೃತಂ ।**
**ಪುಣ್ಯಂ ಭಾಗವತಂ ವಿದ್ಧಿ ವೇದಸಾರಂ ಶುಭಾವಹಂ ॥೧೫॥**

ಓ ಪುಣ್ಯಶಾಲಿಯೇ, ನೀನು ಆ ಭಗವತೀದೇವಿಯ ನಿರ್ಗುಣವಾದ ಮೂಲರೂಪವನ್ನು ತಿಳಿಯಲಶಕ್ತನಾದರೂ ಆ ಮಹಾದೇವಿಯಿಂದ ಪ್ರಕಟಮಾಡಲ್ಪಟ್ಟು

ಪುಣ್ಯಪ್ರದವಾಗಿಯೂ, ಸರ್ವವೇದಗಳ ಸಾರಭೂತವಾಗಿಯೂ, ಶ್ರೋತೃಗಳಿಗೆ ಶುಭವನ್ನುಂಟುಮಾಡುವುದಾಗಿಯೂ ಇರುವ ಭಾಗವತಪುರಾಣವನ್ನು ತಿಳಿಯುವವನಾಗು.

**ಕೃಪಾಂ ಚ ಮಹತೀಂ ಮನ್ಯೇ ದೇವ್ಯಾಃ ಶತ್ರುನಿಷೂದನ ।**
**ಯಯಾ ಪ್ರೋಕ್ತಂ ಪರಂ ಗುಹ್ಯಂ ಹಿತಾಯ ತವ ಸುವ್ರತ ॥೧೬॥**

ಶತ್ರುಸಂಹಾರಕನಾದ, ನಿಯಮಗಳನ್ನು ಪಾಲಿಸುವ ಓ ವಿಷ್ಣುವೇ, ಆ ಮಹಾದೇವಿಯಿಂದಲೇ ನಿನ್ನ ಹಿತಕ್ಕೋಸ್ಕರ ತುಂಬ ರಹಸ್ಯವೂ ಶ್ರೇಷ್ಠವೂ ಆದ ಭಾಗವತವು ಹೇಳಲ್ಪಟ್ಟಿದೆ. ಇದು ಆ ಮಹಾದೇವಿಯ ಮಹಾದಯೆಯಲ್ಲದೆ ಮತ್ತೇನಲ್ಲವೆಂದು ನಾನು ತಿಳಿಯುತ್ತೇನೆ.

**ರಕ್ಷಣೀಯಂ ಸದಾ ಚಿತ್ತೇ ನ ವಿಸ್ಮಾರ್ಯಂ ಕದಾಚನ ।**
**ಸಾರಂ ಹಿ ಸರ್ವಶಾಸ್ತ್ರಾಣಾಂ ಮಹಾವಿದ್ಯಾಪ್ರಕಾಶಿತಂ ॥೧೭॥**

ಇದನ್ನು ಮನಸ್ಸಿನಲ್ಲಿ ಮನನಮಾಡುತ್ತಾ ಸದಾ ಜ್ಞಾಪಕದಲ್ಲಿಟ್ಟುಕೊಂಡು ರಕ್ಷಿಸುತ್ತಿರಬೇಕು. ಯಾವಾಗಲೂ ಮರೆಯಬಾರದು. ಏಕೆಂದರೆ, ಇದು ಮಹಾವಿದ್ಯಾಸ್ವರೂಪಳಾದ ಭುವನೇಶ್ವರೀದೇವಿಯಿಂದ ಪ್ರಕಾಶಿತವಾದ ಸಮಸ್ತಶಾಸ್ತ್ರಗಳ ಸಾರವಾಗಿದೆ.

**ನಾತಃಪರಂ ವೇದಿತವ್ಯಂ ವರ್ತತೇ ಭುವನತ್ರಯೇ ।**
**ಪ್ರಿಯೋಽಸಿ ಖಲು ದೇವ್ಯಾಸ್ತ್ವಂ ತೇನ ತೇ ವ್ಯಾಹೃತಂ ವಚಃ ॥೧೮॥**

ಈ ಭಾಗವತಾರ್ಥವನ್ನು ತಿಳಿದ ಮೇಲೆ ಎಲ್ಲವೂ ತಿಳಿದಂತೆಯೇ. ತಿಳಿಯಬೇಕಾದ ಬೇರೆ ಮಿಗಿಲಾದ ವಿಷಯವು ಮೂರು ಲೋಕದಲ್ಲಿ ಯಾವುದೂ ಇರುವುದಿಲ್ಲ. ನೀನು ಆ ಮಹಾದೇವಿಗೆ ಅತ್ಯಂತ ಪ್ರೀತಿಪಾತ್ರನಾಗಿರುವುದರಿಂದ ನಿನಗೆ ಈ ತತ್ತ್ವವಾಕ್ಯವು ಉಪದೇಶಿಸಲ್ಪಟ್ಟಿತು.

॥ ವ್ಯಾಸ ಉವಾಚ ॥

**ಇತಿ ಶ್ರುತ್ವಾ ವಚೋ ದೇವ್ಯಾ ಮಹಾಲಕ್ಷ್ಮ್ಯಾಶ್ಚತುರ್ಭುಜಃ ।**
**ದಧಾರ ಹೃದಯೇ ನಿತ್ಯಂ ಮತ್ವಾ ಮಂತ್ರಮನುತ್ತಮಂ ॥೧೯॥**

ವ್ಯಾಸಋಷಿಯು ಹೇಳಿದನು—ಈ ಪ್ರಕಾರವಾಗಿ ಚತುರ್ಭುಜಯುಕ್ತನಾದ ವಿಷ್ಣುವು ಮಹಾದೇವಿಯ ವಾಕ್ಯವನ್ನು ಕೇಳಿ ಶ್ರೇಷ್ಠಮಂತ್ರರೂಪವಾದ ಆ ತತ್ತ್ವ ವಾಕ್ಯವನ್ನು ಚೆನ್ನಾಗಿ ತಿಳಿದು ಅದನ್ನು ಹೃದಯದಲ್ಲಿ ಸತತವಾಗಿ ಧಾರಣೆಮಾಡಿದನು. ಎಂದರೆ ಸರ್ವಕಾಲದಲ್ಲಿಯೂ ಅದನ್ನು ಮನನಮಾಡುತ್ತಿದ್ದನು.

**ಕಾಲೇನ ಕಿಯತಾ ತತ್ರ ತನ್ನಾಭಿಕಮಲೋದ್ಭವಃ ।**
**ಬ್ರಹ್ಮಾ ದೈತ್ಯಭಯಾತ್ರಸ್ತೋ ಜಗಾಮ ಶರಣಂ ಹರೇಃ ॥೨೦॥**

ಹೀಗಿರುವಲ್ಲಿ, ಕೆಲವು ಕಾಲಾನಂತರದಲ್ಲಿ ಆ ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನು ದೈತ್ಯರ ಬಾಧೆಯಿಂದ ಭೀತಿಗೊಂಡು ವಿಷ್ಣುವಿನ ಮರೆಹೊಕ್ಕನು.

**ತತಃ ಕೃತ್ವಾ ಮಹಾಯುದ್ಧಂ ಹತ್ವಾ ತೌ ಮಧುಕೈಟಭೌ ।**
**ಜಜಾಪ ಭಗವಾನ್ವಿಷ್ಣುಃ ಶ್ಲೋಕಾರ್ಧಂ ವಿಶದಾಕ್ಷರಂ ॥೨೧॥**

ಅನಂತರದಲ್ಲಿ ವಿಷ್ಣುವು ಮಧುಕೈಟಭರೆಂಬ ಮಹಾದೈತ್ಯರ ಕೂಡ ದೊಡ್ಡ ಯುದ್ಧವನ್ನು ಮಾಡಿ ಅವರನ್ನು ಸಂಹರಿಸಿ, ಪೂರ್ವೋಕ್ತವಾದ ಅರ್ಧಶ್ಲೋಕವನ್ನು ಅಕ್ಷರಗಳು ಸ್ಪಷ್ಟವಾಗಿ ಕೇಳುವಂತೆ ಜಪಮಾಡುತ್ತಿದ್ದನು.

**ಜಪಂತಂ ವಾಸುದೇವಂ ಚ ದೃಷ್ಟ್ವಾ ದೇವಃ ಪ್ರಜಾಪತಿಃ ।**
**ಪಪ್ರಚ್ಛ ಪರಮಪ್ರೀತಃ ಕಂಜಜಃ ಕಮಲಾಪತಿಂ ॥೨೨॥**

ಈ ರೀತಿಯಾಗಿ ಶ್ಲೋಕಾರ್ಧವನ್ನು ಜಪಿಸುತ್ತಿರುವ ಲಕ್ಷ್ಮೀಪತಿಯಾದ ವಿಷ್ಣುವನ್ನು, ವಿಷ್ಣುವಿನ ನಾಭಿಕಮಲದಲ್ಲಿ ಹುಟ್ಟಿದ ಬ್ರಹ್ಮನು ನೋಡಿ ಬಹು ಸಂತೋಷಪಟ್ಟು ಪ್ರಶ್ನೆಮಾಡಿದನು.

**ಕಿಂ ತ್ವಂ ಜಪಸಿ ದೇವೇಶ ತ್ವತ್ತಃ ಕೋಽಪ್ಯಧಿಕೋಽಸ್ತಿವೈ ।**
**ಯತ್ಸ್ಮೃತ್ವಾ ಪುಂಡರೀಕಾಕ್ಷ ಪ್ರೀತೋಽಸಿ ಜಗದೀಶ್ವರ ॥೨೩॥**

ಎಲೈ ದೇವದೇವನೇ, ನೀನು ಏನನ್ನು ಜಪಮಾಡುತ್ತೀಯೆ? ನಿನಗಿಂತ ಅಧಿಕವಾದ ವಸ್ತು ಯಾವುದಾದರೂ ಉಂಟೇ? ಕಮಲಸದೃಶವಾದ ನೇತ್ರಗಳುಳ್ಳವನೂ, ಜಗತ್ತಿಗೆಲ್ಲಾ ಅಧಿಪತಿಯೂ ಆದ ನೀನು ಯಾವ ಮಂತ್ರವನ್ನು ಸ್ಮರಣಮಾಡಿ ಅದರಿಂದ ಪ್ರೀತನಾಗುತ್ತೀಯೆ?

|| ಹರಿರುವಾಚ ||

**ಮಯಿ ತ್ವಯಿ ಚ ಯಾ ಶಕ್ತಿಃ ಕ್ರಿಯಾಕಾರಣಲಕ್ಷಣಾ ।**
**ವಿಚಾರಯ ಮಹಾಭಾಗ ಯಾ ಸಾ ಭಗವತೀ ಶಿವಾ ॥೨೪॥**

ವಿಷ್ಣುವು ಹೇಳಿದನು—ಎಲೈ ಮಹಾಪುರುಷನೇ, ನನ್ನಲ್ಲಿಯೂ ನಿನ್ನಲ್ಲಿಯೂ, ಕಾರ್ಯಗಳೂ ಕಾರಣಗಳೂ ಇವೇ ಸ್ವರೂಪವಾಗಿವುಳ್ಳ ಯಾವ ಶಕ್ತಿಯುಂಟೋ ಅದರ ಸ್ವಭಾವವನ್ನು ವಿಮರ್ಶಿಸು. ಆ ಶಕ್ತಿಯೇ ಮಂಗಳಕರಳಾದ ಮಹಾಭಗವತೀದೇವಿಯೆಂದು ತಿಳಿ.

**ಯಸ್ಯಾಽಽಧಾರೇ ಜಗತ್ಸರ್ವಂ ತಿಷ್ಠತ್ಯತ್ರ ಮಹಾರ್ಣವೇ ।**
**ಸಾಕಾರಾ ಯಾ ಮಹಾಶಕ್ತಿರಮೇಯಾ ಚ ಸನಾತನೀ ॥೨೫॥**

ದೊಡ್ಡಸಾಗರದಂತೆ ಜಲಮಯವಾಗಿರುವ ಈ ಪ್ರದೇಶದಲ್ಲಿ ಅತ್ಯಗಾಧವಾದ ಯಾವ ಶಕ್ತಿಯ ಆಶ್ರಯದಿಂದ ಈ ಸಮಸ್ತಜಗತ್ತೂ ಸ್ಥಿರವಾಗಿ ಇದೆಯೋ ಆ ದೇವಿಯ ಸಾಕಾರರೂಪವು ಮಹಾಶಕ್ತಿಯುತವಾದುದು, ತಿಳಿಯಲಶಕ್ಯವಾದುದು ಮತ್ತು ಆದ್ಯಂತರಹಿತವಾದುದು.

**ಯಯಾ ವಿಸೃಜ್ಯತೇ ವಿಶ್ವಂ ಜಗದೇತಚ್ಚರಾಚರಂ ।**
**ಸೈಷಾ ಪ್ರಸನ್ನಾ ವರದಾ ನೃಣಾಂ ಭವತಿ ಮುಕ್ತಯೇ ॥೨೬॥**

ಯಾವ ದೇವಿಯಿಂದ ಈ ಚರಾಚರಾತ್ಮಕವಾದ ಸಮಸ್ತ ಜಗತ್ತು ಸೃಷ್ಟಿಸಲ್ಪಡುವುದೋ, ಭಕ್ತರ ಕೋರಿಕೆಗಳನ್ನು ಸಲ್ಲಿಸುವ ಆ ದೇವಿಯೇ ಪ್ರಸನ್ನಳಾಗಿ ಮನುಷ್ಯರಿಗೆ ಮುಕ್ತಿಯನ್ನು ಉಂಟುಮಾಡಲೂ ಸಹಾಯಕಳಾಗುತ್ತಾಳೆ.

**ಸಾವಿದ್ಯಾ ಪರಮಾ ಮುಕ್ತೇರ್ಹೇತುಭೂತಾ ಸನಾತನೀ ।**
**ಸಂಸಾರಬಂಧಹೇತುಶ್ಚ ಸೈವ ಸರ್ವೇಶ್ವರೇಶ್ವರೀ ॥೨೭॥**

ಅನಾದಿಕಾಲದಿಂದಲೂ ಗುರುಶಿಷ್ಯಪರಂಪರೆಯಿಂದ ಬಂದಿರುವ, ಜ್ಞಾನ ಅಥವಾ ಚಿಚ್ಛಕ್ತಿಸ್ವರೂಪಳಾದ ಆ ದೇವಿಯು ಪ್ರಸನ್ನಳಾಗಿ ಉತ್ತಮಪುರುಷಾರ್ಥವಾದ ಮೋಕ್ಷಸುಖಕ್ಕೂ ಕಾರಣಳಾಗುವುದರಿಂದ ಪರಾವಿದ್ಯಾಸ್ವರೂಪಳಾಗಿದ್ದಾಳೆ. ಆ ದೇವಿಯು ಪ್ರಸನ್ನಳಾಗದೆ ಇದ್ದರೆ ಜನರ ಹುಟ್ಟು, ಮುಪ್ಪು, ಸಾವು ಮುಂತಾದ ಸಾಂಸಾರಿಕವಾದ ಬಂಧ ದುಃಖಕ್ಕೂ ಕಾರಣಳಾಗುತ್ತಾಳೆ. ಹೀಗೆ ಆ ದೇವಿಯು ಈ

ಸಮಸ್ತ ಜಗತ್ತಿಗೂ ದೇವಾದಿಗಳಿಗೂ ಅವರ ನಾಯಕರೂ ಪ್ರಮುಖರೂ ಆದ ಇಂದ್ರ ಮೊದಲಾದವರಿಗೂ ಒಡೆಯಳಾಗಿರುತ್ತಾಳೆ.

**ಅಹಂ ತ್ವಮುಖಿಲಂ ವಿಶ್ವಂ ತಸ್ಯಾಶ್ಚಿಚ್ಛಕ್ತಿಸಂಭವಂ ।**
**ವಿದ್ಧಿ ಬ್ರಹ್ಮನ್ ನ ಸಂದೇಹಃ ಕರ್ತವ್ಯಃ ಸರ್ವದಾನಘ ॥೨೮॥**

ನಾನು, ನೀನು, ಈ ಸಮಸ್ತಜಗತ್ತು ಸಹ ಆ ದೇವಿಯ ಚಿಚ್ಛಕ್ತಿಯಿಂದ, ಎಂದರೆ, ಚೈತನ್ಯಶಕ್ತಿಯ ಪ್ರಭಾವದಿಂದ ಉಂಟಾಗಿರುತ್ತದೆ. ದೋಷರಹಿತನಾದ ಓ ಬ್ರಹ್ಮನೇ, ನೀನು ಈ ವಿಷಯವನ್ನು ಸರ್ವಕಾಲದಲ್ಲಿಯೂ ಸತ್ಯವೆಂದು ತಿಳಿ. ಸಂಶಯಪಡಬೇಡ.

**ಶ್ಲೋಕಾರ್ಧೇನ ತಯಾ ಪ್ರೋಕ್ತಂ ತದ್ವೈ ಭಾಗವತಂ ಕಿಲ ।**
**ವಿಸ್ತರೋ ಭವಿತಾ ತಸ್ಯ ದ್ವಾಪರಾದೌ ಯುಗೇ ತಥಾ ॥೨೯॥**

ಈ ಭಾಗವತಗ್ರಂಥಸಾರವು ಅರ್ಧಶ್ಲೋಕರೂಪದಲ್ಲಿ ಸಂಗ್ರಹವಾಗಿ ಆ ದೇವಿಯಿಂದಲೇ ಹೇಳಲ್ಪಟ್ಟಿತು. ಅದಕ್ಕೇ ದ್ವಾಪರಯುಗದ ಪ್ರಾರಂಭಕಾಲದಲ್ಲಿ ವ್ಯಾಸ ಋಷಿಯಿಂದ ಹಾಗೆಯೇ ವಿಸ್ತಾರವಾಗಿ ಪ್ರಚಾರವಾಗುವುದು.

|| ವ್ಯಾಸ ಉವಾಚ ||

**ಬ್ರಹ್ಮಣಾ ಸಂಗೃಹೀತಂ ಚ ವಿಷ್ಣೋಸ್ತು ನಾಭಿಪಂಕಜೇ ।**
**ನಾರದಾಯ ಚ ತೇನೋಕ್ತಂ ಪುತ್ರಾಯಾಮಿತಬುದ್ಧಯೇ ॥೩೦॥**

ವ್ಯಾಸನು ಹೇಳಿದನು—ಈ ಭಾಗವತವು ವಿಷ್ಣುವಿನ ನಾಭಿಕಮಲದಲ್ಲಿದ್ದ ಬ್ರಹ್ಮನಿಂದ ಸಂಗ್ರಹಿಸಲ್ಪಟ್ಟು ತನ್ನ ಪುತ್ರನಾದ ಮಹಾಬುದ್ಧಿಶಾಲಿಯಾದ ನಾರದ ಋಷಿಗೆ ಉಪದೇಶಿಸಲ್ಪಟ್ಟಿತು.

**ನಾರದೇನ ತಥಾ ಮಹ್ಯಂ ದತ್ತಂ ಹಿ ಮುನಿನಾ ಪುರಾ ।**
**ಮಯಾ ಕೃತಮಿದಂ ಪೂರ್ಣಂ ದ್ವಾದಶಸ್ಕಂಧವಿಸ್ತರಂ ॥೩೧॥**

ಹೀಗೆ ಬ್ರಹ್ಮನಿಂದ ನಾರದಋಷಿಗೂ, ಅವನಿಂದ ನನಗೂ ಪೂರ್ವದಲ್ಲಿ ಉಪದೇಶಿಸಲ್ಪಟ್ಟಿತು. ಇದನ್ನೇ ನಾನು ಹನ್ನೆರಡು ಸ್ಕಂಧಗಳಲ್ಲಿ ವಿಸ್ತರಿಸಿ ಪೂರ್ಣವನ್ನಾಗಿ ಮಾಡಿದೆನು.

**ತತ್ಪಠಸ್ವ ಮಹಾಭಾಗ ಪುರಾಣಂ ಬ್ರಹ್ಮಸಂಮಿತಂ ।**
**ಪಂಚಲಕ್ಷಣಯುಕ್ತಂ ಚ ದೇವ್ಯಾಶ್ಚರಿತಮುತ್ತಮಂ ॥೩೨॥**

ಎಲೈ ಪುರುಷಶ್ರೇಷ್ಠನೇ, ಈ ರೀತಿಯಲ್ಲಿ ಅವಿಚ್ಛಿನ್ನವಾಗಿ ಪರಂಪರಾಪ್ರಾಪ್ತವಾದ, ವೇದದಂತೆ ಪ್ರಮಾಣಭೂತವಾದ, ಪುರಾಣಗಳಿಗೆ ಇರಬೇಕಾದ ಸರ್ಗಾದಿ ಐದು ಲಕ್ಷಣಗಳಿಂದ ಕೂಡಿರುವ, ಉತ್ತಮವಾದ ದೇವಿಯ ಚರಿತ್ರೆಯನ್ನೊಳಗೊಂಡಿರುವ ಈ ಪುರಾಣವನ್ನು ಪಠನಮಾಡು.

**ತತ್ತ್ವಜ್ಞಾನರಸೋಪೇತಂ ಸರ್ವೇಷಾಮುತ್ತಮೋತ್ತಮಂ ।**
**ಧರ್ಮಶಾಸ್ತ್ರಸಮಂ ಪುಣ್ಯಂ ವೇದಾರ್ಥೇನೋಪಬೃಂಹಿತಂ ॥೩೩॥**

ಈ ಪುರಾಣವು ತತ್ತ್ವಜ್ಞಾನದಿಂದ ಉಂಟಾಗುವ ಮೋಕ್ಷ ಮುಂತಾದ ಆನಂದರಸಾನುಭವದ ನಿರೂಪಣೆಗಳಿಂದ ಕೂಡಿರುವುದು. ಎಲ್ಲ ಬಗೆಯ ಪುರಾಣ ಶಾಸ್ತ್ರ ಮುಂತಾದ ಮೇಲ್ತರದ ಗ್ರಂಥಗಳಲ್ಲೂ ಶ್ರೇಷ್ಠವಾದುದು. ಪುಣ್ಯಕರವಾದ ವರ್ಣಾಶ್ರಮಧರ್ಮಗಳನ್ನು ತಿಳಿಸುವ ಶಾಸ್ತ್ರಕ್ಕೆ ಸಮನಾದುದು. ಮತ್ತು ವೇದಾರ್ಥದ ಸಮರ್ಥನೆಗಳಿಂದ ಕೂಡಿರುವುದು.

**ವೃತ್ರಾಸುರವಧೋಪೇತಂ ನಾನಾಖ್ಯಾನಕಥಾಯಿಕಂ ।**
**ಬ್ರಹ್ಮವಿದ್ಯಾನಿದಾನಂ ತು ಸಂಸಾರಾರ್ಣವತಾರಕಂ ॥೩೪॥**

ಈ ಪುರಾಣದಲ್ಲಿ ವೃತ್ರಾಸುರನ ಸಂಹಾರರೂಪವಾದ ಕಥೆಯೂ, ಇನ್ನೂ ಅನೇಕ ಕಥೋಪಾಖ್ಯಾನಗಳೂ ಉಕ್ತವಾಗಿವೆ. ಮತ್ತು ಇದು ಸಂಸಾರವೆಂಬ ಮಹಾಸಾಗರವನ್ನು ದಾಟಿ ಮುಕ್ತಿಯನ್ನು ಪಡೆಯುವುದಕ್ಕೆ ಅನುಕೂಲವಾದ ಬ್ರಹ್ಮವಿದ್ಯೆಯನ್ನು ತಿಳಿಯಿಸುವ ಸಾಧನವಾಗಿರುತ್ತದೆ.

**ಗೃಹಾಣ ತ್ವಂ ಮಹಾಭಾಗ ಯೋಗ್ಯೋಽಸಿ ಮತಿಮತ್ತರಃ ।**
**ಪುಣ್ಯಂ ಭಾಗವತಂ ನಾಮ ಪುರಾಣಂ ಪುರುಷರ್ಷಭ ॥೩೫॥**

ಎಲೈ ಪುಣ್ಯಶಾಲಿಯಾದ ಪುರುಷಶ್ರೇಷ್ಠನೇ, ನೀನು ಬುದ್ಧಿವಂತರಲ್ಲೆಲ್ಲಾ ಹೆಚ್ಚಾದ ಬುದ್ಧಿಯುಳ್ಳವನಾದುದರಿಂದ ಈ ಭಾಗವತವೆಂಬ ಹೆಸರುಳ್ಳ ಶುಭಪ್ರದವಾದ ಪುರಾಣವನ್ನು ಗ್ರಹಿಸಲು ನೀನೇ ಯೋಗ್ಯನು. ಆದುದರಿಂದ ನೀನು ಇದನ್ನು ಸ್ವೀಕರಿಸು ಎಂದರೆ ಉಪದೇಶವನ್ನು ಹೊಂದು.

**ಅಷ್ಟಾದಶಸಹಸ್ರಾಣಾಂ ಶ್ಲೋಕಾನಾಂ ಕುರು ಸಂಗ್ರಹಂ ।**
**ಅಜ್ಞಾನನಾಶನಂ ದಿವ್ಯಂ ಜ್ಞಾನಭಾಸ್ಕರಬೋಧಕಂ ॥೩೬॥**

ಈ ಪುರಾಣವು ಹದಿನೆಂಟು ಸಾವಿರ ಶ್ಲೋಕಗಳಿಂದ ಕೂಡಿ ಸಂಗ್ರಹವಾಗಿರುವ, ಅಜ್ಞಾನವನ್ನು ಹೋಗಲಾಡಿಸುವ, ಮನಸ್ಸಿನಲ್ಲಿ ಜ್ಞಾನವೆಂಬ ಸೂರ್ಯನು ಉದಯಿಸುವಂತೆ ತಿಳಿವಳಿಕೆಯನ್ನುಂಟುಮಾಡುವ ಇಂಥ ದಿವ್ಯವಾದ ಪುರಾಣವನ್ನು ಸ್ವೀಕಾರಮಾಡು.

**ಸುಖದಂ ಶಾಂತಿದಂ ಧನ್ಯಂ ದೀರ್ಘಾಯುಷ್ಯಕರಂ ಶಿವಂ ।**
**ಶೃಣ್ವತಾಂ ಪಠತಾಂ ಚೇದಂ ಪುತ್ರಪೌತ್ರವಿವರ್ಧನಂ ॥೩೭॥**

ಈ ಪುರಾಣವನ್ನು ಶ್ರವಣಮಾಡುವವರಿಗೂ, ಪಠನಮಾಡುವವರಿಗೂ ಇದು ಸುಖವನ್ನು ಉಂಟುಮಾಡುತ್ತದೆ. ಮನಶ್ಶಾಂತಿಯನ್ನು ಕೊಡುತ್ತದೆ. ಇದನ್ನು ಕೇಳುವುದರಿಂದ ಮನುಷ್ಯನು ಕೃತಕೃತ್ಯನಾಗುತ್ತಾನೆ. ಮತ್ತು ದೀರ್ಘಾಯುಸ್ಸನ್ನು ಪಡೆಯುತ್ತಾನೆ. ಪುತ್ರಪೌತ್ರಾದಿಸಂತಾನದ ಅಭಿವೃದ್ಧಿಯುಂಟಾಗುತ್ತದೆ.

**ಶಿಷ್ಯೋಽಯಂ ಮಮ ಧರ್ಮಾತ್ಮಾ ಲೋಮಹರ್ಷಣಸಂಭವಃ ।**
**ಪಠಿಷ್ಯತಿ ತ್ವಯಾ ಸಾರ್ಧಂ ಪುರಾಣೀಂ ಸಂಹಿತಾಂ ಶುಭಾಂ ॥೩೮॥**

ಲೋಮಹರ್ಷಣನೆಂಬ ಋಷಿಯ ಪುತ್ರನಾದ, ಧರ್ಮಬುದ್ಧಿಯುಳ್ಳ ಈ ಸೂತನು ನನಗೆ ಶಿಷ್ಯನು. ಇವನು ನಿನ್ನ ಜೊತೆಯಲ್ಲಿ ಈ ಮಂಗಳಕರವಾದ ಪುರಾಣರೂಪವಾದ ಸಂಹಿತೆಯನ್ನು ಪಠನಮಾಡುತ್ತಾನೆ.

॥ ಸೂತ ಉವಾಚ ॥

**ಇತ್ಯುಕ್ತಂ ತೇನ ಪುತ್ರಾಯ ಮಹ್ಯಂ ಚ ಕಥಿತಂ ಕಿಲ ।**
**ಮಯಾ ಗೃಹೀತಂ ತತ್ಸರ್ವಂ ಪುರಾಣಂ ಚಾತಿವಿಸ್ತರಂ ॥೩೯॥**

ಸೂತನು ಹೇಳಿದನು—ಈ ಪ್ರಕಾರವಾಗಿ ವ್ಯಾಸಋಷಿಯು ಹೇಳಿ ಆ ಭಾಗವತವನ್ನು ತನ್ನ ಪುತ್ರನಾದ ಶುಕಮುನಿಗೂ ನನಗೂ ಸಹ ಬೋಧಿಸಿದನು. ತಕ್ಕಷ್ಟು ವಿಸ್ತಾರವಾಗಿ ರಚಿಸಿರುವ ಆ ಪುರಾಣವೆಲ್ಲವನ್ನೂ ನಾನೂ ಗ್ರಹಿಸಿದೆನು.

ಮಾನವರ ಎಲ್ಲ ಬಗೆಯ ಕ್ಲೇಶಗಳ ನಿವಾರಣೆಗಾಗಿ ಈ ದೇವೀಭಾಗವತವನ್ನು ರಚಿಸಲಾಗಿದೆ ಎಂದು ಹೇಳಿದೆ. ಅದನ್ನು ಓದಿದರೂ ಮನಶ್ಶಾಂತಿಯು ದೊರೆಯ ಲಿಲ್ಲವೆಂದರೆ ಅದರ ರಚನೆಯು ವ್ಯರ್ಥವೆಂದಾಗುತ್ತದೆ. ಅಲ್ಲದೆ, ಶುಕನು ತುಂಬ ವೈರಾಗ್ಯಶಾಲಿಯು. ಆದುದರಿಂದಲೇ ಗೃಹಸ್ಥಾಶ್ರಮ ಸ್ವೀಕಾರವನ್ನು ಬೇಡವೆಂದು ಹೇಳಿ ಸನ್ಯಾಸಾಶ್ರಮ ಸ್ವೀಕಾರವನ್ನು ಆಶಿಸಿದನು. ಅಂಥವನ ಮನಶ್ಶಾಂತಿಗಾಗಿ ಈ ಪುರಾಣವನ್ನು ರಚಿಸಲಾಗಿದೆ ಎಂದು ಹೇಳಿದೆ.

**ಶುಕೋಽಧೀತ್ಯ ಪುರಾಣಂ ತು ಸ್ಥಿತೋ ವ್ಯಾಸಾಶ್ರಮೇ ಶುಭೇ ।**
**ನ ಲೇಭೇ ಶರ್ಮಕರ್ಮಾತ್ಮಾ ಬ್ರಹ್ಮಾತ್ಮಜ ಇವಾಪರಃ ॥೪೦॥**

ಆ ಶುಕನೂ ಈ ರೀತಿಯಲ್ಲಿ ಈ ಮಹಾಪುರಾಣವನ್ನು ಅಧ್ಯಯನಮಾಡಿ ವ್ಯಾಸಋಷಿಯ ಪುಣ್ಯಾಶ್ರಮದಲ್ಲಿಯೇ ಇರುತ್ತಿದ್ದನು. ಈ ಶುಕನು ಬ್ರಹ್ಮನ ಮತ್ತೊಬ್ಬ ಮಗನೋ ಎಂಬಂತೆ ಮಹಾಜ್ಞಾನಿಯಾದವನು. ಇಂತಹವನೂ ಕರ್ಮಾತ್ಮ ನಾಗಿ ಈ ಪುರಾಣದಿಂದ ಶಾಂತಿಯನ್ನು ಪಡೆಯಲಿಲ್ಲ ಎಂದರೆ, ವಿರಕ್ತಿಮಾರ್ಗವನ್ನು ಬಿಟ್ಟು ಗೃಹಸ್ಥಾಶ್ರಮ ಸ್ವೀಕಾರಮಾಡಿ ಕರ್ಮಮಾರ್ಗಪ್ರವೃತ್ತನಾಗಿರಬೇಕೆಂಬ ವಿಷಯದಲ್ಲಿ ತೃಪ್ತಿಸಮಾಧಾನಗಳ ಮೂಲಕ ಸಂತೋಷವನ್ನು ಹೊಂದಲಿಲ್ಲ.

ಈ ಶ್ಲೋಕದಲ್ಲಿ ಕರ್ಮಾತ್ಮಾ ಎಂದರೆ ಕರ್ಮಾಚರಣೆಯಲ್ಲಿ ಆಸಕ್ತಿಯುಳ್ಳ ವನೆಂದು ಅರ್ಥವಲ್ಲವು. ಏಕೆಂದರೆ, ಶುಕನು ಗೃಹಸ್ಥಾಶ್ರಮಿಗಳ ಸಹವಾಸದಲ್ಲಿದ್ದಾನೆ. ಸನ್ಯಾಸಾಶ್ರಮವನ್ನು ಕ್ರಮವಾಗಿ ಸ್ವೀಕರಿಸಿ ಕರ್ಮವನ್ನು ತ್ಯಾಗಮಾಡಿರಲಿಲ್ಲವು.

**ಏಕಾಂತವಾಸೀ ವಿಕಲಃ ಸ ಶೂನ್ಯ ಇವ ಲಕ್ಷ್ಯತೇ ।**
**ನಾತ್ಯಂತಭೋಜನಾಸಕ್ತೋ ನೋಪವಾಸರತಸ್ತಥಾ ॥೪೧॥**

ಆದುದರಿಂದಲೇ, ಏಕಾಂತದಲ್ಲಿ ವಿವಿಕ್ತನಾಗಿರಲು ಅಪೇಕ್ಷೆಯುಳ್ಳವನಾಗಿದ್ದ ಆ ಶುಕನು, ಯಾವುದೊಂದು ವ್ಯವಹಾರವನ್ನೂ ಗಮನಿಸದೆ ಯಾವುದೋ ಒಂದು ಲೋಪವಿದ್ದವನಂತೆಯೂ, ಯಾವುದೊಂದು ವ್ಯವಹಾರವೂ ಇಲ್ಲದಿದ್ದವನಂತೆಯೂ ಕಾಣಬರುತ್ತಿದ್ದನು. ಹೀಗೆ ಅವನು ಊಟದಲ್ಲಿ, ಇಂದ್ರಿಯಗಳ ಮೂಲಕ ವಿಷಯ ಗಳನ್ನು ಅನುಭವಿಸುವುದರಲ್ಲಿ, ಹೆಚ್ಚಾದ ಆದರವುಳ್ಳವನಾಗಿರಲಿಲ್ಲವು. ಮತ್ತು ಉಪವಾಸದಲ್ಲೂ, ಕರ್ಮಗಳನ್ನೂ ಭೋಗಗಳನ್ನೂ ಬೇಡವೆಂದು ನಿಷೇಧಿಸುವುದರಲ್ಲೂ ಆಸಕ್ತಿ ಇಲ್ಲದವನಾಗಿಯೂ ಇರುತ್ತಿದ್ದನು. ಗೃಹಸ್ಥರ ಧರ್ಮಗಳನ್ನೂ ಕರ್ಮಗಳನ್ನೂ

ಶಾಸ್ತ್ರದಲ್ಲಿ ಹೇಳಿರುವ ಕ್ರಮವನ್ನನುಸರಿಸಿಯೇ ಬಿಡಬೇಕು. ಕ್ರಮವಾಗಿ ಸನ್ಯಾಸಾಶ್ರಮದ ಧರ್ಮಗಳನ್ನು ಆಚರಿಸಬೇಕು. ಇದಕ್ಕೆ ತಂದೆಯ ಉಪದೇಶವು ಅನುಕೂಲವಾಗಿರಲಿಲ್ಲವು. ಆದುದರಿಂದ,

**ಚಿಂತಾವಿಷ್ಟಂ ಶುಕಂ ದೃಷ್ಟ್ವಾ ವ್ಯಾಸಃ ಪ್ರಾಹ ಸುತಂ ಪ್ರತಿ ।**
**ಕಿಂ ಪುತ್ರ ಚಿಂತ್ಯತೇ ನಿತ್ಯಂ ಕಸ್ಮಾದ್ವ್ಯಗ್ರೋಽಸಿ ಮಾನದ ॥೪೨॥**

ಚಿಂತಾಕುಲನಾದ ತನ್ನ ಮಗನಾದ ಶುಕನನ್ನು ವ್ಯಾಸನು ನೋಡಿ, ಧರ್ಮಾಚರಣೆಯಿಂದ ಕುಲದ ಗೌರವವನ್ನು ಕಾಪಾಡಬಲ್ಲವನಾದ ಎಲೈ ಮಗನೇ, ಯಾವಾಗಲೂ ನೀನು ಏನನ್ನು ಯೋಚಿಸುತ್ತಿರುವೆ ? ಏನು ಕಾರಣ ನೀನು ಮನೋವ್ಯಥೆಯುಳ್ಳವನಾಗಿದ್ದೀಯೆ ?

**ಆಸ್ಸೇ ಧ್ಯಾನಪರೋ ನಿತ್ಯಮೃಣಗ್ರಸ್ತ ಇವಾಧನಃ ।**
**ಕಾ ಚಿಂತಾ ವರ್ತತೇ ಪುತ್ರ ಮಯಿ ತಾತೇ ತು ತಿಷ್ಠತಿ ॥೪೩॥**

ಮಾನವಂತನಾದ ದರಿದ್ರನು ಸಾಲಗಾರರ ಬಾಧೆಯಿಂದ ಕ್ಲೇಶಪಡುತ್ತಿರುವವನಂತೆಯೂ, ಏನೋ ಒಂದು ದೊಡ್ಡ ವಿಷಯವನ್ನು ಚಿಂತಿಸುತ್ತಿರುವವನಂತೆಯೂ, ನೀನು ಯಾವಾಗಲೂ ಅನ್ಯಮನಸ್ಕನಾಗಿರುವಂತೆ ಕಾಣುತ್ತೀಯೆ. ತಂದೆಯಾದ ಮತ್ತು ನಿನ್ನ ಯೋಗಕ್ಷೇಮಗಳ ವಿಷಯದಲ್ಲಿ ತಕ್ಕ ಏರ್ಪಾಡನ್ನು ಮಾಡಬಲ್ಲ ನಾನು ಜೀವಿಸಿರುವಲ್ಲಿ, ಎಲೈ ಮಗನೇ, ನಿನಗೇನು ಚಿಂತೆಯಿದೆ ?

**ಸುಖಂ ಭುಂಕ್ಷ್ವ ಯಥಾಕಾಮಂ ಮುಂಚ ಶೋಕಂ ಮನೋಗತಂ ।**
**ಜ್ಞಾನಂ ಚಿಂತಯ ಶಾಸ್ತ್ರೋಕ್ತಂ ವಿಜ್ಞಾನೇ ಚ ಮತಿಂ ಕುರು ॥೪೪॥**

ಎಲೈ ಪುತ್ರನೇ, ನಿನ್ನ ಮನಸ್ಸಿಗೆ ಬಂದಹಾಗೆ ಸುಖವಾಗಿ ಭೋಜನಮಾಡು, ವಿಷಯಸುಖಗಳನ್ನು ಅನುಭವಿಸು. ನಿನ್ನ ಮನಸ್ಸಿನಲ್ಲಿ ದುಃಖಕರವಾದ ವ್ಯಾಕುಲತೆಯನ್ನು ತ್ಯಜಿಸು. ಭಾಗವತ ಮುಂತಾದ ಶಾಸ್ತ್ರಗಳಲ್ಲಿ ಉಕ್ತವಾದ ಧರ್ಮಕರ್ಮಗಳ ಜ್ಞಾನವಿಷಯವನ್ನು ಮನನಮಾಡು. ಮತ್ತು ಈ ರೀತಿಯಲ್ಲಿ ಶಾಸ್ತ್ರ ಮತ್ತು ಉಪದೇಶಗಳಿಂದ ಬಂದ ಜ್ಞಾನವನ್ನು ಅನುಭವಕ್ಕೆ ತಂದುಕೊಳ್ಳುವಂತೆ ಮಾಡುವ ವಿಚಾರಗಳಲ್ಲಿಯೂ ಮನಸ್ಸನ್ನಿಡು.

**ನ ಚೇನ್ಮನಸಿ ತೇ ಶಾಂತಿರ್ವಚಸಾ ಮಮ ಸುವ್ರತ ।**
**ಗಚ್ಛ ತ್ವಂ ಮಿಥಿಲಾಂ ಪುತ್ರ ಪಾಲಿತಾಂ ಜನಕೇನ ಹ ॥೪೫॥**

ಎಲೈ ಸತ್ಕರ್ಮನಿಷ್ಠನೇ, ನನ್ನ ಮಾತುಗಳಿಂದ ನಿನ್ನ ಮನಸ್ಸಿಗೆ ಶಾಂತಿಯು ಲಭಿಸದಿದ್ದಲ್ಲಿ ಜನಕರಾಜನಿಂದ ರಕ್ಷಿಸಲ್ಪಡುತ್ತಿರುವ ಮಿಥಿಲಾ ಎಂಬ ನಗರಕ್ಕೆ ಪ್ರಯಾಣಮಾಡು. ಅಲ್ಲಿ ರಾಜರ್ಷಿಯೂ ಜೀವನ್ಮುಕ್ತನೂ ಆಗಿರುವ ಜನಕಮಹಾ ರಾಜನ ಉಪದೇಶಗಳನ್ನು ಕೇಳಿ, ನಡೆವಳಿಯನ್ನೂ ನೋಡಿದರೆ, ನನ್ನ ಮಾತುಗಳು ನಿಜವೆಂಬುದು ನಿನಗೇ ಗೊತ್ತಾಗುತ್ತದೆ.

**ಸ ತೇ ಮೋಹಂ ಮಹಾಭಾಗ ನಾಶಯಿಷ್ಯತಿ ಭೂಪತಿಃ ।**
**ಜನಕೋನಾಮ ಧರ್ಮಾತ್ಮಾ ವಿದೇಹಃ ಸತ್ಯಸಾಗರಃ ॥೪೬॥**

ಎಲೈ ಮಹಾಶಯನೇ, ಅಲ್ಲಿ ಧರ್ಮಾತ್ಮನೂ, ಸತ್ಯಸಂಧನೂ,ವಿದೇಹದೇಶಕ್ಕೆ ದೊರೆಯೂ, ಆದ ಜನಕನೆಂಬ ರಾಜನು ನಿನ್ನ ಅಜ್ಞಾನಭ್ರಾಂತಿಯನ್ನು ಹೋಗ ಲಾಡಿಸುವನು.

**ತಂ ಗತ್ವಾ ನೃಪತಿಂ ಪುತ್ರ ಸಂದೇಹಂ ಸ್ವಂ ನಿವರ್ತಯ ।**
**ವರ್ಣಾಶ್ರಮಾಣಾಂ ಧರ್ಮಾಂಸ್ತ್ವಂ ಪೃಚ್ಛ ಪುತ್ರ ಯಥಾತಥಂ ॥**

ಓ ಮಗನೇ, ಆ ರಾಜನ ಬಳಿಗೆ ಹೋಗಿ ನಿನ್ನ ಸಂಶಯವನ್ನು ನಿವಾರಣೆ ಮಾಡಿಕೋ. ಮತ್ತು ಚಾತುರ್ವರ್ಣ್ಯದ ಮತ್ತು ನಾಲ್ಕು ಆಶ್ರಮಗಳ ವಿಧ್ಯುಕ್ತವಾದ ಧರ್ಮಗಳನ್ನು ಅವನಿಂದ ಶಾಸ್ತ್ರಗಳಲ್ಲಿ ಹೇಳಿರುವಂತೆ ಕೇಳುವವನಾಗು.

**ಜೀವನ್ಮುಕ್ತಃ ಸ ರಾಜರ್ಷಿರ್ಬ್ರಹ್ಮಜ್ಞಾನಮತಿಃ ಶುಚಿಃ ।**
**ತಥ್ಯವಕ್ತಾತಿಶಾಂತಶ್ಚ ಯೋಗೀ ಯೋಗಪ್ರಿಯಃ ಸದಾ ॥೪೮॥**

ಆ ದೊರೆಯು ರಾಜರ್ಷಿಯು ಎಂದರೆ, ಎಲ್ಲ ಬಗೆಯ ಸುಖಸಾಧನಗಳು ಸ್ವಾಧೀನವಾಗಿದ್ದರೂ, ವಿಷಯಲೋಲುಪನಾಗದೆ, ಧರ್ಮವ್ರತನಿಯಮಗಳನ್ನು ಪಾಲಿಸಿಕೊಂಡಿರುವವನು; ಜೀವನ್ಮುಕ್ತನು ಎಂದರೆ, ವೇದಾಂತಿಯಾದರೂ ವ್ಯವ ಹಾರವನ್ನು ಬಿಡದೆ ಸನ್ಯಾಸಿಯಾಗದೆ, ನಿಷ್ಕಾಮಕರ್ಮಾಚರಣೆಯಲ್ಲಿರುವವನು; ಬ್ರಹ್ಮಜ್ಞಾನಿಯು, ಆಚಾರವಂತನು, ಯಾವಾಗಲೂ ಸತ್ಯವನ್ನೇ ನುಡಿಯುವವನು, ಯಾವಾಗಲೂ ಶಾಂತವಾಗಿರುವ ಮನಸ್ಸುಳ್ಳವನು, ಸ್ವತಃ ಯೋಗಿಯು, ಯೋಗದಲ್ಲಿ ಯಾವಾಗಲೂ ಆಸಕ್ತಿಯುಳ್ಳವನೂ ಆಗಿದ್ದಾನೆ.

|| ಸೂತ ಉವಾಚ ||

**ತಚ್ಛ್ರುತ್ವಾ ವಚನಂ ತಸ್ಯ ವ್ಯಾಸಸ್ಯಾಮಿತತೇಜಸಃ ।**
**ಪ್ರತ್ಯುವಾಚ ಮಹಾತೇಜಾಃ ಶುಕಶ್ಚಾರಣಿಸಂಭವಃ ॥೪೯॥**

ಸೂತನು ಹೇಳಿದನು--ಮಹಾತೇಜಸ್ಸುಳ್ಳ ಆ ವ್ಯಾಸಋಷಿಯ ಮಾತನ್ನು ಕೇಳಿ, ಅರಣಿಸಂಭೂತನಾದುದರಿಂದ ಪವಿತ್ರವಾದ ಜನ್ಮವುಳ್ಳ, ತೇಜಸ್ವಿಯಾದ ಶುಕನು ಪ್ರತ್ಯುತ್ತರವನ್ನು ಹೇಳಿದನು.

**ದಂಭೋಽಯಂ ಕಿಲ ಧರ್ಮಾತ್ಮನ್ ಭಾತಿ ಚಿತ್ತೇ ಮಮಾಧುನಾ ।**
**ಜೀವನ್ಮುಕ್ತೋ ವಿದೇಹಶ್ಚ ರಾಜ್ಯಂ ಶಾಸ್ತಿ ಮುದಾನ್ವಿತಃ ॥೫೦॥**

ಎಲೈ ಧರ್ಮಾತ್ಮನೇ, ಆ ಜನಕರಾಜನು ಜೀವನ್ಮುಕ್ತನಾದವನು ಎಂದರೆ ಕಾಮಕ್ರೋಧಾದಿರಹಿತನೂ, ವೈರಾಗ್ಯಯುಕ್ತನೂ, ದೇಹಾಭಿಮಾನವಿಲ್ಲದವನೂ ಆಗಿದ್ದು ಸಂತೋಷದಿಂದ ರಾಜ್ಯಭಾರಮಾಡುವುದೆಂದರೆ, ಇದು ಕೇವಲ ಡಂಭಾಚಾರವಾಗಿರಬೇಕೆಂದು ನನ್ನ ಮನಸ್ಸಿಗೆ ಈಗ ತೋರುತ್ತಿದೆ.

**ವಂಧ್ಯಾಪುತ್ರ ಇವಾಭಾತಿ ರಾಜಾಸೌ ಜನಕಃ ಪಿತಃ ।**
**ಕುರ್ವನ್ ರಾಜ್ಯಂ ವಿದೇಹಃ ಕಿಂ ಸಂದೇಹೋಽಯಂ ಮಮಾದ್ಭುತಃ ॥**

ಓ ತಂದೆಯೇ, ಈ ಜನಕನೆಂಬ ರಾಜನು ನಿಜವಾಗಿಯೂ ಜೀವನ್ಮುಕ್ತನಾಗಿರುವುದು, ಬಂಜೆಯ ಮಗನಂತೆ ವಾಸ್ತವವಾದುದಲ್ಲವೆಂದು ಕಾಣುತ್ತದೆ. ಏಕೆಂದರೆ ಇದು ಪರಸ್ಪರ ವಿರುದ್ಧಧರ್ಮದಿಂದ ಕೂಡಿರುತ್ತದೆ. ದೇಹಾಭಿಮಾನವಿಲ್ಲದವನು ರಾಜ್ಯಭಾರವನ್ನು ನಿರ್ವಾಹಮಾಡುತ್ತಿರುವುದೆಂದರೆ ನನಗೆ ಇದು ಸ್ವಾಭಾವಿಕವಾಗಿಲ್ಲದೆ ಮಹಾ ಆಶ್ಚರ್ಯಕರವಾದ ಸಂಶಯವಾಗಿದೆ.

**ದ್ರಷ್ಟುಮಿಚ್ಛಾಮ್ಯಹಂ ಭೂಪಂ ವಿದೇಹಂ ನೃಪಸತ್ತಮಂ ।**
**ಕಥಂ ತಿಷ್ಠತಿ ಸಂಸಾರೇ ಪದ್ಮಪತ್ರಮಿವಾಂಭಸಿ ॥೫೨॥**

ನೀರಿನಲ್ಲಿದ್ದರೂ ತಾವರೆ ಎಲೆಯು ಜಲಸಂಪರ್ಕವಿಲ್ಲದಿರುವಂತೆ, ಈ ದೊಡ್ಡ ಸಂಸಾರದಲ್ಲಿ ಇದ್ದರೂ ಅವನು ಹೇಗೆ ಜೀವನ್ಮುಕ್ತನಾಗಿರುತ್ತಾನೆ ? ಆದುದರಿಂದ ಈ ವಿದೇಹದೇಶಕ್ಕೆ ದೊರೆಯಾದ, ರಾಜರಲ್ಲಿ ಉತ್ತಮನಾದ, ಜನಕನನ್ನು ನೋಡಲು ಅಪೇಕ್ಷಿಸುತ್ತೇನೆ.

**ಸಂದೇಹೋಽಯಂ ಮಹಾಂಸ್ತಾತ ವಿದೇಹೇ ಪರಿವರ್ತತೇ ।**
**ಮೋಕ್ಷಃ ಕಿಂ ವದತಾಂ ಶ್ರೇಷ್ಠ ಸೌಗತಾನಾಮಿವಾಪರಃ ॥೫೩॥**

ಓ ತಂದೆಯೇ, ಈ ವಿದೇಹರಾಜನ ಜೀವನ್ಮುಕ್ತಿ ಸ್ಥಿತಿಯ ವಿಚಾರದಲ್ಲಿ ನನಗೆ ದೊಡ್ಡ ಸಂಶಯ ಉಂಟಾಗಿದೆ. ತತ್ತ್ವಗಳನ್ನು ವಿವರಿಸುವುದರಲ್ಲಿ ಗಟ್ಟಿಗನಾದ ತಂದೆಯೇ, ಬೌದ್ಧರಲ್ಲಿ ಕೆಲವರು ಹೇಳುವಂತೆ, ಎಂದರೆ, ಇಲ್ಲಿ ಸುಖಪಟ್ಟಮೇಲೆ ದೇಹನಾಶವೇ ಮೋಕ್ಷವೇ? ಅಥವಾ ಬೇರೆ ವಿಧವಾದ ಮೋಕ್ಷವೇನಾದರೂ ಉಂಟೇ?

**ಕಥಂ ಭುಕ್ತಮಭುಕ್ತಂ ಸ್ಯಾದಕೃತಂ ಚ ಕೃತಂ ಕಥಂ ।**
**ವ್ಯವಹಾರಃ ಕಥಂ ತ್ಯಾಜ್ಯ ಇಂದ್ರಿಯಾಣಾಂ ಮಹಾಮತೇ ॥೫೪॥**

ಮಹಾಬುದ್ಧಿಶಾಲಿಯಾದ ತಂದೆಯೇ, ಒಂದು ವಸ್ತುವನ್ನು ನಾವು ತಿಂದರೆ ಅಥವಾ ಅನುಭವಿಸಿದರೆ ಅದನ್ನು ತಿಂದೂ, ತಿನ್ನಲಿಲ್ಲವೆಂದು ಹೇಗೆ ಹೇಳಲಾದೀತು? ಅದರಂತೆಯೇ, ಮಾಡದಿರುವ ಕೆಲಸವನ್ನು ಮಾಡಿರುವಂತೆ ಹೇಗೆ ಭಾವಿಸಲಾದೀತು? ಇದು ಪರಸ್ಪರ ವಿರುದ್ಧ ಧರ್ಮವು. ಇದು ಒಂದೇ ಕಾಲದಲ್ಲಿ ಒಂದೇ ವಸ್ತುವಿನಲ್ಲಿ ಇರುವುದು ಸಮಂಜಸವಲ್ಲವು. ಮನುಷ್ಯನಿಗೆ ಚಕ್ಷುರಾದಿ ಇಂದ್ರಿಯಗಳು ಇರುವಾಗ ಅವುಗಳಿಂದ ಉಂಟಾಗುವ ಭೇದವ್ಯವಹಾರವನ್ನು ಬಿಡಲು ಹೇಗೆ ಸಾಧ್ಯ?

**ಮಾತಾ ಪುತ್ರಸ್ತಥಾ ಭಾರ್ಯಾ ಭಗಿನೀ ಕುಲಟಾ ತಥಾ ।**
**ಭೇದಾಭೇದಃ ಕಥಂ ನ ಸ್ಯಾದ್ವ್ಯದ್ವೈತನ್ಮುಕ್ತತಾ ಕಥಂ ॥೫೫॥**

ತಾಯಿ, ಮಗ, ಹಾಗೆಯೇ ಹೆಂಡತಿ, ತಂಗಿ, ಹಾಗೆಯೇ ಸೂಳೆ ಎಂದು ಮುಂತಾದ ಭೇದವ್ಯವಹಾರವೂ ಒಂದೇ ವ್ಯಕ್ತಿಯಲ್ಲಿ ಅನೇಕ ದ್ರಷ್ಟೃಗಳ ದೃಷ್ಟಿ ಭೇದದಿಂದ ಅಭೇದಭಾವನೆಯೂ, ಹೇಗೆ ಉಂಟಾಗದೇ ಹೋದಾವು? ಇವೆರಡೂ ಇರುವುದಾದರೆ, ಎಂದರೆ ಭೇದವ್ಯವಹಾರವೂ ಪಾರಮಾರ್ಥಿಕವಾಗಿ ಕಡೆಗೂ ಸತ್ಯವಾಗಿರುವುದಾದರೆ, ಮೋಕ್ಷವು ಎಂದರೆ, ಪಾರಮಾರ್ಥಿಕವಾದ ಅಭೇದಾನುಭವವು, ಪರತತ್ತ್ವವು ಮಾತ್ರ ಒಂದೇ ಆದುದರಿಂದ ಭೇದವ್ಯವಹಾರವೆಲ್ಲವೂ ಔಪಾಧಿಕವೂ ಮಾಯಿಕವೂ, ಅಸತ್ಯವೂ ಆಗಿರಬೇಕು ಎಂಬ ನಿಶ್ಚಯವು, ಹೇಗೆ ಸಂಭವಿಸೀತು? ಭೇದವ್ಯವಹಾರವೇ ಸಂಸಾರವು. ಸಂಸಾರವೂ ಮೋಕ್ಷವೂ ಪರಸ್ಪರ ವಿರುದ್ಧ ಸ್ಥಿತಿಗಳು. ಅವೆರಡೂ ಕತ್ತಲೆ ಬೆಳಕುಗಳಂತೆ ಒಬ್ಬರಿಗೇ ಒಂದೇ ಕಾಲದಲ್ಲಿರುವುದು ಅಸಂಭವವು ಎಂದು ತಾತ್ಪರ್ಯವು.

ಇಲ್ಲಿ "ಭೇದಬೋಧಃ" ಎಂದು ಪಾಠವು ಸೂಕ್ತವಾಗಿರುವಂತೆ ತೋರುತ್ತದೆ. ನಾನಾಬಗೆಯ ವಸ್ತುಗಳಲ್ಲೂ ವ್ಯಕ್ತಿಗಳೊಡನೆಯೂ ವ್ಯವಹರಿಸುತ್ತಿರುವವನಿಗೆ ಭೇದ ಜ್ಞಾನವು ಹೇಗೆ ಉಂಟಾಗದೆ ಇದ್ದೀತು? ಭೇದಜ್ಞಾನವಿರುವಾಗ ಎಂದರೆ ಅಭೇದ ಜ್ಞಾನವೂ, ಬ್ರಹ್ಮಾತ್ಮೈಕ್ಯಜ್ಞಾನವೂ, ಬ್ರಹ್ಮಸತ್ಯಂ ಜಗನ್ಮಿಥ್ಯಾ ಎಂಬ ಜ್ಞಾನವೂ, ಇಲ್ಲದಿರುವಾಗ, ಮುಕ್ತಿಯು ಹೇಗೆ ಉಂಟಾದೀತು? ಎಂದು ಭಾವವು. ಈ ವಿವರಣೆಯು ಈ ಪ್ರಕರಣಕ್ಕೆ ಹೆಚ್ಚಾಗಿ ಹೊಂದಿಕೊಂಡಿರುತ್ತದೆ.

**ಕಟುಃ ಕ್ಷಾರಂ ತಥಾ ತೀಕ್ಷ್ಣಂ ಕಷಾಯಂ ಮಿಷ್ಟಮೇವ ಚ ।**
**ರಸನಾ ಯದಿ ಜಾನಾತಿ ಭುಂಕ್ತೇ ಭೋಗಾನನುತ್ತಮಾನ್ ॥೫೬॥**

ಸಿಹಿ, ಉಪ್ಪು, ಕಾರ, ಒಗರು, ಸಿಹಿ ಮೊದಲಾದ ಷಡ್ರಸಗಳ ರುಚಿಯನ್ನು ನಾಲಗೆಯು ತಿಳಿದಲ್ಲಿ, ಎಲ್ಲ ಬಗೆಯ ರಸಗಳಿಂದ ಕೂಡಿದ ಉತ್ತಮವಾದ ಭೋಜನ ವನ್ನು ಮಾಡಲು ಶಕ್ತನಾಗುತ್ತಾನೆ. ಐಹಿಕಸುಖವು ಅರ್ಥಭೇದದಿಂದ ಕೂಡಿಯೇ ಇದೆ.

**ಶೀತೋಷ್ಣಸುಖದುಃಖಾದಿಪರಿಜ್ಞಾನಂ ಯದಾ ಭವೇತ್ ।**
**ಮುಕ್ತತಾ ಕೀದೃಶೀ ತಾತ ಸಂದೇಹೋಽಯಂ ಮಮಾದ್ಭುತಃ ॥೫೭॥**

ಶೀತೋಷ್ಣ, ಸುಖದುಃಖ ಮುಂತಾದ ದ್ವಂದ್ವಗಳ ಜ್ಞಾನವು ಇರುವವರಿ ವಿಗೂ ಮುಕ್ತಿಸ್ಥಿತಿಯು ಹೇಗೆತಾನೆ ಉಂಟಾದೀತು? ಎಂದರೆ, ಬಾಹ್ಯವಸ್ತುವಿನ ಜ್ಞಾನವೂ, ಅದರಿಂದ ಸುಖದುಃಖಗಳ ಅರಿವೂ ಇರುವವರೆಗೂ ಇಂದ್ರಿಯವೃತ್ತಿಗ ಳಿರಲೇಬೇಕು. ಇಂದ್ರಿಯವೃತ್ತಿಗಳಿರುವವರೆಗೂ ದೇಹಾಭಿಮಾನವಿರುವುದರಿಂದ ಮುಕ್ತಿಸ್ಥಿತಿಯು ಹೇಗೆ ಉಂಟಾದೀತು? ಈ ವಿಚಾರದಲ್ಲಿ ನನಗೆ ಸಂದೇಹವೂ ಆಶ್ಚ ರ್ಯವೂ ಉಂಟಾಗಿದೆ.

**ಶತ್ರುಮಿತ್ರಪರಿಜ್ಞಾನಂ ವೈರ ಪ್ರೀತಿಕರಂ ಸದಾ ।**
**ವ್ಯವಹಾರೇ ಪರೇ ತಿಷ್ಠನ್ ಕಥಂ ನ ಕುರುತೇ ನೃಪಃ ॥೫೮॥**

ಶತ್ರುವೆಂಬ ಪರಿಜ್ಞಾನದಲ್ಲಿ ವೈರವೂ, ಮಿತ್ರನೆಂದು ತಿಳಿದರೆ ಪ್ರೀತಿಯೂ ಉಂಟಾಗುವುದು ಸಹಜವು. ಲೋಕವ್ಯವಹಾರದಲ್ಲಿ ವರ್ತಿಸುತ್ತಿದ್ದರೂ ಆ ರಾಜನು ಹೇಗೆ ಅವುಗಳ ಸಂಪರ್ಕವಿಲ್ಲದಿರುವನು?

**ಚೌರಂ ವಾ ತಾಪಸಂ ವಾಪಿ ಸಮಾನಂ ಮನ್ಯತೇ ಕಥಂ ।**
**ಅಸಮಾ ಯದಿ ಬುದ್ಧಿಸ್ಸ್ಯಾನ್ಮುಕ್ತತಾ ತರ್ಹಿ ಕೀದೃಶೀ ॥೫೯॥**

ನೀಚವೃತ್ತಿಯಿಂದಿರುವ ಕಳ್ಳನನ್ನೂ, ಸಾಧುವಾದ ತಪಸ್ವಿಯನ್ನೂ, ರಾಜ್ಯ ಭಾರಮಾಡುವವನು ಹೇಗೆ ಸಮಭಾವನೆಯಿಂದ ಕಾಣಲಾದೀತು? ಸಮಬುದ್ಧಿಯಿಲ್ಲದೆ ಇವರುಗಳಿಗೆ ವ್ಯತ್ಯಾಸವನ್ನು ತಿಳಿದು ಅದರಂತೆ ಆಚರಿಸತಕ್ಕವನು, ಸಮಭಾವನೆಯಿಲ್ಲದ್ದರಿಂದ ಅವನು ಹೊಂದಿರುವ ಸ್ಥಿತಿಯು ಮುಕ್ತಿಸ್ಥಿತಿಯು ಹೇಗಾದೀತು? ಅದು ಮುಕ್ತಿಸ್ಥಿತಿಯೇ ಅಲ್ಲವೆಂದು ಅಭಿಪ್ರಾಯವು. ಭೇದಭಾವನೆಯೂ ವ್ಯವಹಾರವೂ ಇರುವವರೆಗೂ ಮುಕ್ತಿಸ್ಥಿತಿಯು ಉಂಟಾಗುವುದು ಅಸಾಧ್ಯವೆಂದು ಅಭಿಪ್ರಾಯವು.

**ದೃಷ್ಟಪೂರ್ವೋ ನ ಮೇ ಕಶ್ಚಿಜ್ಜೀವನ್ಮುಕ್ತಶ್ಚ ಭೂಪತಿಃ ।**
**ಶಂಕೇಯಂ ಮಹತೀ ತಾತ ಗೃಹೇ ಮುಕ್ತಃ ಕಥಂ ನೃಪಃ ॥೬೦॥**

ಓ ತಂದೆಯೇ, ಈ ವಿಧವಾದ ಜೀವನ್ಮುಕ್ತನೆಂದು ಹೇಳಲ್ಪಡುವ ರಾಜನನ್ನು ನಾನು ಇದುವರೆಗೆ ಎಲ್ಲಿಯೂ ಕಾಣೆನು. ಗೃಹಸ್ಥಾಶ್ರಮದಲ್ಲಿದ್ದು ವ್ಯವಹರಿಸುತ್ತಿದ್ದರೂ ಈ ರಾಜನು ಹೇಗೆ ಮುಕ್ತನಾಗಿದ್ದಾನೆಂಬುದು ನನಗೆ ದೊಡ್ಡ ಸಂಶಯವುಂಟಾಗಿದೆ.

**ದಿದೃಕ್ಷಾ ಮಹತೀ ಜಾತಾ ಶ್ರುತ್ವಾ ತಂ ಭೂಪತಿಂ ತಥಾ ।**
**ಸಂದೇಹವಿನಿವೃತ್ತ್ಯರ್ಥಂ ಗಚ್ಛಾಮಿ ಮಿಥಿಲಾಂ ಪ್ರತಿ ॥೬೧॥**

ಈ ವಿಧವಾದ ರಾಜನ ವಿಷಯವನ್ನು ಕೇಳಿ ಅವನನ್ನು ನೋಡಬೇಕೆಂದು ನನಗೆ ಕುತೂಹಲವು ಬಹಳವಾಗಿ ಉಂಟಾಗಿದೆ. ಆದುದರಿಂದ ನನ್ನ ಸಂಶಯಗಳನ್ನು ಪರಿಹರಿಸಿಕೊಳ್ಳುವುದಕ್ಕೋಸ್ಕರ ಮಿಥಿಲಾನಗರವನ್ನು ಕುರಿತು ಹೊರಡುತ್ತೇನೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಷೋಡಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀರಸ್ತು ॥

॥ ಶ್ರೀಃ ॥

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

॥ ಸಪ್ತದಶೋಽಧ್ಯಾಯಃ ॥

### ಹದಿನೇಳನೆಯ ಅಧ್ಯಾಯವು

॥ ಓಂ ॥

॥ ಸೂತ ಉವಾಚ ॥

**ಇತ್ಯುಕ್ತ್ವಾ ಪಿತರಂ ಪುತ್ರಃ ಪಾದಯೋಃ ಪತಿತಃ ಶುಕಃ ।**
**ಬದ್ಧಾಂಜಲಿರುವಾಚೇದಂ ಗಂತುಕಾಮೋ ಮಹಾಮನಾಃ ॥೧॥**

ಸೂತನು ಹೇಳಿದನು —ಈ ರೀತಿಯಾಗಿ ಮಹಾಬುದ್ಧಿಯುಳ್ಳ ಪುತ್ರನಾದ ಶುಕಋಷಿಯು ತಂದೆಗೆ ಹೇಳಿ ಅವನ ಪಾದಗಳಿಗೆ ಮಣಿದು, ನಮಸ್ಕಾರಮಾಡಿ, ಮಿಥಿಲಾನಗರಕ್ಕೆ ಹೊರಡಲುದ್ಯುಕ್ತನಾಗಿ ಮುಕುಳಿತಹಸ್ತನಾಗಿ ಪುನಃ ಈ ರೀತಿ ಹೇಳಿದನು.

**ಆಪೃಚ್ಛೇ ತ್ವಾಂ ಮಹಾಭಾಗ ಗ್ರಾಹ್ಯಂ ತೇ ವಚನಂ ಮಯಾ ।**
**ವಿದೇಹಾನ್ ದ್ರಷ್ಟುಮಿಚ್ಛಾಮಿ ಪಾಲಿತಾನ್ ಜನಕೇನ ತು ॥೨॥**

ಎಲೈ ಮಹಾಮಹಿಮನೇ, ನೀನು ಹೇಳಿದ ಮಾತನ್ನೆಲ್ಲಾ ನಾನು ಸಾವಧಾನವಾಗಿ ಗ್ರಹಣಮಾಡಿದೆನು. ಜನಕಮಹಾರಾಜನಿಂದ ಪರಿಪಾಲಿತವಾದ ವಿದೇಹ ರಾಜ್ಯವನ್ನು ನೋಡುವ ಇಚ್ಛೆಯುಳ್ಳವನಾಗಿದ್ದೇನೆ. ಆದುದರಿಂದ ನಿನ್ನ ಅನುಜ್ಞೆಯನ್ನು ಬೇಡುವೆನು.

**ವಿನಾ ದಂಡಂ ಕಥಂ ರಾಜ್ಯಂ ಕರೋತಿ ಜನಕಃ ಕಿಲ ।**
**ಧರ್ಮೇಣ ವರ್ತತೇ ಲೋಕೋ ದಂಡಶ್ಚೇನ್ನ ಭವೇದ್ಯದಿ ॥೩॥**

ಈ ಜನಕರಾಜನು ದುಷ್ಟನಿಗ್ರಹರೂಪವಾದ ಶಿಕ್ಷೆಯನ್ನು ವಿಧಿಸದೆ ರಾಜ್ಯಭಾರವನ್ನು ಹೇಗೆ ಮಾಡುವನು? ದುಷ್ಕೃತ್ಯಕ್ಕೆ ಶಿಕ್ಷೆಯ ಭಯವಿಲ್ಲದಿದ್ದರೆ ಲೋಕದಲ್ಲಿ ಜನರು ಅಧರ್ಮವನ್ನು ಬಿಟ್ಟು ಧರ್ಮದಲ್ಲಿ ವರ್ತಿಸುವವರಾಗಲಾರರು.

**ಧರ್ಮಸ್ಯ ಕಾರಣಂ ದಂಡೋ ಮನ್ವಾದಿಪ್ರಹಿತಃ ಸದಾ ।**
**ಸ ಕಥಂ ವರ್ತತೇ ತಾತ ಸಂಶಯೋಽಯಂ ಮಹಾನ್ಮಮ ॥೪॥**

ಮನುವೇ ಮೊದಲಾದ ಧರ್ಮಶಾಸ್ತ್ರಕಾರರು, ಶಿಕ್ಷೆಯ ಭಯವೇ ಜನರನ್ನು ಯಾವಾಗಲೂ ಧರ್ಮಮಾರ್ಗದಲ್ಲಿರುವಂತೆ ಮಾಡಲು ಕಾರಣವಾದುದು ಎಂದು ಹೇಳಿದ್ದಾರೆ. ಆದುದರಿಂದ ದಂಡಪ್ರಯೋಗಮಾಡದೆ ಆ ಜನಕನು ಹೇಗೆ ರಾಜ್ಯಭಾರಮಾಡುವನು? ಇದು ನನಗೆ ಮಹತ್ತರವಾದ ಸಂಶಯವು.

**ಮಮ ಮಾತಾ ಸ್ತ್ರಿಯಂ ವಂಧ್ಯಾ ತದ್ವದ್ಭಾತಿ ವಿಚೇಷ್ಟಿತಂ ।**
**ಪೃಚ್ಛಾಮಿ ತ್ವಾಂ ಮಹಾಭಾಗ ಗಚ್ಛಾಮಿ ಚ ಪರಂತಪ ॥೫॥**

ಎಲೈ ಪುರುಷಶ್ರೇಷ್ಠನೇ, ನನ್ನ ತಾಯಿಯು ಬಂಜೆಯು, ಎಂದು ಹೇಳಿದರೆ, ಅಲ್ಲಿ ಬಂಜೆಯೆಂದರೆ ಮಕ್ಕಳಿಲ್ಲದವಳು ಎಂದರ್ಥವು. ನಾನು ಮಗನಾಗಿರುವಾಗ ತಾಯಿಯು ಬಂಜೆ ಹೇಗಾಗುವಳು? ಮಕ್ಕಳಿದ್ದು ತಾಯಿಯೆಂದಮೇಲೆ ಬಂಜೆಯೆನ್ನುವುದು ಅಸಂಬದ್ಧವಾಗುವುದು. ಅದರಂತೆಯೇ ದಂಡರಹಿತನಾಗಿ ರಾಜ್ಯಭಾರ ಮಾಡುವುದು ಅಸಂಭವವು. ಒಂದುವೇಳೆ ದಂಡಪ್ರಯೋಗಮಾಡಿದಲ್ಲಿ ರಾಗದ್ವೇಷಗಳಿಂದ ಕೂಡಿ ಶಮಾದಿಗುಣರಹಿತನಾಗುವುದರಿಂದ ಜೀವನ್ಮುಕ್ತತ್ವಕ್ಕೆ ಲೋಪಬರುವುದು. ಆದುದರಿಂದ ಈ ವಿಚಾರವನ್ನು ಕೇಳಿ, ನೋಡಿ, ತಿಳಿದುಕೊಂಡು ಬರಲು ನಿನ್ನ ಅನುಮತಿಯನ್ನು ಕೇಳಿ ಪಡೆದು ನಾನು ಹೊರಡಲುದ್ಯುಕ್ತನಾಗಿರುತ್ತೇನೆ.

॥ ಸೂತ ಉವಾಚ ॥

**ತಂ ದೃಷ್ಟ್ವಾ ಗಂತುಕಾಮಂ ಚ ಶುಕಂ ಸತ್ಯವತೀಸುತಃ ।**
**ಆಲಿಂಗ್ಯೋವಾಚ ಪುತ್ರಂ ತಂ ಜ್ಞಾನಿನಂ ನಿಃಸ್ಪೃಹಂ ದೃಢಂ ॥೬॥**

ಸೂತನು ಹೇಳಿದನು—ಸತ್ಯವತಿಯ ಪುತ್ರನಾದ ವ್ಯಾಸಋಷಿಯು ತಿಳಿವಳಿಕೆಯುಳ್ಳವನೂ, ಆಶೆಗಳಿಗೆ ಅಧೀನನಾಗದಿರುವವನೂ ಆಗಿರುವ, ಹೊರಡಲುದ್ಯುಕ್ತ

ನಾಗಿ ನಿಂತಿರುವ, ತನ್ನ ಪುತ್ರನಾದ ಶುಕನನ್ನು ಪ್ರೀತಿಯಿಂದ ಆಲಿಂಗನಮಾಡಿ ಕೊಂಡು ಈರೀತಿ ಹೇಳಿದನು.

|| ವ್ಯಾಸ ಉವಾಚ ||

**ಸ್ವಸ್ತ್ಯಸ್ತು ಶುಕ ದೀರ್ಘಾಯುರ್ಭವ ಪುತ್ರ ಮಹಾಮತೇ ।**
**ಸತ್ಯಾಂ ವಾಚಂ ಪ್ರದತ್ವಾ ಮೇ ಗಚ್ಛ ತಾತ ಯಥಾಸುಖಂ ॥೭॥**

ವ್ಯಾಸನು ಹೇಳಿದನು—ಎಲೈ ಮಹಾಬುದ್ಧಿಶಾಲಿಯಾದ ಶುಕಕುಮಾರನೇ, ನಿನಗೆ ಮಂಗಳವಾಗಲಿ, ದೀರ್ಘಾಯುಷ್ಮಂತನಾಗು, ಎಲೈ ನನ್ನ ಪ್ರಿಯಪುತ್ರನೇ ಪುನಃ ಬರುವೆನೆಂದು ನನಗೆ ಮಾತುಕೊಟ್ಟು ಸುಖವಾಗಿ ಹೋಗಿ ಬಾ.

**ಆಗಂತವ್ಯಂ ಪುನರ್ಗತ್ವಾ ಮಮಾಶ್ರಮಮನುತ್ತಮಂ ।**
**ನ ಕುತ್ರಾಪಿ ಚ ಗಂತವ್ಯಂ ತ್ವಯಾ ಪುತ್ರ ಕಥಂಚನ ॥೮॥**

ಪ್ರಿಯಕುಮಾರನೇ, ಮಿಥಿಲಾನಗರಕ್ಕಲ್ಲದೆ ಬೇರೆ ಎಲ್ಲಿಗೂ ಹೋಗಬೇಡ. ಪುನಃ ಶ್ರೇಷ್ಠವಾದ ನಮ್ಮಾಶ್ರಮಕ್ಕೇ ಹಿಂತಿರುಗಿ ಬರುವವನಾಗು.

**ಸುಖಂ ಜೀವಾಮಿ ಪುತ್ರಾಹಂ ದೃಷ್ಟ್ವಾ ತೇ ಮುಖಪಂಕಜಂ ।**
**ಅಪಶ್ಯನ್ ದುಃಖಮಾಪ್ನೋಮಿ ಪ್ರಾಣಸ್ತ್ವಮಸಿ ಮೇ ಸುತ ॥೯॥**

ಪ್ರಿಯಪುತ್ರನೇ, ನಿನ್ನ ಮುಖಕಮಲವನ್ನು ನೋಡಿಕೊಂಡು ನಾನು ಸುಖ ವಾಗಿದ್ದೇನೆ. ನಿನ್ನನ್ನು ನೋಡದಿದ್ದರೆ ನನಗೆ ಬಹು ದುಃಖವಾಗುವುದು. ನೀನೇ ನನ್ನ ಪ್ರಾಣವು ಎಂದರೆ, ಪ್ರಾಣಕ್ಕಿಂತಲೂ ಪ್ರಿಯನಾಗಿರುವೆ.

**ದೃಷ್ಟ್ವಾ ತ್ವಂ ಜನಕಂ ಪುತ್ರ ಸಂದೇಹಂ ವಿನಿವರ್ತ್ಯ ಚ ।**
**ಅತ್ರಾಗತ್ಯ ಸುಖಂ ತಿಷ್ಠ ವೇದಾಧ್ಯಯನತತ್ಪರಃ ॥೧೦॥**

ಎಲೈ ಕುಮಾರನೇ, ನೀನು ಜನಕಮಹೀಪತಿಯನ್ನು ನೋಡಿ ಅವನಿಂದ ನಿನ್ನ ಸಂದೇಹಗಳನ್ನು ಪರಿಹರಿಸಿಕೊಂಡು, ಪುನಃ ಇಲ್ಲಿಗೆ ಹಿಂತಿರುಗಿ ಬಂದು, ವೇದಾಧ್ಯಯನಮಾಡುತ್ತಾ ವರ್ಣಾಶ್ರಮಧರ್ಮಗಳನ್ನು ಆಚರಿಸುತ್ತಾ ಸುಖವಾಗಿರು.

|| ಸೂತ ಉವಾಚ ||

**ಇತ್ಯುಕ್ತಃ ಸೋಽಭಿವಾದ್ಯಾರ್ಯಂ ಕೃತ್ವಾ ಚೈವ ಪ್ರದಕ್ಷಿಣಂ ।**
**ಚಲಿತಸ್ತರಸಾಽತೀವ ಧನುರ್ಮುಕ್ತಃ ಶರೋ ಯಥಾ ॥೧೧॥**

ಸೂತನು ಹೇಳಿದನು—ಹೀಗೆ ತಂದೆಯು ಹೇಳಿದ ಮೇಲೆ ಪೂಜ್ಯನಾದ ತನ್ನ ತಂದೆಯನ್ನು ಪ್ರದಕ್ಷಿಣಪೂರ್ವಕವಾಗಿ ನಮಸ್ಕಾರಮಾಡಿ, ಬಿಲ್ಲಿನಿಂದ ಹೊರಟ ಬಾಣದಂತೆ, ಶುಕನು ಅತಿತ್ವರಿತಗತಿಯಿಂದ ಅಲ್ಲಿಂದ ಹೊರಟನು

**ಸಂಪಶ್ಯನ್ವಿವಿಧಾನ್ ದೇಶಾನ್ ಲೋಕಾಂಶ್ಚ ವಿತ್ತಧರ್ಮಿಣಃ ।**
**ವನಾನಿ ಪಾದಪಾಂಶ್ಚೈವ ಕ್ಷೇತ್ರಾಣಿ ಫಲಿತಾನಿ ಚ ॥೧೨॥**

ಹೀಗೆ ಹೊರಟ ಶುಕಮುನಿಯು ದಾರಿಯಲ್ಲಿ ಪ್ರಯಾಣಮಾಡುತ್ತಾ, ನಾನಾ ವಿಧವಾದ ದೇಶಗಳನ್ನೂ, ಆಯಾ ದೇಶದ ಧನಸಂಪನ್ನರೂ, ಧರ್ಮಸಂಪನ್ನರೂ ಆದ ಜನಗಳನ್ನೂ ವನಗಳನ್ನೂ ವಿವಿಧವೃಕ್ಷಗಳನ್ನೂ ಫಲದಿಂದ ಕೂಡಿ ಮನೋಹರ ವಾದ ಭೂಮಿಯನ್ನೂ ನೋಡುತ್ತಾ ಪ್ರಯಾಣಮಾಡುತ್ತಿದ್ದನು.

**ತಾಪಸಾಂಸ್ತಪ್ಯಮಾನಾಂಶ್ಚ ಯಾಜಕಾನ್ ದೀಕ್ಷಯಾನ್ವಿತಾನ್ ।**
**ಯೋಗಾಭ್ಯಾಸರತಾನ್ ಯೋಗಿವಾನಪ್ರಸ್ಥಾನ್ವನೌಕಸಃ ॥೧೩॥**

ದಾರಿಯುದ್ದಕ್ಕೂ ಅಲ್ಲಲ್ಲಿ ತಪಸ್ಸನ್ನು ಮಾಡುತ್ತಿರುವ ತಪಸ್ವಿಗಳನ್ನೂ, ಯಜ್ಞ ದೀಕ್ಷೆಯಿಂದ ಕೂಡಿ ಯಜ್ಞವನ್ನು ಮಾಡುವ ಮತ್ತು ಮಾಡಿಸುವ ಗೃಹಸ್ಥಧರ್ಮದಲ್ಲಿ ರುವ ಜನರನ್ನೂ, ಯೋಗಾಭ್ಯಾಸದಲ್ಲಿ ಆಸಕ್ತರಾಗಿರುವವರನ್ನೂ, ಮತ್ತು ವನವಾಸಿ ಗಳಾದ, ಯೋಗಸಿದ್ಧಿಯನ್ನು ಪಡೆದಿರುವ ವಾನಪ್ರಸ್ಥಧರ್ಮದಲ್ಲಿರುವ ಜನರನ್ನೂ, ಹೀಗೆ ವರ್ಣಾಶ್ರಮಧರ್ಮಗಳನ್ನು ಆಚರಿಸುತ್ತಿರುವ ಜನಗಳನ್ನೂ ನೋಡಿದನು.

**ಶೈವಾನ್ ಪಾಶುಪತಾಂಶ್ಚೈವ ಸೌರಾಂಛಾಕ್ತಾಂಶ್ಚ ವೈಷ್ಣವಾನ್ ।**
**ವೀಕ್ಷ್ಯ ನಾನಾವಿಧಾನ್ ಧರ್ಮಾನ್ ಜಗಾಮಾತಿಸ್ಮಯನ್ಮುನಿಃ ॥೧೪॥**

ಶಿವನೇ ಪುರುಷೋತ್ತಮನೆಂದೂ ಪರತತ್ತ್ವವೆಂದೂ ನಂಬಿರುವ ಶೈವಮಾರ್ಗ ಪ್ರವರ್ತಕರನ್ನೂ, ಪಾಶುಪತೀಯರನ್ನೂ, ಸೂರ್ಯನೇ ಸರ್ವೋತ್ಕೃಷ್ಟನೆಂದು ನಂಬಿ ರುವ ಸೌರಮತೀಯರನ್ನೂ, ಶಕ್ತಿಯೇ ಪರದೇವತೆ ಎಂದು ನಂಬಿರುವ ಶಾಕ್ತರನ್ನೂ, ವಿಷ್ಣುವೇ ಸರ್ವೋತ್ತಮನೆಂದು ನಂಬಿರುವ ವಿಷ್ಣುಭಕ್ತರನ್ನೂ, ಇನ್ನೂ ನಾನಾವಿಧ ಗಳಾದ ಧರ್ಮಾಭಿಮಾನಿಗಳನ್ನೂ ನೋಡುತ್ತಾ ಅತಿ ವಿಸ್ಮಯಪಡುತ್ತಾ ಶುಕನು ಮಾರ್ಗಾತಿಕ್ರಮಣಮಾಡಿದನು.

**ವರ್ಷದ್ವಯೇನ ಮೇರುಂ ಚ ಸಮುಲ್ಲಂಘ್ಯ ಮಹಾಮತಿಃ ।**
**ಹಿಮಾಚಲಂ ಚ ವರ್ಷೇಣ ಜಗಾಮ ಮಿಥಿಲಾಂ ಪ್ರತಿ ॥೧೫॥**

ಬುದ್ಧಿಶಾಲಿಯಾದ ಶುಕಋಷಿಯು ಹೀಗೆ ಪ್ರಯಾಣಮಾಡುತ್ತಾ ಮೇರು ಪರ್ವತವನ್ನು ಎರಡು ವರ್ಷಗಳ ಕಾಲದಲ್ಲೂ, ಹಿಮವತ್ಪರ್ವತವನ್ನು ಒಂದು ವರ್ಷದಲ್ಲೂ ದಾಟಿ ಮಿಥಿಲಾನಗರದ ಕಡೆಗೆ ಪ್ರಯಾಣಮಾಡಿದನು.

**ಪ್ರವಿಷ್ಟೋ ಮಿಥಿಲಾಂ ಮಧ್ಯೇ ಪಶ್ಯನ್ ಸರ್ವರ್ಧಿಮುತ್ತಮಾಂ ।**
**ಪ್ರಜಾಶ್ಚ ಸುಖಿತಾಃ ಸರ್ವಾಃ ಸದಾಚಾರಾಃ ಸುಸಂಸ್ಥಿತಾಃ ॥೧೬॥**

ಆ ಶುಕಮುನಿಯು ಅನಂತರದಲ್ಲಿ ಮಿಥಿಲಾನಗರವನ್ನು ಪ್ರವೇಶಿಸಿ ಮೇಲಾದ ಎಲ್ಲ ಬಗೆಯ ಸಮೃದ್ಧಿಯನ್ನೂ ಆ ನಗರಮಧ್ಯದಲ್ಲಿ ನೋಡುತ್ತಾ, ಅಲ್ಲಿ ಎಲ್ಲ ಪ್ರಜೆಗಳೂ ಸದಾಚಾರಸಂಪನ್ನರಾಗಿಯೂ, ಆತಂಕಗಳಿಲ್ಲದೆ ಸುಖಿಗಳಾಗಿಯೂ ಇರುವುದನ್ನು ನೋಡಿದನು.

**ಕ್ಷತ್ರಾ ನಿವಾರಿತಸ್ತತ್ರ ಕಸ್ತ್ವಮತ್ರ ಸಮಾಗತಃ ।**
**ಕಿಂ ತೇ ಕಾರ್ಯಂ ವದಸ್ವೇತಿ ಪೃಷ್ಟಸ್ತೇನ ನ ಚಾಬ್ರವೀತ್ ॥೧೭॥**

ನಗರದ್ವಾರದಲ್ಲಿ ಆ ಶುಕಮುನಿಯನ್ನು ದ್ವಾರಪಾಲಕನು ತಡೆದು——ನೀನು ಯಾರು ? ಏಕೆ ಇಲ್ಲಿಗೆ ಬಂದಿರುತ್ತೀಯೆ ? ನಿನ್ನ ಕೆಲಸವೇನು ? ಹೇಳೆಂದು ಕೇಳಲು, ಆ ಶುಕನು ಏನನ್ನೂ ಹೇಳದೆ ಸುಮ್ಮನಿದ್ದನು.

**ನಿಸ್ಸೃತ್ಯ ನಗರದ್ವಾರಾತ್ ಸ್ಥಿತಃ ಸ್ಥಾಣುರಿವಾಚಲಃ ।**
**ವಿಸ್ಮಿತೋಽತಿಹಸಂಸ್ತಸ್ಥೌ ವಚೋ ನೋವಾಚ ಕಿಂಚನ ॥೧೮॥**

ಆ ಊರಿನ ಬಾಗಿಲಿನಿಂದ ಹೊರಗೆ ಬಂದು ಕಲ್ಲಿನಂತೆ ಚಲಿಸದೆ ನಿಂತುಕೊಂಡು ಆಶ್ಚರ್ಯದಿಂದ ಅಲ್ಲಿಯೂ ಭೇದವ್ಯವಹಾರವನ್ನು ಕಂಡು ತುಂಬ ನಗುತ್ತಾ ಯಾವ ಮಾತನ್ನೂ ಆಡದೆ ಸುಮ್ಮನೆ ನಿಂತುಕೊಂಡಿದ್ದನು.

॥ ಪ್ರತೀಹಾರ ಉವಾಚ ॥

**ಬ್ರೂಹಿ ಮೂಕೋಽಸಿ ಕಿಂ ಬ್ರಹ್ಮನ್ ಕಿಮರ್ಥಂ ತ್ವಮಿಹಾಗತಃ ।**
**ಚಲನಂ ಚ ವಿನಾ ಕಾರ್ಯಂ ನ ಭವೇದಿತಿ ಮೇ ಮತಿಃ ॥೧೯॥**

ಶುಕಮುನಿಯನ್ನು ಕುರಿತು ದ್ವಾರಪಾಲಕನಿಂತೆಂದನು——ಎಲೈ ಬ್ರಾಹ್ಮಣ ಶ್ರೇಷ್ಠನೇ, ಮಾತಾಡದಿರಲು ನೀನೇನು ಮೂಗನೇ ? ಯಾವ ಕೆಲಸಕ್ಕೋಸ್ಕರ ನೀನು

ಇಲ್ಲಿಗೆ ಬಂದಿರುತ್ತೀಯೆ? ಉದ್ದೇಶವು ಇಲ್ಲದೆ ಯಾರೂ ಚಲಿಸುವುದಿಲ್ಲವೆಂದು ನನ್ನ ಬುದ್ಧಿಗೆ ತೋರುತ್ತದೆ.

**ರಾಜಾಜ್ಞಯಾ ಪ್ರವೇಷ್ಟವ್ಯಂ ನಗರೇಽಸ್ಮಿನ್ ಸದಾ ದ್ವಿಜ ।**
**ಅಜ್ಞಾತಕುಲಶೀಲಸ್ಯ ಪ್ರವೇಶೋ ನಾತ್ರ ಸರ್ವಥಾ ॥೨೦॥**

ರಾಜನ ಅಪ್ಪಣೆಯನ್ನು ಪಡೆದು ಮಾತ್ರವೇ ಈ ನಗರವನ್ನು ಪ್ರವೇಶಿಸ ಬೇಕು. ಎಲೈ ದ್ವಿಜಶ್ರೇಷ್ಠನೇ, ಕುಲಶೀಲಾದಿಗಳನ್ನು ತಿಳಿಯದೆ ಯಾರಿಗೂ ಒಳಗೆ ಹೋಗಲು ಇಲ್ಲಿ ಹೇಗೂ ಅವಕಾಶವಿಲ್ಲವು.

**ತೇಜಸ್ವೀ ಭಾಸಿ ನೂನಂ ತ್ವಂ ಬ್ರಾಹ್ಮಣೋ ವೇದವಿತ್ತಮಃ ।**
**ಕುಲಂ ಕಾರ್ಯಂ ಚ ಮೇ ಬ್ರೂಹಿ ಯಥೇಷ್ಟಂ ಗಚ್ಛ ಮಾನದ ॥೨೧॥**

ಓ ಗೌರವಾರ್ಹನೇ, ನಿನ್ನನ್ನು ನೋಡಿದರೆ, ಮಹಾತೇಜಸ್ವಿಯಾಗಿಯೂ, ವೇದಾಧ್ಯಯನಸಂಪನ್ನನಾದ ಬ್ರಾಹ್ಮಣನಂತೆ ಕಾಣುತ್ತೀಯೆ. ಆದುದರಿಂದ ನಿನ್ನ ಕುಲವು ಯಾವುದು? ನೀನು ಬಂದ ಕಾರ್ಯವೇನು? ಇದನ್ನು ತಿಳಿಸಿ ನಿನ್ನಿಷ್ಟ ಬಂದಂತೆ ಒಳಗೆ ಪ್ರವೇಶಿಸಬಹುದು.

|| ಶುಕ ಉವಾಚ ||

**ಯದರ್ಥಮಾಗತೋಽಸ್ಮ್ಯತ್ರ ತತ್ಪ್ರಾಪ್ತಂ ವಚನಾತ್ತವ ।**
**ವಿದೇಹನಗರಂ ದ್ರಷ್ಟುಂ ಪ್ರವೇಶೋ ಯತ್ರ ದುರ್ಲಭಃ ॥೨೨॥**

ಶುಕನು ದ್ವಾರಪಾಲಕನಿಗೆ ಈ ರೀತಿ ಪ್ರತ್ಯುತ್ತರವನ್ನು ಹೇಳಿದನು—ಎಲೈ ಪ್ರತೀಹಾರಿಯೇ, ವಿದೇಹನಗರವನ್ನು ನೋಡಲು ಬಂದು ಒಳಗೆ ಪ್ರವೇಶವೇ ದುರ್ಲಭವಾಗಿರುವಾಗ ನಿನ್ನ ಮಾತಿನಿಂದಲೇ ನಾನು ಬಂದ ಕಾರ್ಯವಾಯಿತೆಂದು ತಿಳಿಯುತ್ತೇನೆ. ನಾನು ಯಾವ ಉದ್ದೇಶದಿಂದ ಇಲ್ಲಿಗೆ ಬಂದೆನೋ ಅದು ನೆರವೇರಿದ ಹಾಗಾಯಿತೆಂದೇ ನಿನ್ನ ಮಾತಿನಿಂದ ಗೊತ್ತಾಗುತ್ತಿದೆ. ಇಲ್ಲಿ ಮಿಥಿಲಾಪಟ್ಟಣವನ್ನು ನೋಡುವುದಕ್ಕೇ ತುಂಬ ಕಷ್ಟವಾಗಿದೆ. ಹೀಗಿರುವಲ್ಲಿ ಊರಿನೊಳಗೆ ದೊರೆಯನ್ನು ಕಂಡು ಧರ್ಮಾಚರಣೆ, ಜ್ಞಾನ ಇವುಗಳ ಸಾಮಂಜಸ್ಯವನ್ನು ಮನಗಾಣುವುದು ಅಸಂಭವವೇ ಸರಿ ಎಂದು ತಾತ್ಪರ್ಯವು.

**ಮೋಹೋಽಯಂ ಮಮ ದುರ್ಬುದ್ಧೇಃ ಸಮುಲ್ಲಂಘ್ಯ ಗಿರಿದ್ವಯಂ ।**
**ರಾಜಾನಂ ದ್ರಷ್ಟುಕಾಮೋಽಹಂ ಪರ್ಯಟನ್ ಸಮುಪಾಗತಃ ॥೨೩॥**

ಮೇರುಪರ್ವತವನ್ನೂ, ಹಿಮವತ್ಪರ್ವತವನ್ನೂ ದಾಟಿ ಪಾದಚಾರಿಯಾಗಿ ಅಲೆಯುತ್ತಾ ಈ ನಗರದ ರಾಜನನ್ನು ನೋಡಬೇಕೆಂದು ಇಲ್ಲಿಗೆ ನಾನು ಬಂದದ್ದು ನನ್ನ ದುರ್ಬುದ್ಧಿಯ ಮೋಹವಲ್ಲದೇ ಬೇರೆಯಲ್ಲವು.

**ವಂಚಿತೋಽಹಂ ಸ್ವಯಂ ಪಿತ್ರಾ ದೂಷಣಂ ಕಸ್ಯ ದೀಯತೇ ।**
**ಭ್ರಾಮಿತೋಽಹಂ ಮಹಾಭಾಗ ಕರ್ಮಣಾ ವಾ ಮಹೀತಲೇ ॥೨೪॥**

ಓ ಪುಣ್ಯಶಾಲಿಯೇ, ಸ್ವಂತ ನನ್ನ ತಂದೆಯೇ ನನ್ನನ್ನು ವಂಚಿಸಿದನು. ಅಥವಾ ಯಾರನ್ನು ತಾನೇ ದೂಷಣಮಾಡಿ ಫಲವೇನು ? ನನ್ನ ಕರ್ಮಪರಿಪಾಕ ದಿಂದಲೇ ಹೀಗೆ ನಾನು ಭೂಲೋಕದಲ್ಲಿ ಅಲೆಯಬೇಕಾಗಿ ಬಂದಿತು.

**ಧನಾಶಾ ಪುರುಷಸ್ಯೇಹ ಪರಿಭ್ರಮಣಕಾರಣಂ ।**
**ಸಾ ಮೇ ನಾಸ್ತಿ ತಥಾಪ್ಯತ್ರ ಸಂಪ್ರಾಪ್ತೋಽಸ್ಮಿ ಭ್ರಮಾತ್ಕಿಲ ॥೨೫॥**

ಈ ಜಗತ್ತಿನಲ್ಲಿ ದ್ರವ್ಯಾಪೇಕ್ಷೆಯೇ ಪುರುಷನಿಗೆ ಹೀಗೆ ಅಲೆಯುವುದಕ್ಕೆ ಕಾರಣವಾಗುವುದು. ನನಗೆ ಆ ವಿಧವಾದ ಧನಾಪೇಕ್ಷೆಯಿಲ್ಲವು. ಆದರೂ ಭ್ರಾಂತಿ (ತಪ್ಪುತಿಳಿವಳಿಕೆ)ಯಿಂದ ಇಲ್ಲಿಗೆ ಬಂದೆನು.

**ನಿರಾಶಸ್ಯ ಸುಖಂ ನಿತ್ಯಂ ಯದಿ ಮೋಹೇ ನ ಮಜ್ಜತಿ ।**
**ನಿರಾಶೋಽಹಂ ಮಹಾಭಾಗ ಮಗ್ನೋಽಸ್ಮಿನ್ಮೋಹಸಾಗರೇ ॥೨೬॥**

ಓ ಪುಣ್ಯಾತ್ಮನೇ, ದುರಾಶೆ ಅತ್ಯಾಶೆಗಳನ್ನು ಬಿಟ್ಟವನು ಅಜ್ಞಾನದಲ್ಲಿ ಮುಳುಗದಿದ್ದರೆ ಮಾತ್ರ ನಿರಂತರವೂ ಸುಖಿಯಾಗಿರುವನು. ನಾನು ನಿರಾಶ ನಾದಾಗ್ಯೂ ತಪ್ಪುತಿಳಿವಳಿಕೆ ಎಂಬ ಸಮುದ್ರದಲ್ಲಿ ಮುಳುಗಿರುವುದರಿಂದ ದುಃಖಿತನು.

**ಕ್ವ ಮೇರುರ್ಮಿಥಿಲಾ ಕ್ವೇಯಂ ಪದ್ಭ್ಯಾಂ ಚ ಸಮುಪಾಗತಃ ।**
**ಪರಿಭ್ರಮಫಲಂ ಕಿಂ ಮೇ ವಂಚಿತೋ ವಿಧಿನಾ ಕಿಲ ॥೨೭॥**

ಮೇರುಪರ್ವತವಿರುವುದೆಲ್ಲಿ ? ಮಿಥಿಲಾನಗರವೆಲ್ಲಿ ? ಇಷ್ಟುದೂರವನ್ನೂ ಪಾದ ಚಾರಿಯಾಗಿ ನಡೆದುಕೊಂಡೇ ಇಲ್ಲಿಗೆ ಬಂದಿರುವೆನು. ಇಷ್ಟು ಅಲೆದು ಬಂದುದಕ್ಕೆ ಫಲವೇನು ? ವಿಧಿಯು ನನ್ನನ್ನು ಮೋಸಗೊಳಿಸಿತು !

**ಪ್ರಾರಬ್ಧಂ ಕಿಲ ಭೋಕ್ತವ್ಯಂ ಶುಭಂ ವಾಪ್ಯಥವಾಽಶುಭಂ ।**
**ಉದ್ಯಮಸ್ತದ್ವಶೇ ನಿತ್ಯಂ ಕಾರಯತ್ಯೇವ ಸರ್ವಥಾ ॥೨೮॥**

ಪ್ರಾರಬ್ಧಕರ್ಮವು ಎಂದರೆ, ನಾವು ಹಿಂದೆ ಮಾಡಿದ್ದ ಕರ್ಮಗಳ ಪೈಕಿ ಈಗ ಫಲವನ್ನು ಕೊಡಲು ಮೊದಲುಮಾಡಿರುವ ಕರ್ಮವು, ಶುಭವಾಗಲೀ, ಅಶುಭ ವಾಗಲೀ ಅದರ ಫಲವನ್ನು ನಾವು ಅನುಭವಿಸಿಯೇ ತೀರಬೇಕು. ನಾವು ಮಾಡುವ ಪ್ರಯತ್ನವು ಯಾವಾಗಲೂ ಪ್ರಾರಬ್ಧಕರ್ಮಕ್ಕೆ ಅಧೀನವಾಗಿರುತ್ತದೆ. ಆದುದರಿಂದ ಆ ಕರ್ಮವೇ ನಮ್ಮಿಂದ ಎಲ್ಲ ಕೆಲಸಗಳನ್ನೂ ಹೇಗಾದರೂ ಮಾಡಿಸುವುದು.

**ನ ತೀರ್ಥಂ ಚ ನ ವೇದೋಽತ್ರ ಯದರ್ಥಮಿಹ ಮೇ ಶ್ರಮಃ ।**
**ಅಪ್ರವೇಶಃ ಪುರೇ ಜಾತಃ ವಿದೇಹೋ ನಾಮ ಭೂಪತಿಃ ॥೨೯॥**

ವಿದೇಹರಾಜನನ್ನು ನೋಡಲು ಬಂದ ನನಗೆ ಅವನ ಪುರಪ್ರವೇಶವೇ ಇಲ್ಲ ವಾಗಿದೆ. ಆದುದರಿಂದ ನಾನು ಪಟ್ಟ ಶ್ರಮವು ನಿರರ್ಥಕವಾಯಿತು. ಏಕೆಂದರೆ, ಎಲ್ಲಿ ಇಂತಹ ದೊರೆಯು ಇದ್ದಾನೋ ಅಲ್ಲಿ ಸಾಧುದರ್ಶನಕ್ಕೂ ಅಡ್ಡಿ ಇರುವುದರಿಂದ ಪವಿತ್ರವಾದ ತೀರ್ಥವೂ ಇರಲಾರದು. ಪಾವನವಾದ ವೇದವೂ ಇರಲಾರದು.

**ಇತ್ಯುಕ್ತ್ವಾ ವಿರರಾಮಾಶು ಮೌನೀಭೂತ ಇವ ಸ್ಥಿತಃ ।**
**ಜ್ಞಾತೋ ಹಿ ಪ್ರತೀಹಾರೇಣ ಜ್ಞಾನೀ ಕಶ್ಚಿದ್ದ್ವಿಜೋತ್ತಮಃ ॥೩೦॥**

ಹೀಗೆಂದು ಹೇಳಿ ಆ ಶುಕಮುನಿಯು ಮೌನವ್ರತಧಾರಿಯಂತೆ ಮಾತ ನಾಡದೆ ಸುಮ್ಮನಾದನು. ಆ ದ್ವಾರಪಾಲಕನಾದರೋ ಈ ದ್ವಿಜಶ್ರೇಷ್ಠನು ಒಬ್ಬಾ ನೊಬ್ಬ ಮಹಾಜ್ಞಾನಿಯಾಗಿರಬೇಕೆಂದು ತಿಳಿದನು.

**ಸಾಮಪೂರ್ವಮುವಾಚಾಸೌ ತಂ ಜ್ಞಾತ್ವಾ ಸಂಸ್ಥಿತಂ ಮುನಿಂ ।**
**ಗಚ್ಛ ಭೋ ಯತ್ರ ತೇ ಕಾರ್ಯಂ ಯಥೇಷ್ಟಂ ದ್ವಿಜಸತ್ತಮ ॥೩೧॥**

ಆ ದ್ವಾರಪಾಲಕನು ಈ ರೀತಿಯಲ್ಲಿ ಯೋಚಿಸಿ, ಅಲ್ಲಿ ನಿಂತಿರುವ ಶುಕ ಮುನಿಯನ್ನು ಕುರಿತು, ಓ ಬ್ರಾಹ್ಮಣೋತ್ತಮನೇ, ನಿನ್ನ ಇಷ್ಟಬಂದಂತೆ ನಿನ್ನ ಕಾರ್ಯವಿರುವ ಸ್ಥಳಕ್ಕೆ ಹೋಗಬಹುದೆಂದು ಮೃದುವಾದ ಮಾತಿನಿಂದ ನುಡಿದನು.

**ಅಪರಾಧೋ ಮಮ ಬ್ರಹ್ಮನ್ ಯನ್ನಿವಾರಿತವಾನಹಂ ।**
**ತತ್ಕ್ಷಂತವ್ಯಂ ಮಹಾಭಾಗ ವಿಮುಕ್ತಾನಾಂ ಕ್ಷಮಾಬಲಂ ॥೩೨॥**

ಓ ಬ್ರಹ್ಮಜ್ಞಾನಿಯೇ, ನಿನ್ನನ್ನು ಪ್ರವೇಶಿಸದಂತೆ ತಡೆದುದು ನನ್ನ ತಪ್ಪಾಯಿತು. ಓ ಮಹಾಮಹಿಮನೇ, ಜ್ಞಾನವೈರಾಗ್ಯಸಂಪನ್ನರಾದ ವಿಮುಕ್ತರಿಗೆ ಎಂದರೆ ರಾಗದ್ವೇಷಗಳ ಸಂಸಾರವನ್ನು ಬಿಟ್ಟಿರುವವರಿಗೆ ಕ್ಷಮಾಗುಣವೇ ಮುಖ್ಯಬಲವಾಗಿರುವುದರಿಂದ ನೀನು ನನ್ನನ್ನು ಕ್ಷಮಿಸುವವನಾಗು ಎಂದು ಶುಕಮುನಿಯನ್ನು ಕುರಿತು ಆ ದ್ವಾರಪಾಲಕನು ಬೇಡಿಕೊಂಡನು.

|| ಶುಕ ಉವಾಚ ||

**ಕಿಂ ತೇಽತ್ರ ದೂಷಣಂ ಕ್ಷತ್ತಃ ಪರತಂತ್ರೋಽಸಿ ಸರ್ವದಾ ।**
**ಪ್ರಭುಕಾರ್ಯಂ ಪ್ರಕರ್ತವ್ಯಂ ಸೇವಕೇನ ಯಥೋಚಿತಂ ॥೩೩॥**

ಶುಕಮುನಿಯು ಪ್ರತೀಹಾರಿಯನ್ನು ಕುರಿತು ಪ್ರತ್ಯುತ್ತರವನ್ನು ಹೇಳಿದನು—ಎಲೈ ದ್ವಾರಪಾಲಕನೇ, ಈ ವಿಚಾರದಲ್ಲಿ ನಿನ್ನ ತಪ್ಪು ಏನು ? ನೀನು ಯಾವಾಗಲೂ ಪರರ ಆಜ್ಞೆಯಂತೆ ನಡೆಯಬೇಕಾದವನು. ಸ್ವಾಮಿಕಾರ್ಯವನ್ನು ಸೇವಕನು ಸಮಯವರಿತು ತಕ್ಕ ರೀತಿಯಲ್ಲಿ ನೆರವೇರಿಸುವುದು ಅವನ ಮುಖ್ಯ ಕರ್ತವ್ಯವು.

**ನ ಭೂಪದೂಷಣಂ ಚಾತ್ರ ಯದಹಂ ರಕ್ಷಿತಸ್ತ್ವಯಾ ।**
**ಚೌರಶತ್ರುಪರಿಜ್ಞಾನಂ ಕರ್ತವ್ಯಂ ಸರ್ವಥಾ ಬುಧೈಃ ॥೩೪॥**

ಈ ವಿಚಾರದಲ್ಲಿ ರಾಜನೂ ದೂಷಣೆಗೆ ಗುರಿಯಾಗಲು ಅರ್ಹನಲ್ಲವು. ಏಕೆಂದರೆ, ನಾನು ನಿನ್ನಿಂದ ರಕ್ಷಿಸಲ್ಪಟ್ಟಿರುವೆನು. ಕಳ್ಳರು, ಶತ್ರುಗಳು ಮುಂತಾದವರನ್ನು ಕಟ್ಟುನಿಟ್ಟಾಗಿ ವಿಚಾರದಿಂದ ಹೇಗಾದರೂ ಮಾಡಿ ಗೊತ್ತುಮಾಡುವುದು ಬುದ್ಧಿವಂತರಾದವರ ಮುಖ್ಯಕಾರ್ಯವಾಗಿದೆ.

**ಮಮೈವ ಸರ್ವಥಾ ದೋಷೋ ಯದಹಂ ಸಮುಪಾಗತಃ ।**
**ಗಮನಂ ಪರಗೇಹೇ ಯಲ್ಲಘುತಾಯಾಶ್ಚ ಕಾರಣಂ ॥೩೫॥**

ಈ ವಿಚಾರದಲ್ಲಿ ನಾನು ಇಲ್ಲಿಗೆ ಬಂದುದು ನನ್ನದೇ ತಪ್ಪು. ಏಕೆಂದರೆ, ಇತರರ ಮನೆಗೆ ಅತಿಯಾಗಿಯೂ, ಅನಾವಶ್ಯಕವಾಗಿಯೂ ಹೋಗುವುದು ಲಾಘವಕ್ಕೆ ಮತ್ತು ಅಪಮಾನಕ್ಕೂ ಕಾರಣವಾಗುತ್ತದೆ.

|| ಪ್ರತೀಹಾರ ಉವಾಚ ||

**ಕಿಂ ಸುಖಂ ದ್ವಿಜ ಕಿಂ ದುಃಖಂ ಕಿಂ ಕಾರ್ಯಂ ಶುಭಮಿಚ್ಛತಾ ।**
**ಕಃ ಶತ್ರುರ್ಹಿತಕರ್ತಾ ಕೋ ಬ್ರೂಹಿ ಸರ್ವಂ ಮಮಾದ್ಯ ವೈ ॥೩೬॥**

ದ್ವಾರಪಾಲಕನು ಶುಕನನ್ನು ಹೀಗೆ ಕೇಳಿದನು—ಎಲೈ ಬ್ರಾಹ್ಮಣನೇ, ಸುಖವು ಯಾವುದು ? ದುಃಖವು ಯಾವುದು ? ಶುಭಾಪೇಕ್ಷಿಯಾದವನು ಏನನ್ನು ಮಾಡಬೇಕು ? ಶತ್ರುವೆಂದರೆ ಯಾರು ? ಇದನ್ನು ನನಗೆ ಈಗ ದಯೆವಿಟ್ಟು ತಿಳಿಸು.

|| ಶುಕ ಉವಾಚ ||

**ದ್ವೈವಿಧ್ಯಂ ಸರ್ವಲೋಕೇಷು ಸರ್ವತ್ರ ದ್ವಿವಿಧೋ ಜನಃ ।**
**ರಾಗೀ ಚೈವ ವಿರಾಗೀ ಚ ತಯೋಶ್ಚಿತ್ತಂ ದ್ವಿಧಾ ಪುನಃ ॥೩೭॥**

ಶುಕಋಷಿಯು ಪ್ರತ್ಯುತ್ತರವನ್ನು ಹೇಳಿದನು — ಲೋಕದಲ್ಲಿ ಜನರು ಎರಡು ವಿಧವಾಗಿರುವರು ? ವಿಷಯಸುಖಾಭಿಲಾಷಿಯು ರಾಗಿಯೆಂತಲೂ, ಅದಿಲ್ಲದೆ ವೈರಾಗ್ಯಯುಕ್ತನಾದವನು ವಿರಾಗಿಯೆಂತಲೂ ಹೇಳಲ್ಪಡುವರು. ಮತ್ತು ಆ ರಾಗಿವಿರಾಗಿಗಳ ಮನಸ್ಸು ಸಹ ಪುನಃ ಎರಡು ಬಗೆಯಾಗಿರುವುದು.

**ವಿರಾಗೀ ತ್ರಿವಿಧಃ ಕಾಮಂ ಜ್ಞಾತೋಽಜ್ಞಾತಶ್ಚ ಮಧ್ಯಮಃ ।**
**ರಾಗೀ ಚ ದ್ವಿವಿಧಃ ಪ್ರೋಕ್ತೋ ಮೂರ್ಖಶ್ಚ ಚತುರಸ್ತಥಾ ॥೩೮॥**

ವಿರಾಗಿಗಳಲ್ಲಿ ಮೂರು ವಿಧವು. ಜ್ಞಾತವೈರಾಗ್ಯ ಅಂದರೆ ಹೆಚ್ಚಾದ ವೈರಾಗ್ಯ ವುಳ್ಳವನೆಂತಲೂ, ಅಜ್ಞಾತವೈರಾಗ್ಯ ಎಂದರೆ ಸ್ವಲ್ಪ ವೈರಾಗ್ಯವುಳ್ಳವನೆಂತಲೂ, ಮಧ್ಯಮವೈರಾಗ್ಯವೆಂದರೆ ಇವರಿಬ್ಬರಿಗೂ ಮಧ್ಯಸ್ಥನೆಂತಲೂ ಮೂರು ವಿಧವು. ರಾಗಿಯು ಮೂರ್ಖನೆಂತಲೂ, ಚತುರನೆಂತಲೂ ಎರಡು ವಿಧವು.

**ಚಾತುರ್ಯಂ ದ್ವಿವಿಧಂ ಪ್ರೋಕ್ತಂ ಶಾಸ್ತ್ರಜಂ ಮತಿಜಂ ತಥಾ ।**
**ಮತಿಸ್ತು ದ್ವಿವಿಧಾ ಲೋಕೇ ಯುಕ್ತಾಯುಕ್ತೇತಿ ಸರ್ವಥಾ ॥೩೯॥**

ಚಾತುರ್ಯವು ಸಹ ಶಾಸ್ತ್ರಗಳನ್ನು ಓದುವುದರಿಂದ ಉಂಟಾಗುವುದೆಂತಲೂ, ಸ್ವಬುದ್ಧಿಯಿಂದಲೇ ಉಂಟಾದುದೆಂತಲೂ ಎರಡು ವಿಧವು. ಬುದ್ಧಿಯು ಯುಕ್ತ ಮತ್ತು ಅಯುಕ್ತವೆಂದು ಲೋಕದಲ್ಲಿ ಎರಡು ವಿಧವು.

|| ಪ್ರತೀಹಾರ ಉವಾಚ ||

**ಯದುಕ್ತಂ ಭವತಾ ವಿದ್ವನ್ನಾರ್ಥಜ್ಞೋऽಹಂ ದ್ವಿಜೋತ್ತಮ ।**
**ತತ್ಸರ್ವಂ ವಿಸ್ತರೇಣಾದ್ಯ ಯಥಾರ್ಥಂ ವದ ಸತ್ತಮ ॥೪೦॥**

ಪ್ರತೀಹಾರಿಯು ಪುನಃ ಪ್ರಶ್ನೆ ಮಾಡಿದನು—ಎಲೈ ದ್ವಿಜಶ್ರೇಷ್ಠನೇ, ನೀನು ಹೇಳಿದುದರ ಅರ್ಥವು ನನಗೆ ಸರಿಯಾಗಿ ತಿಳಿಯಲಿಲ್ಲ. ಆದುದರಿಂದ ಅದೆಲ್ಲವನ್ನೂ ವಿಸ್ತಾರವಾಗಿಯೂ ವಾಸ್ತವವಾಗಿಯೂ ಇರುವಂತೆ ತಿಳಿಸು.

|| ಶುಕ ಉವಾಚ ||

**ರಾಗೋ ಯಸ್ಯಾಸ್ತಿ ಸಂಸಾರೇ ಸ ರಾಗೀತ್ಯುಚ್ಯತೇ ಧ್ರುವಂ ।**
**ದುಃಖಂ ಬಹುವಿಧಂ ತಸ್ಯ ಸುಖಂ ಚ ವಿವಿಧಂ ಪುನಃ ॥೪೧॥**

ಶುಕಮುನಿಯು ಹೇಳಿದನು—ಈ ಸಂಸಾರದಲ್ಲಿ ಯಾರಿಗೆ ಆಸಕ್ತಿಯಿರುವುದೋ ಅವನು ರಾಗೀ ಎಂದು ಹೇಳಲ್ಪಡುವನು. ಅವನಿಗೆ ವಿವಿಧವಾದ ಸುಖಗಳೂ ಮತ್ತು ಅನೇಕಬಗೆಯಾದ ದುಃಖಗಳೂ ತಪ್ಪದೇ ಉಂಟಾಗುತ್ತಿರುತ್ತವೆ.

**ಧನಂ ಪ್ರಾಪ್ಯ ಸುತಾನ್ ದಾರಾನ್ ಮಾನಂ ಚ ವಿಜಯಂ ತಥಾ ।**
**ತದಪ್ರಾಪ್ಯ ಮಹದ್ದುಃಖಂ ಭವತ್ಯೇವ ಕ್ಷಣೇ ಕ್ಷಣೇ ॥೪೨॥**

ರಾಗಿಯಾದವನಿಗೆ ಎಂದರೆ ಸಂಸಾರಿಯಾದವನಿಗೆ ಧನವು, ಮಕ್ಕಳು, ಹೆಂಡತಿ, ಗೌರವ, ಅವನು ಮಾಡುವ ಕೆಲಸದಲ್ಲಿ ವಿಜಯವು ಇವು ಲಭಿಸಿದರೆ ಸುಖಿಯಾಗುವನು. ಅವುಗಳಿಲ್ಲದಿದ್ದರೆ ಕ್ಷಣಕ್ಷಣದಲ್ಲಿಯೂ ಅತ್ಯಂತ ದುಃಖವೇ ಉಂಟಾಗುವುದು.

**ಕಾರ್ಯಂ ತಸ್ಯ ಸುಖೋಪಾಯಃ ಕರ್ತವ್ಯಂ ಸುಖಸಾಧನಂ ।**
**ತಸ್ಯಾರಾತಿಃ ಸ ವಿಜ್ಞೇಯಃ ಸುಖವಿಘ್ನಂ ಕರೋತಿ ಯಃ ॥೪೩॥**

ಈ ರಾಗಿಯಾದವನು ಸುಖವಾಗಿರುವುದಕ್ಕೆ ಉಪಾಯವನ್ನು ಯೋಚಿಸಿ, ಅದನ್ನು ಮಾಡಬೇಕು ಮತ್ತು ಸುಖಕ್ಕೆ ಸಾಧನಭೂತವಾದ ಕಾರ್ಯವನ್ನೂ ಸಹ ನೆರವೇರಿಸಬೇಕು. ಈ ಸುಖಸಾಧನಗಳನ್ನು ಸಂಪಾದಿಸುವ ಕಾರ್ಯದಲ್ಲಿ ಯಾರು ಅಡ್ಡಿಯನ್ನುಂಟುಮಾಡುವರೋ ಅಂಥವರೇ ತನ್ನ ಶತ್ರುವೆಂದು ಅವನು ತಿಳಿಯಬೇಕು.

**ಸುಖೋತ್ಪಾದಯಿತಾ ನಿತ್ಯಂ ರಾಗಯುಕ್ತಸ್ಯ ಸರ್ವದಾ ।**
**ಚತುರೋ ನೈವ ಮುಹ್ಯೇತ ಮೂರ್ಖಃ ಸರ್ವತ್ರ ಮುಹ್ಯತಿ ॥೪೪॥**

ವಿಷಯಸುಖಗಳನ್ನು ಅಪೇಕ್ಷಿಸುವವನಿಗೆ ಯಾವನು ಸುಖಸಾಧನಗಳನ್ನು ಯಾವಾಗಲೂ ಒದಗಿಸಿಕೊಡುತ್ತಿರುವನೋ ಅಂಥವನೇ ಮಿತ್ರನು. ಶಾಸ್ತ್ರಜ್ಞಾನ ಮತ್ತು ಸ್ವಬುದ್ಧಿ ಇವುಗಳುಳ್ಳವನು ಈ ವಿಷಯದಲ್ಲಿ ತಪ್ಪುತಿಳಿವಳಿಕೆಯಿಂದ ತೊಂದರೆಗಳಿಗೆ ಗುರಿಯಾಗುವುದಿಲ್ಲ. ಮೂರ್ಖನಾದರೋ ಸಮಸ್ತವಿಷಯದಲ್ಲಿಯೂ ಭ್ರಮೆಯಿಂದ ಕೂಡಿ ದುಃಖಪಡುತ್ತಿರುವನು.

**ವಿರಕ್ತಸ್ಯಾತ್ಮರಕ್ತಸ್ಯ ಸುಖಮೇಕಾಂತಸೇವನಂ ।**
**ಆತ್ಮಾನುಚಿಂತನಂ ಚೈವ ವೇದಾಂತಸ್ಯ ಚ ಚಿಂತನಂ ॥೪೫॥**

ರಾಗಿಯು ಅನುಭವಿಸುವ ಸುಖದುಃಖವಿಚಾರವನ್ನು ಹೇಳಿದುದಾಯಿತು. ಇನ್ನು ಹೊರಗಿನ ವಿಷಯಗಳಿಂದ ಉಂಟಾಗುವ ಸುಖವು ಅನಿತ್ಯವೂ ಸಾತಿಶಯವೂ ಆಗಿರುವುದರಿಂದ ದುಃಖದಿಂದ ಕೂಡಿ ಸುಖಾಭಾಸಮಾತ್ರವಾಗಿದೆಯೇ ಹೊರತು ನಿಜವಾದ ಸುಖವಲ್ಲವೆಂದು ಮನಗಂಡಿರುವ ವಿರಾಗಿಯ ವಿಚಾರವನ್ನು ಹೇಳುತ್ತಾನೆ. ವಿರಕ್ತನಾದವನಿಗೆ ಎಂದರೆ ವಿಷಯಾಭಿಲಾಷೆ ಇಲ್ಲದವನಿಗೆ, ವೈರಾಗ್ಯವುಳ್ಳವನಿಗೆ, ತನ್ನ ಆತ್ಮನೇ ಸಚ್ಚಿದಾನಂದರೂಪನೆಂದು ಶಾಸ್ತ್ರ, ಗುರೂಪದೇಶ, ಯುಕ್ತಿ, ವಿಮರ್ಶೆ, ಇವುಗಳಿಂದ ತಿಳಿದು ಆತ್ಮನಲ್ಲಿ ಅನುರಾಗವುಳ್ಳವನಾಗಿರುವವನಿಗೆ, ವಿಷಯಗಳನ್ನು ಸಂಪಾದಿಸುವುದರಲ್ಲಿ ಅನಿವಾರ್ಯವಾಗಿರುವ ಹೋರಾಟಗೊಂದಲಗಳನ್ನು ಬಿಟ್ಟು ಏಕಾಂತದಲ್ಲಿರುತ್ತಾ ಚಿತ್ತವಿಕ್ಷೇಪಗಳಿಲ್ಲದೆ ಇರುವಿಕೆಯೂ, ಆತ್ಮಸ್ವರೂಪವನ್ನು ಕುರಿತು ಆಲೋಚಿಸುತ್ತಿರುವುದೂ, ಆತ್ಮಸ್ವರೂಪವನ್ನು ತಿಳಿಸುವ ಉಪನಿಷತ್ತುಗಳು ಮುಂತಾದ ವೇದಾಂತಶಾಸ್ತ್ರದ ವಾಕ್ಯಗಳ ಅರ್ಥದ ಮನನವೂ ಸುಖಪ್ರದವಾಗಿರುತ್ತವೆ.

**ದುಃಖಂ ತದೇತತ್ಸರ್ವಂ ಹಿ ಸಂಸಾರಕಥನಾದಿಕಂ ।**
**ಶತ್ರವೋ ಬಹವಸ್ತಸ್ಯ ವಿಜ್ಞಸ್ಯ ಶುಭಮಿಚ್ಛತಃ ॥೪೬॥**

ವೈರಾಗ್ಯಶಾಲಿಯಾದವನಿಗೆ ಸಂಸಾರಸಂಬಂಧವಾದ ಪ್ರಸ್ತಾಪವೇ ಮುಂತಾದವುಗಳನ್ನು ಕೇಳುವುದು ಎಂದರೆ ಲೋಕವ್ಯವಹಾರದಲ್ಲಿ ನಡೆಯುವ ವಿದ್ಯಮಾನವನ್ನು ಶ್ರವಣಮಾಡುವುದು ಮುಂತಾದ್ದು ಸಹ ಬಹು ದುಃಖಕರವಾದುದು. ಶ್ರೇಯಸ್ಸನ್ನು ಪಡೆಯಲು ಬಯಸುವ ಈ ವಿಜ್ಞಾನಿಗೆ ಅನೇಕ ಶತ್ರುಗಳುಂಟು.

**ಕಾಮಃ ಕ್ರೋಧಃ ಪ್ರಮಾದಶ್ಚ ಶತ್ರವೋ ವಿವಿಧಾಃ ಸ್ಮೃತಾಃ ।**
**ಬಂಧುಃ ಸಂತೋಷ ಏವಾಸ್ಯ ನಾನ್ಯೋಽಸ್ತಿ ಭುವನತ್ರಯೇ ॥೪೭॥**

ಕಾಮವು ಎಂದರೆ, ವಿಷಯಗಳನ್ನು ಪಡೆಯಲು ಬಯಸುವುದು, ಅದಕ್ಕೆ ಅಡ್ಡಿಮಾಡುವವರಲ್ಲಿ ಕೋಪವು, ವಿಸ್ಮೃತಿಯು ಎಂದರೆ ಈ ರಾಗದ್ವೇಷಗಳಿಂದ ಸರಿಯಾದ ಧರ್ಮದ ತಿಳಿವಳಿಕೆಯು ತಪ್ಪುವುದು, ಇವೇ ಮೊದಲಾದ ಅನೇಕ ಶತ್ರುಗಳು ವಿರಾಗಿಗೆ ಇರುತ್ತವೆ ಎಂದು ಹೇಳಿದೆ. ಇವನಿಗೆ ಸರ್ವಸಮಭಾವದಿಂದ ಲಭಿಸುವ ಸಂತೋಷವೇ ಬಂಧುವು ಎಂದರೆ ಹಿತಚಿಂತಕನಾದ ನಂಟನು. ಇದಕ್ಕೆ ಸಮನಾದ ಮತ್ತೊಂದು ವಸ್ತುವು ಈ ಮೂರುಲೋಕದಲ್ಲೆಲ್ಲಿಯೂ ಇರುವುದಿಲ್ಲವು.

॥ ಸೂತ ಉವಾಚ ॥

**ತಚ್ಛ್ರುತ್ವಾ ವಚನಂ ತಸ್ಯ ಮತ್ವಾ ತಂ ಜ್ಞಾನಿನಂ ದ್ವಿಜಂ ।**
**ಕ್ಷತ್ತಾ ಪ್ರವೇಶಯಾಮಾಸ ಕಕ್ಷಾಂ ಚಾತಿಮನೋರಮಾಂ ॥೪೮॥**

ಸೂತನು ಹೇಳಿದನು—ಈ ರೀತಿ ಹೇಳಿದ ಶುಕಮುನಿಯ ವಾಕ್ಯವನ್ನು ಕೇಳಿ ಈ ಬ್ರಾಹ್ಮಣನು ಜ್ಞಾನಿಯೆಂದು ತಿಳಿದು ಆ ದ್ವಾರಪಾಲಕನು ಆ ನಗರ ದ್ವಾರದ ಮೂಲಕ ಅವನನ್ನು ಮನೋಹರವಾದ ಒಳಗಿನ ವಿಭಾಗಗಳಿಗೆ ಪ್ರವೇಶ ಮಾಡಲನುಮತಿಯಿತ್ತನು.

**ನಗರಂ ವೀಕ್ಷಮಾಣಸ್ಸಂಸ್ತ್ರೈವಿಧ್ಯಜನಸಂಕುಲಂ ।**
**ನಾನಾವಿಪಣದ್ರವ್ಯಾಢ್ಯಂ ಕ್ರಯವಿಕ್ರಯಕಾರಕಂ ॥೪೯॥**

ಈರೀತಿ ಶುಕಮುನಿಯು ನಗರವನ್ನು ಪ್ರವೇಶಿಸಿ ಒಳಗಿನ ಭಾಗಗಳನ್ನು ನೋಡುತ್ತಾ, ಅಲ್ಲಿರುವ ಬ್ರಾಹ್ಮಣಕ್ಷತ್ರಿಯವೈಶ್ಯರೆಂಬ ಮೂರುಪಂಗಡಗಳ ಜನರಿಂದ ನಿಬಿಡವಾಗಿರುವ, ಕ್ರಯವಿಕ್ರಯಾದಿಗಳಲ್ಲಿ ತೊಡಗಿರುವ ಐಶ್ವರ್ಯವಂತರಾದ ವೈಶ್ಯಜನರಿಂದ ಕೂಡಿದ, ನಾನಾದ್ರವ್ಯಸಮೃದ್ಧವಾದ ಅಂಗಡಿ ಬೀದಿಗಳಿಂದ ಶೋಭಿಸುತ್ತಿರುವ ನಗರವನ್ನು ವೀಕ್ಷಿಸುತ್ತಾ,

**ರಾಗದ್ವೇಷಯುತಂ ಕಾಮಲೋಭಮೋಹಾಕುಲಂ ತಥಾ ।**
**ವಿವದತ್ಸುಜನಾಕೀರ್ಣಂ ವಸುಪೂರ್ಣಂ ಮಹತ್ತರಂ ॥೫೦॥**

ರಾಗದ್ವೇಷಾದಿಗಳಿಂದ ಕೂಡಿರುವ, ಕಾಮ ಲೋಭ ಮೋಹಾದಿಗಳಿಂದಲೂ ವರ್ತಿಸುತ್ತಿರುವ ಸಾಮಾನ್ಯ ಜನಸಮೂಹವನ್ನೂ, ಹಾಗೆಯೇ ವಾದವಿವಾದಗಳಲ್ಲಿ ನಿರತರಾದ ಜನರ ಗುಂಪನ್ನೂ ಒಳಗೊಂಡಿರುವ, ಅತ್ಯಂತ ಧನಸಮೃದ್ಧಿಯಿಂದ ತುಂಬಿ ತುಳುಕಾಡುತ್ತಿರುವ ಆ ದೊಡ್ಡ ನಗರವನ್ನು ನೋಡುತ್ತಾ,

**ಪಶ್ಯನ್ ಸ ತ್ರಿವಿಧಾಂಲ್ಲೋಕಾನ್ ಪ್ರಾಸರದ್ರಾಜಮಂದಿರಂ ।**
**ಪ್ರಾಪ್ತಃ ಪರಮತೇಜಸ್ವೀ ದ್ವಿತೀಯ ಇವ ಭಾಸ್ಕರಃ ॥೫೦॥**

ಎರಡನೆಯ ಸೂರ್ಯನೋ ಎಂಬಂತೆ ಮಹಾತೇಜಸ್ಸಿನಿಂದ ಶೋಭಿಸುವ ಆ ಶುಕಮುನಿಯು ಈ ರೀತಿಯಲ್ಲಿ ಮೂರುಬಗೆಯ ಜನವರ್ಗವನ್ನು ನೋಡುತ್ತಾ ಮುಂದುವರಿದನು. ಕಡೆಗೆ ಅರಮನೆಯ ಸಮೀಪಕ್ಕೆ ಬಂದನು.

**ನಿವಾರಿತಶ್ಚ ತತ್ರೈವ ಪ್ರತೀಹಾರೇಣ ಕಾಷ್ಠವತ್ ।**
**ತತ್ರೈವ ಚ ಸ್ಥಿತೋ ದ್ವಾರಿ ಮೋಕ್ಷಮೇವಾನುಚಿಂತಯನ್ ॥೫೨॥**

ಆ ರಾಜಮಂದಿರದ ದ್ವಾರದಲ್ಲಿಯೂ ಸಹ ಅಲ್ಲಿದ್ದ ದ್ವಾರಪಾಲಕನು ಇವನನ್ನು ಒಳಗೆ ಪ್ರವೇಶಿಸದಂತೆ ತಡೆಯಲಾಗಿ, ಆ ದ್ವಾರದಲ್ಲಿಯೇ ಮರದ ತುಂಡಿನಂತೆ ಹಿಗ್ಗದೆ ಕುಗ್ಗದೆ ನಿಂತು ಮೋಕ್ಷಮಾರ್ಗವನ್ನೇ ಧ್ಯಾನಿಸುತ್ತಿದ್ದನು.

**ಛಾಯಾಯಾಮಾತಪೇ ಚೈವ ಸಮದರ್ಶೀ ಮಹಾತಪಾಃ ।**
**ಧ್ಯಾನಂ ಕೃತ್ವಾ ತಥೈಕಾಂತೇ ಸ್ಥಿತಃ ಸ್ಥಾಣುರಿವಾಚಲಃ ॥೫೩॥**

ನೆರಳನ್ನಾಗಲೀ ಬಿಸಲನ್ನಾಗಲೀ ಲಕ್ಷಿಸದೆ, ಎಂದರೆ ಸುಖ, ಜಯ, ಅನುಕೂಲ್ಯ ಇವುಗಳು ದೊರೆತಾಗ ಹಿಗ್ಗಿ ಮೆರೆಯದೆಯೂ, ದುಃಖ ಸೋಲು, ಅನಾನುಕೂಲ್ಯ ಇವುಗಳು ಒದಗಿದಾಗ ಕುಗ್ಗದೆಯೂ, ಇವುಗಳನ್ನು ಸಮಭಾವನೆಯಿಂದ ನೋಡುವ ಮನೋವೃತ್ತಿಯನ್ನು ಪಡೆದಿದ್ದ ಆ ಮಹಾತಪಸ್ವಿಯಾದ ಶುಕಮುನಿಯು ಈ ರೀತಿ ಒಬ್ಬನೇ ನಿಂತು ಧ್ಯಾನಾಸಕ್ತನಾಗಿ ಭಾವಸಮಾಧಿಯಲ್ಲಿರುತ್ತಾ ಕಲ್ಲಿನಂತೆ ಅಲುಗಾಡದೆ ಸುಮ್ಮನೆ ನಿಂತಿದ್ದನು.

**ತಂ ಮುಹೂರ್ತಾದಿವಾಗತ್ಯ ರಾಜ್ಞೋಽಮಾತ್ಯಃ ಕೃತಾಂಜಲಿಃ ।**
**ಪ್ರಾವೇಶಯತ್ತತಃ ಕಕ್ಷಾಂ ದ್ವಿತೀಯಾಂ ರಾಜವೇಶ್ಮನಃ ॥೫೪॥**

ಸ್ವಲ್ಪಹೊತ್ತಿನಲ್ಲಿಯೇ ರಾಜನ ಮಂತ್ರಿಶ್ರೇಷ್ಠನು ಅಲ್ಲಿಗೆ ಬಂದು, ಆ ಜ್ಞಾನಿಯನ್ನು ಕಂಡಕೂಡಲೇ ಕೈಮುಗಿದುಕೊಂಡು ಅಲ್ಲಿಂದ ಅರಮನೆಯಲ್ಲಿರುವ ಎರಡನೇ ಮಹಲಿಗೆ ಆ ಶುಕಮುನಿಯನ್ನು ಪ್ರವೇಶಿಸುವಂತೆ ಮಾಡಿದನು.

**ತತ್ರ ದಿವ್ಯಂ ಮನೋರಮ್ಯಂ ಪುಷ್ಪಿತಂ ದಿವ್ಯಪಾದಪಂ ।**
**ತದ್ವನಂ ದರ್ಶಯಿತ್ವಾ ತು ಕೃತ್ವಾ ಚಾತಿಥಿಸತ್ಕ್ರಿಯಾಂ ॥೫೫॥**

ಆ ರಾಜಮಂದಿರದ ಒಳಪ್ರಾಕಾರದಲ್ಲಿ ಮನೋಹರವಾಗಿಯೂ, ಪುಷ್ಪಫಲ ಸಮೃದ್ಧವಾದ ವೃಕ್ಷಗಳಿಂದ ಶೋಭಿಸುವ ಉಪವನಕ್ಕೆ ಅವನನ್ನು ಕರೆತಂದು ಆ ಕೈತೋಟದ ಸೌಂದರ್ಯವನ್ನು ತೋರಿಸಿದ ಮೇಲೆ ಅವನಿಗೆ ತಕ್ಕಂತೆ ಅತಿಥಿ ಸತ್ಕಾರವನ್ನು ಮಾಡಿ,

**ವಾರಮುಖ್ಯಾಃ ಸ್ತ್ರಿಯಸ್ತತ್ರ ರಾಜಸೇವಾಪರಾಯಣಾಃ ।**
**ಗೀತವಾದಿತ್ರಕುಶಲಾಃ ಕಾಮಶಾಸ್ತ್ರವಿಶಾರದಾಃ ॥೫೬॥**

**ತಾ ಆದಿಶ್ಯ ಚ ಸೇವಾರ್ಥಂ ಶುಕಸ್ಯ ಮಂತ್ರಿಸತ್ತಮಃ ।**
**ನಿರ್ಗತಃ ಸದನಾತ್ತಸ್ಮಾದ್ವ್ಯಾಸಪುತ್ರಃ ಸ್ಥಿತಃ ಸದಾ ॥೫೭॥**

ಆ ಅಮಾತ್ಯಶ್ರೇಷ್ಠನು ಆ ಶುಕಮುನಿಯ ಸೇವೆಗಾಗಿ, ರಾಜಸೇವೆಯಲ್ಲಿ ಪ್ರವೀಣರಾಗಿಯೂ, ಗೀತನೃತ್ಯಾದಿಗಳಲ್ಲಿ ಮತ್ತು ವಾದ್ಯಗಳನ್ನು ನುಡಿಸುವುದರಲ್ಲಿ ಕುಶಲರಾಗಿಯೂ, ರತಿಶಾಸ್ತ್ರದಲ್ಲಿ ಕೋವಿದೆಯರಾಗಿಯೂ ಇರುವ ವಾರನಾರಿಯರೇ ಮೊದಲಾದ ಸ್ತ್ರೀಯರನ್ನು ನಿಯಮಿಸಿ ಆ ಅತಿಥಿಮಂದಿರದಿಂದ ಹೊರಹೊರಟನು. ಈ ವ್ಯಾಸಪುತ್ರನಾದ ಶುಕಮುನಿಯೂ ಸಹ ಅಲ್ಲಿರುತ್ತಾ ಯಾವಾಗಲೂ

**ಪೂಜಿತಃ ಪರಯಾ ಭಕ್ತ್ಯಾ ತಾಭಿಃ ಸ್ತ್ರೀಭಿರ್ಯಥಾವಿಧಿ ।**
**ದೇಶಕಾಲೋಪಪನ್ನೇನ ನಾನಾನ್ನೇನಾತಿತೋಷಿತಃ ॥೫೮॥**

ಈ ಸ್ತ್ರೀಯರಿಂದ ಶಾಸ್ತ್ರಪದ್ಧತಿಗಳನ್ನನುಸರಿಸಿ ಅತ್ಯಂತಭಕ್ತಿಯಿಂದ ಉಪಚರಿಸಲ್ಪಟ್ಟವನಾಗಿ, ದೇಶಕಾಲೋಚಿತವಾದ ನಾನಾವಿಧಮೃಷ್ಟಾನ್ನಾದಿಗಳಿಂದ ಸಂತೃಪ್ತಿಯನ್ನು ಹೊಂದಿದನು.

**ತತೋಽನ್ತಃ ಪುರವಾಸಿನ್ಯಸ್ತಸ್ಯಾಂತಃಪುರಕಾನನಂ ।**
**ರಮ್ಯಂ ಸಂದರ್ಶಯಾಮಾಸುರಂಗನಾಃ ಕಾಮಮೋಹಿತಾಃ ॥೫೯॥**

ಅನಂತರದಲ್ಲಿ ಅಂತಃಪುರದ ಸ್ತ್ರೀಯರು ಕಾಮಮೋಹಿತರಾಗಿ ಅಂತಃಪುರದ ಸುಂದರವಾದ ಉಪವನವನ್ನು ಆ ಶುಕಮುನಿಗೆ ಅಲ್ಲಲ್ಲಿ ಕರೆದುಕೊಂಡುಹೋಗಿ ತೋರಿಸಿದರು.

**ಸ ಯುವಾ ರೂಪವಾನ್ ಕಾಂತೋ ಮೃದುಭಾಷೀ ಮನೋರಮಃ ।**
**ದೃಷ್ಟ್ವಾ ತಾ ಮುಮುಹುಃ ಸರ್ವಾಸ್ತಂ ಚ ಕಾಮಮಿವಾಪರಂ ॥೬೦॥**

ಆ ಶುಕಮುನಿಯಾದರೋ ತರುಣನೂ, ರೂಪಸೌಂದರ್ಯದಿಂದ ಕೂಡಿದವನೂ ಪ್ರೀತಿಯೋಗ್ಯನೂ, ಮೃದುಮಧುರವಾಗಿ ಮಾತನಾಡುವವನೂ, ಮನಸ್ಸಿಗೆ ಆಹ್ಲಾದಕರವಾದ ಆಕಾರವುಳ್ಳವನೂ ಆಗಿದ್ದನು. ಆದುದರಿಂದ ಎರಡನೆಯ ಮನ್ಮಥನಂತೆ ತೋರುತ್ತಿದ್ದ ಆ ಶುಕನನ್ನು ನೋಡಿ ಆ ಸಮಸ್ತ ಸ್ತ್ರೀಯರೂ ಕಾಮಪರವಶರಾದರು.

**ಜಿತೇಂದ್ರಿಯಂ ಮುನಿಂ ಮತ್ವಾ ಸರ್ವಾಃ ಪರ್ಯಚರಂಸ್ತದಾ ।**
**ಆರಣೇಯಸ್ತು ಶುದ್ಧಾತ್ಮಾ ಮಾತೃಭಾವಮಕಲ್ಪಯತ್ ॥೬೧॥**

ಆ ಶುಕಮುನಿಯು ಕಾಮವಿಕಾರಕ್ಕೆ ಒಳಪಡದ ಜಿತೇಂದ್ರಿಯನಾಗಿರುವುದನ್ನು ನೋಡಿ ಆ ಸ್ತ್ರೀಯರು ಅವನ ಸೇವೆಯಲ್ಲಿ ನಿರತರಾಗಿದ್ದರು. ಅರಣೀಸಂಭೂತನಾದ ಆ ಶುಕಮುನಿಯಾದರೋ ಬಹಳ ಶುದ್ಧಸ್ವಭಾವವುಳ್ಳವನಾದುದರಿಂದ ಆ ಸ್ತ್ರೀಯರಲ್ಲಿ ಮಾತೃಭಾವನೆಯನ್ನು ಹೊಂದಿದ್ದನು. ಎಂದರೆ ಆ ಸ್ತ್ರೀಯರನ್ನು ತನ್ನ ತಾಯಿಗೆ ಸಮಾನರೆಂದು ಭಾವಿಸಿದ್ದನು.

**ಆತ್ಮಾರಾಮೋ ಜಿತಕ್ರೋಧೋ ನ ಹೃಷ್ಯತಿ ನ ತಪ್ಯತಿ ।**
**ಪಶ್ಯಂಸ್ತಾಸಾಂ ವಿಕಾರಾಂಶ್ಚ ಸ್ವಸ್ಥ ಏವ ಸ ತಸ್ಥಿವಾನ್ ॥೬೨॥**

ಆತ್ಮಾನುಭವಸುಖದಲ್ಲಿಯೇ ಸಂತೋಷಪಡುತ್ತಿರುವ ಜಿತೇಂದ್ರಿಯನಾದ ಆ ಶುಕಮುನಿಯು ಈ ಸ್ತ್ರೀಯರನ್ನು ನೋಡಿದ್ದರಿಂದ ಸಂತೋಷಪಡಲೂ ಇಲ್ಲ, ವ್ಯಸನಪಡಲೂ ಇಲ್ಲ. ಇವನು ಕೋಪವನ್ನು ಜಯಿಸಿದವನಾದುದರಿಂದಲೂ, ಜಿತೇಂದ್ರಿಯನಾದುದರಿಂದಲೂ, ಆ ಸ್ತ್ರೀಯರ ಕಾಮಚೇಷ್ಟೆಗಳನ್ನು ನೋಡಿದರೂ ಮನಸ್ಸಿನಲ್ಲಿ ಏನೊಂದು ವಿಕಾರವೂ ಆಗದೆ ಶಾಂತಚಿತ್ತದಿಂದ ಸುಮ್ಮನೆ ಇದ್ದನು.

**ತಸ್ಮೈ ಶಯ್ಯಾಂ ಸುರಮ್ಯಾಂ ಚ ದದುರ್ನಾರ್ಯಃ ಸುಸಂಸ್ಕೃತಾಂ ।**
**ಪರಾರ್ಘ್ಯಾಸ್ತರಣೋಪೇತಾಂ ನಾನೋಪಸ್ಕರಸಂವೃತಾಂ ॥೬೩॥**

ಆ ಸ್ತ್ರೀಯರು ಈ ಶುಕಮುನಿಗೆ ಮನೋಹರವಾಗಿಯೂ, ಸುಸಜ್ಜಿತವಾಗಿಯೂ, ಮಗ್ಗಲುಹಾಸಿಕೆ ಹೊದಿಕೆ ತಲೆದಿಂಬು ಮುಂತಾದವುಗಳಿಂದ ಕೂಡಿರುವ, ವಿವಿಧೋಪಭೋಗಸಾಧನಗಳಿಂದ ಯುಕ್ತವಾದ, ಮೃದುವಾದ ಹಾಸಿಗೆಯನ್ನು ಅಣಿ ಮಾಡಿಕೊಟ್ಟರು.

**ಸ ಕೃತ್ವಾ ಪಾದಶೌಚಂ ಚ ಕುಶಪಾಣಿರತಂದ್ರಿತಃ ।**
**ಉಪಾಸ್ಯ ಪಶ್ಚಿಮಾಂ ಸಂಧ್ಯಾಂ ಧ್ಯಾನಮೇವಾನ್ವಪದ್ಯತ ॥೬೪॥**

ಆ ಶುಕಮುನಿಯು ಕೈಕಾಲುಗಳನ್ನು ತೊಳೆದುಕೊಂಡು ಶುಚಿಯಾಗಿರುತ್ತಾ, ಪವಿತ್ರಪಾಣಿಯಾಗಿ ಮತ್ತು ಆಲಸ್ಯವಿಲ್ಲದವನೂ ಅನನ್ಯಮನಸ್ಕನೂ ಆಗಿ, ಸಾಯಂಕಾಲದ ಸಂಧ್ಯಾವಂದನೋಪಾಸನೆಗಳನ್ನು ಮಾಡಿ ಕೊಂಚಕಾಲ ಧ್ಯಾನಾಸಕ್ತನಾಗಿಯೇ ಇದ್ದನು.

**ಯಾಮಮೇಕಂ ಸ್ಥಿತೋ ಧ್ಯಾನೇ ಸುಷ್ವಾಪ ತದನಂತರಂ ।**
**ಸುಪ್ತ್ವಾ ಯಾಮದ್ವಯಂ ತತ್ರ ಚೋದತಿಷ್ಠತ್ತತಃ ಶುಕಃ ॥೬೫॥**

ಈ ರೀತಿಯಲ್ಲಿ ಒಂದು ಯಾಮಕಾಲದವರೆಗೆ ಧಾನಮಗ್ನನಾಗಿದ್ದು ಅನಂತರ ಮಲಗಿ ನಿದ್ರೆಮಾಡಿದನು. ಎರಡು ಯಾಮ ನಿದ್ರೆಮಾಡಿ, ಅಂತ್ಯಯಾಮದಲ್ಲಿ ಹಾಸಿಗೆಯಿಂದ ಎದ್ದನು.

**ಪಾಶ್ಚಾತ್ಯಂ ಯಾಮಿನೀಯಾಮಂ ಧ್ಯಾನಮೇವಾನ್ವಪದ್ಯತ ।**
**ಸ್ನಾತ್ವಾ ಪ್ರಾತಃಕ್ರಿಯಾಃ ಕೃತ್ವಾ ಪುನರಾಸ್ತೇ ಸಮಾಹಿತಃ ॥೬೬॥**

ರಾತ್ರಿಯ ಕಡೆಯ ಯಾಮವನ್ನು ಧ್ಯಾನದಲ್ಲಿ ಕಳೆದು ಪ್ರಾತಃಕಾಲದಲ್ಲಿ ಸ್ನಾನಮಾಡಿ ಪ್ರಾತರಾಹ್ನಿಕಗಳನ್ನು ಯಥಾವಿಧಿಯಾಗಿ ಮಾಡಿ, ಪುನಃ ಶಾಂತಚಿತ್ತನಾಗಿ ಧ್ಯಾನಪರನಾಗಿದ್ದನು. ಹೀಗೆ ಶುಕನಲ್ಲಿ ವೇದಾಂತತತ್ತ್ವವೂ ದಿನಗಟ್ಟಲೆಯ ಜೀವನದ ರೀತಿನೀತಿಗಳೂ ಹೊಂದಿಕೊಂಡಿದ್ದುವು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ಸಪ್ತದಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹದಿನೇಳನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ಅಷ್ಟಾದಶೋಽಧ್ಯಾಯಃ ||

### ಹದಿನೆಂಟನೆಯ ಅಧ್ಯಾಯವು

|| ಓಂ ||

|| ಸೂತ ಉವಾಚ ||

**ಶ್ರುತ್ವಾ ತಮಾಗತಂ ರಾಜಾ ಮಂತ್ರಿಭಿಃ ಸಹಿತಃ ಶುಚಿಃ ।**
**ಪುರಃ ಪುರೋಹಿತಂ ಕೃತ್ವಾ ಗುರುಪುತ್ರಂ ಸಮಭ್ಯಯಾತ್ ॥೧॥**

ಸೂತಮುನಿಯು ಹೇಳಿದನು—ಗುರುಪುತ್ರನಾದ ಶುಕಮುನಿಯು ತನ್ನನ್ನು ನೋಡಲು ಬಂದಿರುವನೆಂದು ಕೇಳಿದೊಡನೆಯೇ ಜನಕರಾಜನು ಸಚಿವರೊಂದಿಗೆ ಪುರೋಹಿತರನ್ನು ಮುಂದುಮಾಡಿಕೊಂಡು ಬಂದು ಆ ಶುಕನನ್ನು ಎದುರುಗೊಂಡನು.

**ಕೃತ್ವಾರ್ಹಣಾಂ ನೃಪಃ ಸಮ್ಯಗ್ದತ್ವಾಸನಮನುತ್ತಮಂ ।**
**ಪಪ್ರಚ್ಛ ಕುಶಲಂ ಗಾಂ ಚ ವಿನಿವೇದ್ಯ ಪಯಸ್ವಿನೀಂ ॥೨॥**

ಆ ಶುಕಮುನಿಯನ್ನು ಶ್ರೇಷ್ಠವಾದ ಆಸನದಲ್ಲಿ ಕುಳ್ಳಿರಿಸಿ, ಚನ್ನಾಗಿ ಪೂಜೆಯನ್ನು ಮಾಡಿ ಕರೆಯುವ ಹಸುವನ್ನು ಕಾಣಿಕೆಯಾಗಿ ಸಮರ್ಪಿಸಿ ಕುಶಲಪ್ರಶ್ನೆಯನ್ನು ಮಾಡಿದನು.

**ಕೃತ್ವಾ ಕುಶಲಸಂಪ್ರಶ್ನಮುಪವಿಷ್ಟಂ ಸುಖಾಸನೇ ।**
**ಶುಕಂ ವ್ಯಾಸಸುತಂ ಶಾಂತಂ ಪರ್ಯಪೃಚ್ಛತ ಪಾರ್ಥಿವಃ ॥೩॥**

ಹೀಗೆ ಕುಶಲಪ್ರಶ್ನೆಯನ್ನು ಮಾಡಿದಮೇಲೆ, ಸುಖಾಸನದಲ್ಲಿ ಕುಳಿತಿರುವ ಆ ಪರಮಶಾಂತಮೂರ್ತಿಯಾದ ಶುಕನನ್ನು ಕುರಿತು ಜನಕರಾಜನು ಪ್ರಶ್ನಿಸಿದನು.

**ಸ ಚ ತಾಂ ನೃಪಪೂಜಾಂ ವೈ ಪ್ರತ್ಯಗೃಹ್ಣಾದ್ಯಥಾವಿಧಿ ।**
**ಪಪ್ರಚ್ಛ ಕುಶಲಂ ರಾಜ್ಞೇ ಸ್ವಂ ನಿವೇದ್ಯ ನಿರಾಮಯಂ ॥೪॥**

ಜನಕನು ಶಾಸ್ತ್ರಾನುಸಾರವಾಗಿ ಮಾಡಿದ ಆ ಅತಿಥಿಸತ್ಕಾರವನ್ನು ಸ್ವೀಕರಿಸಿ, ಶುಕಮುನಿಯು ತನ್ನ ಕುಶಲವನ್ನು ತಿಳಿಸಿದ್ದಲ್ಲದೆ, ರಾಜನನ್ನು ಕುರಿತು— 'ಬ್ರಾಹ್ಮಣಂ ಕುಶಲಂ ಪೃಚ್ಛೇತ್ ಕ್ಷತ್ರಬಂಧುಮನಾಮಯಂ' ಎಂಬ ನಿಯಮವನ್ನು ಅನುಸರಿಸಿ ಯೋಗಕ್ಷೇಮಾರೋಗ್ಯದ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿದನು.

**ಕಿಂ ನಿಮಿತ್ತಂ ಮಹಾಭಾಗ ನಿಃಸ್ಪೃಹಸ್ಯ ಚ ಮಾಂ ಪ್ರತಿ ।**
**ಜಾತಂ ಹ್ಯಾಗಮನಂ ಬ್ರೂಹಿ ಕಾರ್ಯಂ ತನ್ಮುನಿಸತ್ತಮ ॥೫॥**

ಎಲೈ ಮಹಾಶಯನಾದ ಶುಕಮುನಿಯೇ, ನಿಃಸ್ಪೃಹನಾದ ನೀನು ಯಾವ ಕಾರ್ಯಕ್ಕಾಗಿ ನನ್ನಲ್ಲಿಗೆ ಬರೋಣವಾಯಿತು. ಆ ಕಾರ್ಯವನ್ನು ಹೇಳು.

॥ ಶುಕ ಉವಾಚ ॥

**ವ್ಯಾಸೇನೋಕ್ತೋ ಮಹಾರಾಜ ಕುರು ದಾರಪರಿಗ್ರಹಂ ।**
**ಸರ್ವೇಷಾಮಾಶ್ರಮಾಣಾಂ ಚ ಗೃಹಸ್ಥಾಶ್ರಮ ಉತ್ತಮಃ ॥೬॥**

ಓ ಮಹಾರಾಜನೇ, ನನ್ನ ತಂದೆಯಾದ ವ್ಯಾಸನು ನನಗೆ ಈರೀತಿ ಹೇಳಿರುತ್ತಾನೆ—"ಎಲ್ಲ ಆಶ್ರಮಗಳಿಗಿಂತಲೂ ಗೃಹಸ್ಥಾಶ್ರಮವು ಶ್ರೇಷ್ಠವು, ಆದುದರಿಂದ ಹೆಂಡತಿಯನ್ನು ಪರಿಗ್ರಹಿಸಿ ಗೃಹಸ್ಥಾಶ್ರಮವನ್ನು ಸ್ವೀಕರಿಸು" ಎಂದು.

**ಮಯಾ ನಾಂಗೀಕೃತಂ ವಾಕ್ಯಂ ಮತ್ವಾ ಬಂಧಂ ಗುರೋರಪಿ ।**
**ನ ಬಂಧೋಽಸ್ತೀತಿ ತೇನೋಕ್ತೋ ನಾಹಂ ತತ್ಕೃತವಾನ್ ಪುನಃ ॥**

ಮದುವೆಯಾದರೆ ಸಂಸಾರಬಂಧನವು ತಪ್ಪದು ಎಂದು ನನ್ನ ಜನಕನಾದರೂ ಅವನ ಮಾತನ್ನು ನಾನು ಒಪ್ಪಲಿಲ್ಲ. ಆಗ ಅವನು, ನಿರ್ಲಿಪ್ತನಾಗಿದ್ದರೆ ಸಂಸಾರವು ಬಂಧಕವಾಗುವುದಿಲ್ಲವೆಂದು ನನಗೆ ತಿಳಿಯಹೇಳಿದರೂ ನಾನವನ ಮಾತನ್ನು ಸಂಶಯದಿಂದ ನಡೆಯಿಸಲಿಲ್ಲ.

**ಇತಿ ಸಂದಿಗ್ಧಮನಸಂ ಮತ್ವಾ ಮಾಂ ಮುನಿಸತ್ತಮಃ ।**
**ಉವಾಚ ವಚನಂ ತಥ್ಯಂ ಮಿಥಿಲಾಂ ಗಚ್ಛ ಮಾ ಶುಚಃ ॥೮॥**

ಹೀಗೆ ತಂದೆಯ ಅಪ್ಪಣೆಯಂತೆ ಮದುವೆಯನ್ನು ಮಾಡಿಕೊಳ್ಳಬೇಕೇ, ಅಥವಾ ವೈರಾಗ್ಯದಿಂದ ಅದನ್ನು ಬಿಡಬೇಕೇ ಎಂದು ಈ ವಿಷಯವಾಗಿ ಸಂಶಯಪಡುತ್ತ ಲಿರುವ ನನ್ನನ್ನು ನೋಡಿ ಹಿತವಾದ ಈ ವಾಕ್ಯವನ್ನು ಹೇಳಿದನು—" ಓ ಶುಕ ಕುಮಾರನೇ, ವ್ಯಸನಪಡಬೇಡ, ಮಿಥಿಲಾಪಟ್ಟಣಕ್ಕೆ ಹೋಗು " ಎಂದು.

**ಯಾಜ್ಯೋಽಸ್ತಿ ಜನಕಸ್ತತ್ರ ಜೀವನ್ಮುಕ್ತೋ ನರಾಧಿಪಃ ।**
**ವಿದೇಹೋ ಲೋಕವಿದಿತಃ ಪಾತಿ ರಾಜ್ಯಮಕಂಟಕಂ ॥೯॥**

ಅಲ್ಲಿ ವಿದೇಹದೇಶಕ್ಕೆ ದೊರೆಯಾಗಿ ವಿದೇಹವಂಶದಲ್ಲಿ ಹುಟ್ಟಿರುವ ಜನಕ ನೆಂಬ ರಾಜನು, ಯಾವ ಬಾಧೆಯೂ ಇಲ್ಲದಂತೆ ರಾಜ್ಯಭಾರವನ್ನು ನಿರ್ವಹಿಸುತ್ತಾ ಇರುವನು. ಅವನು ಯಾವಾಗಲೂ ಕರ್ಮವನ್ನು ಮಾಡುತ್ತಲಿರುತ್ತಾನೆ. ಹಾಗಿದ್ದರೂ, ರಾಗದ್ವೇಷಗಳಿಗೆ ಅಧೀನನಾಗದೆ ನಿರ್ಲಿಪ್ತನಾಗಿ ಬಂಧನಕ್ಕೆ ಸಿಲುಕದೆ ಅವನು ಜೀವನ್ಮುಕ್ತನು ಎಂದು ಪ್ರಸಿದ್ಧನಾಗಿರುತ್ತಾ ಪ್ರಜೆಗಳನ್ನು ಕಾಪಾಡುತ್ತಿರುತ್ತಾನೆ.

**ಕುರ್ವನ್ ರಾಜ್ಯಂ ತಥಾ ರಾಜಾ ಮಾಯಾಪಾಶೈರ್ನ ಬಧ್ಯತೇ ।**
**ತ್ವಂ ಬಿಭೇಷಿ ಕಥಂ ಪುತ್ರ ವನವೃತ್ತಿಃ ಪರಂತಪ ॥೧೦॥**

ಹಾಗೆ ರಾಜ್ಯವನ್ನಾಳುತ್ತಲಿದ್ದರೂ ಅವನು ಮಾಯೆಯ ಮೋಹದ ಬಲೆಯ ಕಟ್ಟಿಗೆ ಒಳಗಾಗಿಲ್ಲ. ಹೀಗಿದ್ದರೂ ಓ ಮಗನೇ, ಕಾಡಿನಲ್ಲಿಯೇ ಇರುವ ನೀನು ಗೃಹಸ್ಥಾಶ್ರಮದ ಆಕರ್ಷಣೆಯ ಬಲೆಗೆ ಹೆದರುವ ಕಾರಣವೇನು ?

**ಪಶ್ಯ ತಂ ನೃಪಶಾರ್ದೂಲಂ ತ್ಯಜ ಮೋಹಂ ಮನೋಗತಂ ।**
**ಕುರು ದಾರಾನ್ ಮಹಾಭಾಗ ಪೃಚ್ಛ ವಾ ಭೂಪತಿಂ ಚ ತಂ ॥೧೧॥**

ಓ ಪುಣ್ಯಶಾಲಿಯಾದ ಮಗನೇ, ರಾಜಶ್ರೇಷ್ಠನಾದ ಆ ಜನಕನನ್ನು ನೋಡು. ಮನಸ್ಸಿನಲ್ಲಿರುವ ಸಂಶಯವನ್ನು ಬಿಡು. ಮದುವೆಯನ್ನು ಮಾಡಿಕೋ ಅಥವಾ ಆ ರಾಜನನ್ನೇ ಕೇಳಿ ತಿಳಿದುಕೋ.

**ಸಂದೇಹಂ ತೇ ಮನೋಜಾತಂ ಕಥಯಿಷ್ಯತಿ ಪಾರ್ಥಿವಃ ।**
**ತಚ್ಛ್ರುತ್ವಾ ವಚನಂ ತಸ್ಯ ಮಾಮೇಹಿ ತರಸಾ ಸುತ ॥೧೨॥**

ಓ ಮಗನೇ, ಆ ರಾಜನು ನಿನ್ನ ಮನಸ್ಸಿನಲ್ಲಿ ಉಂಟಾಗಿರುವ ಸಂಶಯವನ್ನು ತಿಳಿದು ಸಮಾಧಾನವನ್ನು ಹೇಳಿ ನಿವೃತ್ತಿಮಾಡುವನು. ಅವನ ವಿವರಣೆಯ ಮಾತನ್ನು ಕೇಳಿ, ಸಮಾಧಾನವನ್ನು ಪಡೆದುಕೊಂಡ ಒಡನೆಯೇ ನನ್ನಲ್ಲಿಗೇ ಜಾಗ್ರತೆಯಾಗಿ ಬಾ.

**ಸಂಪ್ರೋಕ್ತೋಽಹಂ ಮಹಾರಾಜ ತ್ವತ್ಪುರೇ ಚ ತದಾಜ್ಞಯಾ ।**
**ಮೋಕ್ಷಕಾಮೋಽಸ್ಮಿ ರಾಜೇಂದ್ರ ಬ್ರೂಹಿ ಕೃತ್ಯಂ ಮಮಾನಘ ॥**

ಓ ಜನಕಮಹಾರಾಜನೇ, ಹೀಗೆ ಅವನ ಅಪ್ಪಣೆಯಂತೆ ನಿನ್ನ ಪಟ್ಟಣಕ್ಕೆ ಬಂದಿರುತ್ತೇನೆ. ನಾನು ಮುಕ್ತಿಯನ್ನು ಹೊಂದಲಪೇಕ್ಷೆಯುಳ್ಳವನಾಗಿರುತ್ತೇನೆ. ಈಗ ನಾನು ಏನುಮಾಡಬೇಕೆಂಬುದನ್ನು ಸತ್ಯವಾಗಿ ತಿಳಿಯಹೇಳು.

**ತಪಸ್ತೀರ್ಥವ್ರತೇಜ್ಯಾಶ್ಚ ಸ್ವಾಧ್ಯಾಯಸ್ತೀರ್ಥಸೇವನಂ ।**
**ಜ್ಞಾನಂ ವಾ ವದ ರಾಜೇಂದ್ರ ಮೋಕ್ಷಂ ಪ್ರತಿ ಚ ಕಾರಣಂ ॥೧೪॥**

ಓ ಮಹಾರಾಜನೇ, ನಾನು ತಪಸ್ಸನ್ನು ಮಾಡುವುದು, ಪುಣ್ಯಕ್ಷೇತ್ರಗಳಲ್ಲಿ ನಿಯಮಗಳನ್ನು ಆಚರಿಸುವುದು, ಯಜ್ಞಯಾಗಾದಿಗಳನ್ನು ನೆರವೇರಿಸುವುದು, ಪಾಠ ಪ್ರವಚನಗಳನ್ನು ಮುಂದುವರಿಸುವುದು, ಮತ್ತು ತೀರ್ಥಯಾತ್ರೆಯನ್ನು ಮಾಡುವುದು, ಅಥವಾ ವೇದಾಂತಶಾಸ್ತ್ರದಲ್ಲಿ ವಿವರಿಸಿರುವ ತತ್ತ್ವಜ್ಞಾನವನ್ನು ಸಂಪಾದಿಸುವುದು ಇವುಗಳಲ್ಲಿ ಯಾವುದು ಮೋಕ್ಷಕ್ಕೆ, ಸಂಸಾರದ ಬಿಡುಗಡೆಗೆ ಉತ್ತಮವಾದ ಸಾಧನವು ಎಂಬುದನ್ನು ನನಗೆ ತಿಳಿಯಹೇಳು.

॥ ಜನಕ ಉವಾಚ ॥

**ಶೃಣು ವಿಪ್ರೇಣ ಕರ್ತವ್ಯಂ ಮೋಕ್ಷಮಾರ್ಗಾಶ್ರಿತೇನ ಯತ್ ।**
**ಉಪನೀತೋ ವಸೇದಾದೌ ವೇದಾಭ್ಯಾಸಾಯ ವೈ ಗುರೌ ॥೧೫॥**

ಜನಕರಾಜನು ಶುಕನನ್ನು ಕುರಿತು ಹೇಳುತ್ತಾನೆ—ಮೋಕ್ಷಮಾರ್ಗವನ್ನು ಅವಲಂಬಿಸಬೇಕೆನ್ನುವ ಬ್ರಾಹ್ಮಣನು ಮಾಡಬೇಕಾದುದನ್ನು ಹೇಳುತ್ತೇನೆ, ಕೇಳು. ಅಂಥವನು ಮೊದಲು ಎಂಟನೆಯ ವರ್ಷದಲ್ಲಿಯೇ ಉಪನಯನ ಸಂಸ್ಕಾರವನ್ನು ಪಡೆದವನಾಗಿ ಯೋಗ್ಯರಾದ ಗುರುಗಳ ಸನ್ನಿಧಿಯಲ್ಲಿ ವೇದಾಭ್ಯಾಸಕ್ಕೋಸ್ಕರ ಗುರುಕುಲವಾಸದ ನಿಯಮಾಚರಣೆಯನ್ನು ಮಾಡಬೇಕು.

**ಅಧೀತ್ಯ ವೇದವೇದಾಂತಾನ್ ದತ್ವಾ ಚ ಗುರುದಕ್ಷಿಣಾಂ |**
**ಸಮಾವೃತ್ತಸ್ತು ಗಾರ್ಹಸ್ಥ್ಯೇ ಸದಾರೋ ನಿವಸೇನ್ಮುನಿಃ ॥೧೬॥**

ವೇದಗಳು, ವೇದಾಂತಗಳು ಮತ್ತು ವೇದಾಂಗಗಳು ಇವುಗಳನ್ನು ಸಮಗ್ರವಾಗಿಯೂ, ಸಾಂಗವಾಗಿಯೂ ಅಧ್ಯಯನ ಮಾಡಿ ಗುರುಗಳಿಗೆ ತಕ್ಕಂತೆ ದಕ್ಷಿಣೆಯನ್ನು ಸಮರ್ಪಿಸಿ, ಗುರುಕುಲದಿಂದ ಹೊರಟು ಸಮಾವರ್ತನ ಸಂಸ್ಕಾರವನ್ನು ನೆರವೇರಿಸಿ, ಮದುವೆಯನ್ನು ಮಾಡಿಕೊಂಡು, ಗೃಹಸ್ಥಾಶ್ರಮದಲ್ಲಿರಬೇಕು.

**ನ್ಯಾಯ್ಯವೃತ್ತಿಸ್ತು ಸಂತೋಷೀ ನಿರಾಶೀ ಗತಕಲ್ಮಷಃ ।**
**ಅಗ್ನಿಹೋತ್ರಾದಿಕರ್ಮಾಣಿ ಕುರ್ವಾಣಃ ಸತ್ಯವಾಕ್ ಶುಚಿಃ ॥೧೭॥**

ಅಲ್ಲದೆ,ಯಜನ ಯಾಜನ ಮುಂತಾದ ವರ್ಣಾಶ್ರಮಧರ್ಮಕರ್ಮಗಳನ್ನು ತಾನೇ ಮಾಡುತ್ತಾ, ಧರ್ಮದಿಂದ ಕೂಡಿದ ಜೀವಿಕಾವೃತ್ತಿಯಿಂದ ಸ್ವಾವಲಂಬಿಯಾಗಿ, ದೊರೆತುದರಲ್ಲಿ ಸಂತುಷ್ಟನಾಗಿಯೂ, ನಿಃಸ್ಪೃಹನಾಗಿಯೂ, ನಿರ್ಮಲ ಮನಸ್ಸುಳ್ಳವನಾಗಿಯೂ, ಸತ್ಯಭಾಷಿಯಾಗಿಯೂ, ಶುದ್ಧನಾಗಿಯೂ, ಅಗ್ನಿಹೋತ್ರಾದಿ ನಿತ್ಯಕರ್ಮಗಳನ್ನು ಮಾಡುತ್ತಾ ಹೀಗೆ ನ್ಯಾಯವಾದ ರೀತಿಯಲ್ಲಿ ಜೀವಿಕೆಯನ್ನು ನಿರ್ವಹಿಸುತ್ತಾ ಇರಬೇಕು.

**ಪುತ್ರಂ ಪೌತ್ರಂ ಸಮಾಸಾದ್ಯ ವಾನಪ್ರಸ್ಥಾಶ್ರಮೇ ವಸೇತ್ ।**
**ತಪಸಾ ಷಡ್ರಿಪೂನ್ ಜಿತ್ವಾ ಭಾರ್ಯಾಂ ಪುತ್ರೇ ನಿವೇಶ್ಯ ಚ ॥೧೮॥**

ಮಕ್ಕಳನ್ನೂ ಮೊಮ್ಮಕ್ಕಳನ್ನೂ ಪಡೆದು ಅವರಲ್ಲಿ ಸಂಸಾರವನ್ನು ಸಮರ್ಪಿಸಿ ತನ್ನ ಪತ್ನಿಯನ್ನು ಮಗನ ವಶಕ್ಕೆ ಬಿಟ್ಟು, ತಪಸ್ಸಿನಿಂದ ಕಾಮಕ್ರೋಧಲೋಭ ಮೋಹಮದಮಾತ್ಸರ್ಯಗಳೆಂಬ ಆರು ಶತ್ರುಗಳನ್ನು ಜಯಿಸಿ ವಾನಪ್ರಸ್ಥಾಶ್ರಮದಲ್ಲಿರಬೇಕು.

**ಸರ್ವಾನಗ್ನೀನ್ಯಥಾನ್ಯಾಯಮಾತ್ಮನ್ಯಾರೋಪ್ಯ ಧರ್ಮವಿತ್ ।**
**ವಸೇತ್ತುರ್ಯಾಶ್ರಮೇ ಶ್ರಾಂತಃ ಶುದ್ಧೇ ವೈರಾಗ್ಯಸಂಭವೇ ॥೧೯॥**

ಶಾಸ್ತ್ರನ್ಯಾಯವನ್ನು ಅನುಸರಿಸಿ ಪಂಚಾಗ್ನಿಗಳನ್ನು ಆತ್ಮಸಮಾರೋಪಣೆ ಮಾಡಿಕೊಂಡು, ಹೀಗೆ ಆಶ್ರಮಧರ್ಮಗಳನ್ನು ತಿಳಿದು ಆಚರಿಸುತ್ತಾ, ಚಿತ್ತಶುದ್ಧಿಯಿಂದ ಕ್ರಮವಾಗಿ ಶುದ್ಧವಾದ ವೈರಾಗ್ಯವು ಬಂದಿದ್ದಲ್ಲಿ ನಾಲ್ಕನೆಯದಾದ ಸನ್ಯಾಸಾಶ್ರಮವನ್ನು ಸ್ವೀಕರಿಸಬೇಕು.

**ವಿರಕ್ತಸ್ಯಾಧಿಕಾರೋಽಸ್ತಿ ಸಂನ್ಯಾಸೇ ನಾನ್ಯಥಾ ಕ್ವಚಿತ್ ।**
**ವೇದವಾಕ್ಯಮಿದಂ ತಥ್ಯಂ ನಾನ್ಯಥೇತಿ ಮತಿರ್ಮಮ ॥೨೦॥**

ಓ ಶುಕಮುನಿಯೇ, ವಿರಕ್ತನಿಗೇ ಸನ್ಯಾಸದಲ್ಲಿ ಅಧಿಕಾರವು. ವೈರಾಗ್ಯವಿಲ್ಲ ದಿದ್ದರೆ, ಸನ್ಯಾಸಾಶ್ರಮಸ್ವೀಕಾರದಲ್ಲಿ ಯೋಗ್ಯತೆ ಇಲ್ಲವು. ವೇದದಲ್ಲಿಯಾದರೂ ಹೀಗೆಯೇ ಹೇಳಿರುತ್ತದೆ. ಇದೇ ತಕ್ಕ ಮಾರ್ಗವು. ಬೇರೆ ಮಾರ್ಗವಿಲ್ಲವು, ಎಂದು ನನ್ನ ಅಭಿಪ್ರಾಯವಾಗಿದೆ.

**ಶುಕಾಷ್ಟಚತ್ವಾರಿಂಶದ್ವೈ ಸಂಸ್ಕಾರಾ ವೇದಬೋಧಿತಾಃ ।**
**ಚತ್ವಾರಿಂಶದ್ಗೃಹಸ್ಥಸ್ಯ ಪ್ರೋಕ್ತಾಸ್ತತ್ರ ಮಹಾತ್ಮಭಿಃ ॥೨೧॥**

ಎಲೈ ಶುಕಮುನಿಯೇ, ಮಾನವರಿಗೆ ಗರ್ಭಾಧಾನ ಮೊದಲುಮಾಡಿ ಅಂತ್ಯೇಷ್ಟಿಯವರೆಗೆ ಸ್ಮಶಾನಾಂತವಾಗಿ ನಲವತ್ತೆಂಟು ಕರ್ಮಗಳು ವೇದದಲ್ಲಿ ಉಕ್ತವಾಗಿರುತ್ತವೆ. ಅವುಗಳಲ್ಲಿ ನಲವತ್ತು ಗೃಹಸ್ಥನಿಗೆ ಸಂಬಂಧಪಟ್ಟವುಗಳು.

**ಅಷ್ಟೌ ಚ ಮುಕ್ತಿಕಾಮಸ್ಯ ಪ್ರೋಕ್ತಾಃ ಶಮದಮಾದಯಃ ।**
**ಆಶ್ರಮಾದಾಶ್ರಮಂ ಗಚ್ಛೇದಿತಿ ಶಿಷ್ಟಾನುಶಾಸನಂ ॥೨೨॥**

ಉಳಿದ ಶಮದಮಾದಿ ಎಂಟು ಸಂಸ್ಕಾರಗಳು ಮುಮುಕ್ಷುವಿಗೆ ಸಂಬಂಧಪಟ್ಟವು. ಬ್ರಹ್ಮಚರ್ಯದಿಂದ ಗೃಹಸ್ಥಾಶ್ರಮಕ್ಕೂ, ಗೃಹಸ್ಥಾಶ್ರಮದಿಂದ ವಾನಪ್ರಸ್ಥಾಶ್ರಮಕ್ಕೂ ಆದರಿಂದ ಸನ್ಯಾಸಕ್ಕೂ ಹೀಗೆ ಆಶ್ರಮದಿಂದ ಆಶ್ರಮಕ್ಕೆ ಕ್ರಮವಾಗಿ ಹೋಗಬೇಕೆಂದು ಆಚಾರ ಸಂಪ್ರದಾಯಗಳನ್ನು ತಿಳಿದ ಶಿಷ್ಟರು ವಿಧಿಸಿರುತ್ತಾರೆ.

॥ ಶ್ರೀಶುಕ ಉವಾಚ ॥

**ಉತ್ಪನ್ನೇ ಹೃದಿ ವೈರಾಗ್ಯೇ ಜ್ಞಾನವಿಜ್ಞಾನಸಂಭವೇ ।**
**ಅವಶ್ಯಮೇವ ವಸ್ತವ್ಯಮಾಶ್ರಮೇಷು ವನೇಷು ವಾ ॥೨೩॥**

ಶುಕನು ಹೇಳಿದನು—ಶಾಸ್ತ್ರವ್ಯಾಸಂಗದಿಂದುಂಟಾಗುವ ಶಾಬ್ದವಾದ ಪರಲೋಕಜ್ಞಾನವೂ, ಅನುಭವದಿಂದುಂಟಾಗುವ ಅಪರೋಕ್ಷಜ್ಞಾನವೂ ಬಂದ ಅನಂತರದಲ್ಲಿ, ಬುದ್ಧಿಯಲ್ಲಿ ವೈರಾಗ್ಯವು ಉಂಟಾದ ಮೇಲೆ ಅಂಥವನೂ ಕ್ರಮವಾಗಿ ಗೃಹಸ್ಥ ವಾನಪ್ರಸ್ಥ ಮುಂತಾದ ಆಶ್ರಮಗಳಲ್ಲಿಯೇ ಇರಬೇಕೇ ? ಅಥವಾ ವಿರಕ್ತಿಯಿಂದ

ನೇರವಾಗಿ ಸನ್ಯಾಸಾಶ್ರಮವನ್ನೇ ಸ್ವೀಕರಿಸಿ ಕಾಡಿಗೆ ಹೋಗಬಹುದೇ ? ಎನ್ನುವು ದನ್ನು ತಿಳಿಸು.

|| ಜನಕ ಉವಾಚ ||

**ಇಂದ್ರಿಯಾಣಿ ಬಲಿಷ್ಠಾನಿ ನ ನಿಯುಕ್ತಾನಿ ಮಾನದ ।**
**ಅಪಕ್ವಸ್ಯ ಪ್ರಕುರ್ವಂತಿ ವಿಕಾರಾಂಸ್ತಾನನೇಕಶಃ ॥೨೪॥**

ಗೌರವಕ್ಕೆ ಅರ್ಹನೂ, ಅಭಿಮಾನವನ್ನು ಬಿಟ್ಟಿರುವವನೂ ಆದ ಓ ಶುಕ ಮುನಿಯೇ, ಇಂದ್ರಿಯಗಳು ಹೆಚ್ಚಾದ ಬಲವುಳ್ಳವು. ಅವು ಹತೋಟಿಗೆ ಬಾರವು. ಅಂಥಾ ಇಂದ್ರಿಯಗಳನ್ನು ನಿಗ್ರಹಿಸದೇ ಹೋದ ಯಾವನ ಮನಸ್ಸು ಅಪಕ್ವವಾಗಿರುತ್ತದೆಯೋ ಎಂದರೆ ಸಂಸಾರದಲ್ಲಿ ಇದ್ದು ವಿಷಯಗಳಲ್ಲಿ ದೋಷಗಳು ಗೊತ್ತಾಗಿ ಆಸಕ್ತಿಯು ಹೋಗಿ ವೈರಾಗ್ಯವು ಬರದವನಿಗೆ, ಅವು ನಾನಾ ಬಗೆಯ ವಿಕಾರಗಳನ್ನುಂಟು ಮಾಡುತ್ತವೆ. ಎಂದರೆ ವಿಷಯಭೋಗಾದಿಗಳ ಕಡೆಗೆ ಮನಸ್ಸು ಹೋಗುವಂತೆ ಮಾಡುತ್ತವೆ.

**ಭೋಜನೇಚ್ಛಾಂ ಸುಖೇಚ್ಛಾಂ ಚ ಶಯ್ಯೇಚ್ಛಾಮಾತ್ಮಜಸ್ಯ ಚ ।**
**ಯತಿರ್ಭೂತ್ವಾ ಕಥಂ ಕುರ್ಯಾದ್ವಿಕಾರೇ ಸಮುಪಸ್ಥಿತೇ ॥೨೫॥**

ಓ ಶುಕಮುನಿಯೇ, ವೈರಾಗ್ಯ ಉಂಟಾಗುವುದಕ್ಕೆ ಮೊದಲೇ ಬಲಾತ್ಕಾರದಿಂದ ಯತಿಯಾದರೆ, ವಾಸನಾಧೀನವಾಗಿ ಬರುವ, ಉತ್ತಮವಾದ ಮೃಷ್ಟಾನ್ನ ಮೊದಲಾದ ಭೋಜನದಲ್ಲಿ ಅಪೇಕ್ಷೆಯನ್ನೂ, ಸುಖಪಡಬೇಕೆಂಬ ಇಚ್ಛೆಯನ್ನೂ, ಸ್ತ್ರೀವಿಷಯಕವಾದ ಇಚ್ಛೆಯನ್ನೂ, ಪುತ್ರನನ್ನು ಪಡೆಯಬೇಕೆಂಬ ಆಶೆಯನ್ನೂ ಹೊಂದಿ ಆ ಇಚ್ಛೆಯನ್ನು ಪಡೆಯಲು ಮನೋವಿಕಾರವು ಜಾಗೃತವಾದಾಗ, ಸನ್ಯಾಸಿಯಾಗಿದ್ದರೆ, ಮಾಡುವುದು ಹೇಗೆ ?

**ದುರ್ಜರಂ ವಾಸನಾಜಾಲಂ ನ ಶಾಂತಿಮುಪಯಾತಿ ವೈ ।**
**ಅತಸ್ತಚ್ಛಮನಾರ್ಥಾಯ ಕ್ರಮೇಣ ಚ ಪರಿತ್ಯಜೇತ್ ॥೨೬॥**

ಮೋಹವಾಸನೆಗಳ ಬಲೆಯು ಪ್ರಬಲವಾದುದು. ಸುಲಭವಾಗಿ ಜೀರ್ಣವಾಗು (ಕರಗು) ವುದಿಲ್ಲವು. ಆದಕಾರಣ ದೃಢವೈರಾಗ್ಯ ಬರುವವರೆಗೂ ಗೃಹಸ್ಥನ ಆಶ್ರಮದಲ್ಲಿಯೇ ಇದ್ದು, ಆಮೇಲೆ ಕ್ರಮವಾಗಿ ಸನ್ಯಾಸಿಯಾಗಬೇಕು.

**ಊರ್ಧ್ವಂ ಸುಪ್ತಃ ಪತತ್ಯೇವ ನ ಶಯಾನಃ ಪತತ್ಯಧಃ ।**
**ಪರಿವ್ರಜ್ಯ ಪರಿಭ್ರಷ್ಟೋ ನ ಮಾರ್ಗಂ ಲಭತೇ ಪುನಃ ॥೨೭॥**

ಓ ಶುಕನೇ, ಎತ್ತರವಾದ ಸ್ಥಳದಲ್ಲಿ ಮೈಮರೆದು ನಿದ್ರಿಸುವವನು ಬಿದ್ದೇ ಬೀಳುವನು. ಭೂಮಿಯಲ್ಲಿ ಮಲಗಿರುವವನು ಬೀಳಲಾರನು. ಅಂತೆಯೇ ಉನ್ನತವಾದ ಸನ್ಯಾಸಪದವಿಯನ್ನು ಪಡೆದು ಭ್ರಷ್ಟನಾದರೆ ಅವನಿಗೆ ಇನ್ನೆಂದೆಂದಿಗೂ ಸರಿಯಾದ ಮುಂದುವರಿಯುವ ಮಾರ್ಗವೇ ಮೊದಲಿನಂತೆ ಸುಲಭವಾಗಿ ಸಿಕ್ಕಲಾರದು.

**ಯಥಾ ಪಿಪೀಲಿಕಾ ಮೂಲಾಚ್ಛಾಖಾಯಾಮಧಿರೋಹತಿ ।**
**ಶನೈಃ ಶನೈಃ ಫಲಂ ಯಾತಿ ಸುಖೇನ ಪದಗಾಮಿನೀ ॥೨೮॥**

ಉದಾಹರಣೆಯಾಗಿ, ಇರುವೆಯು ಮರದ ಬುಡದಿಂದ ಹೊರಟು ಮೆಲ್ಲಮೆಲ್ಲಗೆ ಕ್ರಮವಾಗಿ ಕೊಂಬೆಯನ್ನು ಏರಿ ಸುಖವಾಗಿ ಹೆಜ್ಜೆಯಿಡುತ್ತಾ ಹಣ್ಣನ್ನು ಹೇಗೆ ಪಡೆಯುವುದೋ, ಅಂತೆಯೇ ಬ್ರಾಹ್ಮಣನು ಆಶ್ರಮಗಳನ್ನು ಕ್ರಮವಾಗಿ ಪಡೆದು ಮುಂದುಮುಂದಿನ ಆಶ್ರಮಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿ, ಕಡೆಗೆ ಸನ್ಯಾಸಿಯಾಗುವವನು ಮೋಕ್ಷವನ್ನು ತಪ್ಪದೆ ಪಡೆಯುವನು.

**ವಿಹಂಗಸ್ತರಸಾ ಯಾತಿ ವಿಘ್ನಶಂಕಾಮುದಸ್ಯ ವೈ ।**
**ಶ್ರಾಂತೋ ಭವತಿ ವಿಶ್ರಮ್ಯ ಸುಖಂ ಯಾತಿ ಪಿಪೀಲಿಕಾ ॥೨೯॥**

ಆದರೆ ಪಕ್ಷಿಯು ಮುಂದೆ ತೊಂದರೆಯೇನಾದರೂ ಬಂದೀತೆಂದು ಯೋಚಿಸದೆ ಜಾಗ್ರತೆಯಾಗಿ ಹಾರುತ್ತದೆ. ಆದರೂ ಮುಂದೆ ತುಂಬಾ ಆಯಾಸವನ್ನು ಹೊಂದುತ್ತದೆ. ಇರುವೆಯಾದರೋ ಮೆಲ್ಲಗೆ ಹೆಜ್ಜೆಯಿಡುತ್ತಾ ದಣಿವಾಗದಂತೆ ಸುಖವಾಗಿ ಮುಂದುಮುಂದಕ್ಕೆ ಹೋಗುತ್ತದೆ.

**ಮನಸ್ತು ಪ್ರಬಲಂ ಕಾಮಮಜೇಯಮಕೃತಾತ್ಮಭಿಃ ।**
**ಅತಃ ಕ್ರಮೇಣ ಜೇತವ್ಯಮಾಶ್ರಮಾನುಕ್ರಮೇಣ ಚ ॥೩೦॥**

ಓ ಶುಕಮುನಿಯೇ, ಮನಸ್ಸು ತುಂಬ ಬಲವುಳ್ಳದು. ಆದುದರಿಂದ ಅದನ್ನು ಜಯಿಸುವುದು ತುಂಬ ಕಷ್ಟವು. ಆ ಕಾರಣದಿಂದ ಒಂದಾದಮೇಲೊಂದರಂತೆ ಆಶ್ರಮವನ್ನು ಸ್ವೀಕರಿಸಿ ಆಯಾಯ ಆಶ್ರಮಕರ್ಮಗಳನ್ನು ಮಾಡುತ್ತಾ ಅವನ್ನು ದಾಟಿ ಕ್ರಮವಾಗಿ ಚಿತ್ತಶುದ್ಧಿ ಜ್ಞಾನಪ್ರಾಪ್ತಿಯ ಮೂಲಕವಾಗಿ ಮನಸ್ಸನ್ನು ಜಯಿಸಬೇಕು.

**ಗೃಹಸ್ಥಾಶ್ರಮಸಂಸ್ಥೋಽಪಿ ಶಾಂತಃ ಸುಮತಿರಾತ್ಮವಾನ್ ।**
**ನ ಚ ಹೃಷ್ಯೇನ್ನ ಚ ತಪೇಲ್ಲಾಭಾಲಾಭೇ ಸಮೋ ಭವೇತ್ ॥೩೧॥**

ಗೃಹಸ್ಥಾಶ್ರಮದಲ್ಲಿರುವವನೂ ರಾಗದ್ವೇಷಗಳಿಗೆ ಪರವಶನಾಗದೆ ಶಾಂತನಾಗಿರುತ್ತಾ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ನಿಃಸ್ಪೃಹನಾಗಿರಬೇಕು. ಇಷ್ಟು ಪ್ರಾಪ್ತಿಯಿಂದ ಸಂತೋಷ, ಅಹಂಕಾರ, ಮೆರೆಯುವಿಕೆ ಇವನ್ನೂ, ಅನಿಷ್ಟ ಬಂದಾಗ ಮತ್ತು ಇಷ್ಟಪ್ರಾಪ್ತಿಯಾಗದಿರುವಾಗ ದುಃಖ, ದೇವರನ್ನು ನಿಂದಿಸುವಿಕೆ, ಕುಗ್ಗುವಿಕೆ ಇವನ್ನೂ ಹೊಂದದೆ ಸಮವಾಗಿರುವ ಮನೋವೃತ್ತಿಯುಳ್ಳವನಾಗಿರಬೇಕು. ಹೀಗೆ ಗೃಹಸ್ಥಾಶ್ರಮವೂ ಸುಖಾನುಭವಕ್ಕಲ್ಲವು. ಅಲ್ಲೂ ವೈರಾಗ್ಯಸಾಧನೆಯೇ ಗುರಿಯು ಎಂಬುದನ್ನು ಮರೆಯಬಾರದು.

**ವಿಹಿತಂ ಕರ್ಮ ಕುರ್ವಾಣಸ್ತ್ಯಜನ್ ಚಿಂತಾನ್ವಿತಂ ಚ ಯತ್ ।**
**ಆತ್ಮಲಾಭೇನ ಸಂತುಷ್ಟೋ ಮುಚ್ಯತೇ ನಾತ್ರ ಸಂಶಯಃ ॥೩೨॥**

ವೇದೋಕ್ತವಾಗಿರುವ ನಿತ್ಯಕರ್ಮಗಳನ್ನು, ಫಲದಲ್ಲಿ ಆಶೆಯನ್ನಿಡದೆ ಈಶ್ವರಪ್ರೀತಿಗೆಂದೂ, ದೇವರ ಸೇವೆಗೆಂದೂ ಮಾಡುತ್ತಾ, ನಿಷಿದ್ಧಕರ್ಮಗಳನ್ನು ಬಿಟ್ಟು ನಿಷ್ಕಾಮನಾಗಿರುವವನು ಮುಂದೆ ಕ್ರಮವಾಗಿ ಚಿತ್ತಶುದ್ಧಿಯಿಂದ ಜ್ಞಾನಪ್ರಾಪ್ತಿಯಾಗಿ ಸ್ವಸ್ವರೂಪವನ್ನು ತಿಳಿದು ನಿತ್ಯವೂ, ಸಚ್ಚಿದಾನಂದರೂಪವೂ ಆದ ಪಾರಮಾರ್ಥಿಕವಾದ ಸ್ವರೂಪದ ಅಪರೋಕ್ಷಾನುಭವವಾಗಲು ಮುಕ್ತಿಯನ್ನು ಹೊಂದುತ್ತಾನೆ. ಇಲ್ಲಿ ಚಿಂತಾನ್ವಿತಂ ಎಂದರೆ, ವೇದಶಾಸ್ತ್ರಗಳಲ್ಲಿ ನಿಷೇಧಿಸಿರುವ ಕರ್ಮಗಳನ್ನು ಮಾಡಿದರೆ ಪಾಪವುಂಟಾಗಿ ಇವನಿಗೆ ಮುಂದೆ ದುಃಖವನ್ನುಂಟುಮಾಡುವುದರಿಂದ ಚಿಂತೆಯನ್ನುಂಟುಮಾಡುವ ನಿಷಿದ್ಧಕರ್ಮವೆಂದು ಅರ್ಥವು. ಅಲ್ಲದೆ ಸತ್ಕರ್ಮಗಳನ್ನು ಫಲದಲ್ಲಿ ಕಾಮನೆಯುಳ್ಳವನಾಗಿ ಮಾಡಿದರೆ ಆ ಕರ್ಮಗಳ ಫಲಾನುಭವಕ್ಕಾಗಿ ಜನ್ಮವನ್ನು ಮುಂದೆಯೂ ಪಡೆಯುತ್ತಾ ಸಂಸಾರದಿಂದ ಬಿಡುಗಡೆ ಇಲ್ಲದೆ, ಗಾಣದ ಎತ್ತಿನಂತೆ, ಚಿಂತೆಗೆ ಒಳಗಾಗಿರಬೇಕಾಗುತ್ತದೆ. ಆದುದರಿಂದ ಎಲ್ಲ ಕರ್ಮವೂ, ಚಿಂತೆಯಿಂದ ಕೂಡಿರುತ್ತದೆಂದು ತಾತ್ಪರ್ಯವು. ಇವೆಲ್ಲವನ್ನೂ ಪರಿಶೀಲಿಸಿದರೆ ಒಟ್ಟಿನಲ್ಲಿ " ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ಬಂಧಾಯ ವಿಷಯಾಸಕ್ತಂ ಮುಕ್ತ್ಯೈನಿರ್ವಿಷಯಂ ಸ್ಮೃತಂ ॥ " ಎಂದು ಹೇಳಿರುವಂತೆ ಫಲಾಶೆಯನ್ನು ಹೊಂದಿರುವ ಅಥವಾ ಫಲಾಶೆ ಇಲ್ಲದಿರುವ ಮನಸ್ಸು ಮುಖ್ಯವಾದುದೇ ಹೊರತು ಆಶ್ರಮ ಸ್ವೀಕಾರವು ಅಷ್ಟು ಮುಖ್ಯವಾದುದಲ್ಲವೆಂದು ತಾತ್ಪರ್ಯವು.

**ಪಶ್ಯಾಹಂ ರಾಜ್ಯಸಂಸ್ಥೋಽಪಿ ಜೀವನ್ಮುಕ್ತೋ ಯಥಾನಘ ।**
**ವಿಚರಾಮಿ ಯಥಾಕಾಮಂ ನ ಮೇ ಕಿಂಚಿತ್ಪ್ರಜಾಯತೇ ॥೩೩॥**

ಪಾಪಸಂಬಂಧವಿಲ್ಲದೆ ಶುದ್ಧನಾದ ಓ ಶುಕಮುನಿಯೇ, ನೋಡು, ನಾನು ರಾಜ್ಯವಾಳುತ್ತಿದ್ದರೂ ಜೀವನ್ಮುಕ್ತನಾಗಿರುತ್ತೇನೆ. ಬೇಕಾದ ಹಾಗೆ ಆಚರಿಸುತ್ತ ಲಿದ್ದರೂ ಅದರಿಂದ ನನಗೆ ಯಾವ ಸುಖವೂ ದುಃಖವೂ ಉಂಟಾಗುವುದಿಲ್ಲವು.

**ಭುಂಜಾನೋ ವಿವಿಧಾನ್ ಭೋಗಾನ್ ಕುರ್ವನ್ಕಾರ್ಯಾಣ್ಯನೇಕಶಃ ।**
**ಭವಿಷ್ಯಾಮಿ ಯಥಾಹಂ ತ್ವಂ ತಥಾ ಮುಕ್ತೋ ಭವಾನಘ ॥೩೪॥**

ಓ ದೋಷಗಳಿಲ್ಲದವನೇ, ಬಂದೊದಗುವ ಸುಖದುಃಖಗಳನ್ನು ಅನುಭವಿ ಸುತ್ತಾ ಗೃಹಸ್ಥಾಶ್ರಮಕ್ಕೆ ಮತ್ತು ದೊರೆತನಕ್ಕೆ ಯೋಗ್ಯವಾದ ಆಯಾಯ ಕರ್ಮ ಗಳನ್ನು ನಾನಾ ರೀತಿಯಲ್ಲಿ ಆಚರಿಸುತ್ತಿದ್ದರೂ ನಾನು ಹೇಗೆ ನಿರ್ಲಿಪ್ತನಾಗಿ ಜೀವ ನ್ಮುಕ್ತನಾಗಿರುತ್ತೇನೆಯೋ ನೀನೂ ಹಾಗೆಯೇ ಆಗು. ಎಂದರೆ ಸುಖದುಃಖಗಳಲ್ಲಿ ರಾಗದ್ವೇಷಗಳಿಲ್ಲದೆ ಉದಾಸೀನನಾಗಿರುತ್ತಾ ಎಲ್ಲ ಕರ್ಮಗಳನ್ನೂ ದೇವಿಯ ಪ್ರೀತಿ ಗೆಂದು ಮಾಡುತ್ತಿರುವುದರಿಂದ ನಿರ್ಲಿಪ್ತನಾಗಿದ್ದೇನೆ ಎಂದು ಭಾವವು.

**ಕಥ್ಯತೇ ಖಲು ಯದ್ದೃಶ್ಯಮದೃಶ್ಯಂ ಬಧ್ಯತೇ ಕುತಃ ।**
**ದೃಶ್ಯಾನಿ ಪಂಚಭೂತಾನಿ ಗುಣಾಸ್ತೇಷಾಂ ತಥಾ ಪುನಃ ॥೩೫॥**

ಅವಿದ್ಯಾದಿ ಜಡಜಗತ್ತು ದೃಶ್ಯವೆಂದು ಹೇಳಲ್ಪಡುತ್ತದೆ. ಇಂತಹ ದೃಶ್ಯ ದಿಂದ ಅದೃಶ್ಯವೂ ದ್ರಷ್ಟೃವೂ, ಪರಮಾರ್ಥವಸ್ತುವೂ ಆಗಿರುವ ಆತ್ಮವು ಹೇಗೆ ಬಂಧಿಸಲ್ಪಟ್ಟೀತು ? ಹೀಗೆ ಆಕಾಶಾದಿಪಂಚಭೂತಗಳೂ ಅವುಗಳ ಶಬ್ದವೇ ಮೊದ ಲಾದ ಗುಣಗಳೂ ದೃಶ್ಯಗಳು.

**ಆತ್ಮಾ ಗಮ್ಯೋಽನುಮಾನೇನ ಪ್ರತ್ಯಕ್ಷೋ ನ ಕದಾಚನ ।**
**ಸ ಕಥಂ ಬಧ್ಯತೇ ಬ್ರಹ್ಮನ್ನಿರ್ವಿಕಾರೋ ನಿರಂಜನಃ ॥೩೬॥**

ಹೀಗೆ ಅದೃಶ್ಯನಾದ ಆತ್ಮನನ್ನು ಅನುಮಾನದಿಂದ ಊಹಿಸಬೇಕೇ ಹೊರತು ಅವನು ಇಂದ್ರಿಯಾದಿಗಳಿಗೆ ಗೋಚರನಾಗುವುದಿಲ್ಲ. ಅವನು ಸಾಕ್ಷಿಪ್ರಕಾಶ ಸ್ವರೂಪನು. ಹುಟ್ಟು ಮೊದಲಾದ ಎಲ್ಲ ಬಗೆಯ ವಿಕಾರಗಳಿಲ್ಲದವನು. ಗುಣದೋಷ

ಗಳ ಲೇಪವನ್ನು ಹೊಂದದವನು. ಇಂತಹವನು ಹೇಗೆ ಅಜ್ಞಾನ ಮುಂತಾದವು ಗಳಿಂದ ವಾಸ್ತವವಾಗಿ ಬಂಧಿಸಲ್ಪಟ್ಟಾನು ?

**ಮನಸ್ತು ಸುಖದುಃಖಾನಾಂ ನುಹತಾಂ ಕಾರಣಂ ದ್ವಿಜ ।**
**ಜಾತೇ ತು ನಿರ್ಮಲೇ ಹ್ಯಸ್ಮಿನ್ ಸರ್ವಂ ಭವತಿ ನಿರ್ಮಲಂ ॥೩೭॥**

ಹಾಗಾದರೆ ಬಂಧವು ಅನುಭವಿಸಲ್ಪಡುತ್ತಿದೆಯಲ್ಲವೇ ? ಇದು ಏತರಿಂದ ? ಎಂದರೆ, ಹೆಚ್ಚಾದ ಸುಖದುಃಖಗಳಿಗೆ ದೋಷವುಳ್ಳ ಮನಸ್ಸೇ ಕಾರಣವು. ಮನಸ್ಸು ನಿರ್ಮಲವಾದರೆ ಎಲ್ಲವೂ ನಿರ್ಮಲವು.

**ಭ್ರಮನ್ ಸರ್ವೇಷು ತೀರ್ಥೇಷು ಸ್ನಾತ್ವಾ ಸ್ನಾತ್ವಾ ಪುನಃಪುನಃ ।**
**ನಿರ್ಮಲಂ ನ ಮನೋ ಯಾವತ್ತಾವತ್ಸರ್ವಂ ನಿರರ್ಥಕಂ ॥೩೮॥**

ವರ್ಣಾಶ್ರಮ ಧರ್ಮ, ಕರ್ಮ, ಉಪಾಸನೆ ಮುಂತಾದವುಗಳನ್ನು ಆಚರಿಸಿ ಆ ಮನಸ್ಸು ನಿರ್ಮಲವಾದ ಮೇಲೆ ಎಲ್ಲವೂ ನಿರ್ಮಲವಾಗುತ್ತದೆ. ಅಜ್ಞಾನವು ಹೋಗಿ ಆತ್ಮಜ್ಞಾನವಾಗುತ್ತದೆ. ಆದುದರಿಂದ ಎಲ್ಲ ಪವಿತ್ರವಾದ ಕ್ಷೇತ್ರಗಳಿಗೆ ಹೋಗಿ ಆಯಾಯ ತೀರ್ಥಗಳಲ್ಲಿ ಸ್ನಾನ ಮತ್ತು ದೇವರ ದರ್ಶನವನ್ನು ಮಾಡುತ್ತಾ ಇದ್ದರೂ ಎಲ್ಲಿಯವರಿವಿಗೆ ಮನಸ್ಸು ನಿರ್ಮಲವಾಗದೆ ಇರುವುದೋ ಅಲ್ಲಿಯವರಿವಿಗೆ ಇವೆಲ್ಲವೂ ವ್ಯರ್ಥವಾಗುತ್ತದೆ. ಆದರೂ ಮನಸ್ಸು ಶುದ್ಧವಾಗುವವರಿಗೆ ಇವನ್ನು ಬಾರಿಬಾರಿಗೂ ಮಾಡುತ್ತಿರಬೇಕು.

**ನ ದೇಹೋ ನ ಚ ಜೀವಾತ್ಮಾ ನೇಂದ್ರಿಯಾಣಿ ಪರಂತಪ ।**
**ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ ॥೩೯॥**

ದೇಹವಾಗಲೀ, ಜೀವನಾಗಲೀ, ಇಂದ್ರಿಯಗಳಾಗಲೀ, ಬಂಧಮೋಕ್ಷಗಳಿಗೆ ಕಾರಣವಾಗುವುದಿಲ್ಲ. ದುಷ್ಟರನ್ನು ತನ್ನ ತಪೋಮಾಹಾತ್ಮ್ಯೆಯಿಂದ ಶಿಕ್ಷಿಸತಕ್ಕ ಓ ಶುಕಮುನಿಯೇ, ಮನಸ್ಸಿನಿಂದಲೇ ಸಂಸಾರಬಂಧವೂ, ಮೋಕ್ಷವೂ ಉಂಟಾಗುತ್ತವೆ. ಆದುದರಿಂದ ಮನಶ್ಶುದ್ಧಿಯು ಮುಖ್ಯವು.

**ಶುದ್ಧೋ ಮುಕ್ತಃ ಸದೈವಾತ್ಮಾ ನೈವ ಬಧ್ಯೇತ ಕರ್ಹಿಚಿತ್ ।**
**ಬಂಧಮೋಕ್ಷೌ ಮನಃಸಂಸ್ಥೌ ತಸ್ಮಿನ್ ಶಾಂತೇ ಪ್ರಶಾಮ್ಯತಿ ॥೪೦॥**

ಆತ್ಮನು ಯಾವಾಗಲೂ ಶುದ್ಧನು ಹಾಗೂ ಮುಕ್ತನು. ಅವನಿಗೆ ಯಾವುದ ರಿಂದಲೂ ಯಾವಾಗಲೂ ಬಂಧವಿಲ್ಲ. ಬಂಧವೂ ಮೋಕ್ಷವೂ ಮನೋಧರ್ಮ ಗಳು. ಆ ಮನಸ್ಸು, ನಿಷ್ಕಾಮಕರ್ಮಾಚರಣೆ, ವೇದಾಂತವಾಕ್ಯಗಳ ಮನನ, ಮುಂತಾದವುಗಳಿಂದ ನಿರ್ಮಲವಾದರೆ ಎಲ್ಲವೂ ಶಾಂತವಾಗುತ್ತದೆ.

**ಶತ್ರುರ್ಮಿತ್ರಮುದಾಸೀನೋ ಭೇದಾಸ್ಸರ್ವೇ ಮನೋಗತಾಃ ।**
**ಏಕಾತ್ಮತ್ವೇ ಕಥಂ ಭೇದಃ ಸಂಭವೇದ್ದ್ವೈತದರ್ಶನಾತ್ ॥೪೧॥**

ಹಗೆ, ಗೆಳೆಯ, ಉದಾಸೀನನೆಂಬ ಭೇದಗಳೆಲ್ಲವೂ ಮನಸ್ಸಿನಿಂದ ಕಲ್ಪಿಸಿ ಕೊಂಡವುಗಳು. ಆದುದರಿಂದ ಈ ಎಲ್ಲ ಬಗೆಯ ಪ್ರಪಂಚದ ವ್ಯವಹಾರಗಳಲ್ಲಿ ವಾಸ್ತವವಾಗಿ ಆತ್ಮಚೈತನ್ಯ ಒಂದೇ ನಿತ್ಯವಾಗಿದೆ ಎಂದು ಮನಗಂಡಮೇಲೆಯೂ ಈ ಭೇದದರ್ಶನವು ನಿಜವೆಂದು ಹೇಗೆತಾನೇ ತೋರೀತು? ಅದು ತೋರಿಕೆಯಾಗಿರ ಬೇಕೆಂದು ಏರ್ಪಡುತ್ತದೆ. ಹೀಗೆ 'ಬ್ರಹ್ಮ ಸತ್ಯಂ, ಜಗನ್ಮಿಥ್ಯಾ' ಎಂದು ಸಿದ್ಧಾಂತ ವನ್ನು ಮನಗಾಣಬೇಕು.

**ಜೀವೋ ಬ್ರಹ್ಮ ಸದೈವಾಹಂ ನಾತ್ರ ಕಾರ್ಯಾ ವಿಚಾರಣಾ ।**
**ಭೇದಬುದ್ಧಿಸ್ತು ಸಂಸಾರೇ ವರ್ತಮಾನಾ ಪ್ರವರ್ತತೇ ॥೪೨॥**

ನಾನು, ನಾನು ಎಂದು ಕರೆಯಲ್ಪಡುವ ಅಹಂಪದಾರ್ಥವಾದ ಜೀವವು ವಸ್ತುತಃ ಬ್ರಹ್ಮಸ್ವರೂಪವೇ. ಇದರಲ್ಲಿ ಸಂಶಯವಿಲ್ಲವು. ಪರಮಾರ್ಥವಲ್ಲದ, ನಾನು ಬೇರೆ, ಬ್ರಹ್ಮವು ಬೇರೆ ಎಂಬ ಜೀವಬ್ರಹ್ಮಭೇದಬುದ್ಧಿಯು ಈ ವ್ಯಾವಹಾರಿಕವಾದ ಸಂಸಾರದಲ್ಲಿ ಮಾತ್ರ ಅನಾದಿಯಾದ ಅಜ್ಞಾನದ ಪ್ರಭಾವದಿಂದ ಉಂಟಾಗುತ್ತದೆ. ಇಲ್ಲಿ ವಿದ್ಯೆ ಅಥವಾ ಜ್ಞಾನವು ಎರಡು ಬಗೆಯಾಗಿದೆ. ಒಂದು ಬ್ರಹ್ಮ ಮತ್ತು ಜೀವರಿಗೆ ಸಮಾನವಾದ ಸ್ವರೂಪಜ್ಞಾನವು. ಎರಡನೆಯದು, ಜೀವರಿಗೆ ಮಾತ್ರ ವಿರುವ ವೃತ್ತಿರೂಪಜ್ಞಾನವು.

**ಅವಿದ್ಯೇಯಂ ಮಹಾಭಾಗ ವಿದ್ಯಾ ಚ ತನ್ನಿವರ್ತನಂ ।**
**ವಿದ್ಯಾವಿದ್ಯೇ ಚ ವಿಜ್ಞೇಯೇ ಸರ್ವದೈವ ವಿಚಕ್ಷಣೈಃ ॥೪೩॥**

ಈ ಭೇದಬುದ್ಧಿಯೇ ಅಜ್ಞಾನ ಅಥವಾ ಅವಿದ್ಯೆಯೆಂಬುವುದಾಗಿದೆ. ಬ್ರಹ್ಮ ವಿದ್ಯೆಯು ಆ ಅವಿದ್ಯೆಯನ್ನು ಹೋಗಲಾಡಿಸುತ್ತದೆ. ಆದುದರಿಂದ ವಿದ್ಯಾವಿದ್ಯೆಗಳೆರ

ಡನ್ನೂ ಅನುಭವಕ್ಕೆ ತಂದುಕೊಳ್ಳಬೇಕು. ಇದೇ ಜೀವರೂ ದೇವರೂ ಚೈತನ್ಯಾಂಶ ದಲ್ಲಿ ಸಮಾನರು ಎಂಬ ಬ್ರಹ್ಮಾತ್ಮೈಕ್ಯಜ್ಞಾನವು. ಇದರಿಂದ ಭೇದಜ್ಞಾನರೂಪವಾದ, ಜೀವರ ಮನೋವೃತ್ತಿರೂಪವಾದ, ಅವಿದ್ಯೆಯು ನಾಶವಾಗುತ್ತದೆ.

**ವಿನಾಽಽತಪಂ ಹಿ ಛಾಯಾಯಾ ಜ್ಞಾಯತೇ ಚ ಕಥಂ ಸುಖಂ ।**
**ಅವಿದ್ಯಯಾ ವಿನಾ ತದ್ವತ್ಕಥಂ ವಿದ್ಯಾಂ ಚ ವೇತ್ತಿ ವೈ ॥೪೪॥**

ಬಿಸಿಲು ಇಲ್ಲದಿದ್ದರೆ ಹೇಗೆ ನೆರಳಿನ ಸುಖವನ್ನು ತಿಳಿಯಲಾಗುವುದಿಲ್ಲವೋ ಹಾಗೆಯೇ ಅವಿದ್ಯೆಯಿಲ್ಲದಿದ್ದರೆ ಮನೋವೃತ್ತಿರೂಪವಾದ ವಿದ್ಯೆಯನ್ನೂ ತಿಳಿಯ ಲಾಗುವುದಿಲ್ಲ. ಎಂದರೆ, ಮನೋವೃತ್ತಿರೂಪವಾದ ವಿದ್ಯೆಯೂ, ಅವಿದ್ಯೆಯ ಕಾರ್ಯ ವಾದುದರಿಂದ ಅವಿದ್ಯೆಯೊಡನೆಯೇ ಕಾರಣನಾಶದಿಂದ ತಾನೂ ನಾಶವಾಗುತ್ತದೆ. ಹೇಗೆ ಬಗ್ಗಡವಾಗಿರುವ ನೀರಿನಲ್ಲಿ ಹಾಕಿದ ಚಿಲ್ಲದ ಬೀಜದ ರೇಣುಗಳು ನೀರಿನ ಕೊಳೆಯನ್ನೂ ತಮ್ಮನ್ನೂ ಕೆಳಕ್ಕೆ ಎಳೆದು ನೀರನ್ನು ತಿಳಿಮಾಡಿಬಿಡುತ್ತವೋ, ಮತ್ತು ಕಾಸಿದ ಕಬ್ಬಿಣದ ಸಲಾಕಿಯಲ್ಲಿ ನೀರನ್ನು ಹಾಕಿದರೆ ಹೇಗೆ ಉಷ್ಣದೊಡ ನೆಯೇ ಜಲವೂ ಇಂಗಿಹೋಗುವುದೋ, ಅಂತೆಯೇ ಅಜ್ಞಾನವೂ, ಮನೋ ವೃತ್ತಿಗಳೂ ಅಳಿಯುತ್ತವೆ ಎಂದು ತಿಳಿಯಬೇಕು. ಅಲ್ಲದೆ ಚೈತನ್ಯ ಒಂದೇತತ್ತ್ವ ವೆಂದು ಸಿದ್ಧವಾದಮೇಲೆ ಈ ಪ್ರಪಂಚವು ಬದಲಾಯಿಸುತ್ತಿರುವುದೂ ನಶ್ವರವೂ ಆದುದರಿಂದ ಬರಿಯ ತೋರಿಕೆಯಾಗಿರಬೇಕೆಂದು ಏರ್ಪಡುತ್ತದೆ. ಹೀಗೆ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಎಂದು ಸಿದ್ಧಾಂತವನ್ನು ಮನಗಾಣಬೇಕು.

**ಗುಣಾ ಗುಣೇಷು ವರ್ತಂತೇ ಭೂತಾನಿ ಚ ತಥೈವ ಚ ।**
**ಇಂದ್ರಿಯಾಣೀಂದ್ರಿಯಾರ್ಥೇಷು ಕೋ ದೋಷಸ್ತತ್ರ ಚಾತ್ಮನಃ ॥**

ಗುಣಗಳು ಎಂದರೆ ಕರಣಗಳಾದ ಇಂದ್ರಿಯಗಳು ತಮ್ಮ ವಿಷಯಗಳಾದ ಶಬ್ದ ಸ್ಪರ್ಶಾದಿಗಳಲ್ಲಿ ಪ್ರವರ್ತಿಸುತ್ತಾ ಇರುತ್ತವೆ. ಹೀಗೆ ಪಂಚಭೂತಗಳೂ ಇಂದ್ರಿಯ ಗಳೂ ಕೂಡ ತಮ್ಮ ತಮ್ಮಲ್ಲಿಯೇ ವ್ಯವಹರಿಸುತ್ತಾ ಇರುವುವೇ ವಿನಾ ಅವುಗಳಿಗೂ ಆತ್ಮನಿಗೂ ಯಾವ ಸಂಬಂಧವೂ ಇರುವುದಿಲ್ಲ. ಆದುದರಿಂದ ಆತ್ಮನಿಗೆ ಅವುಗಳಿಂದ ದೋಷವೇನು ?

**ಮರ್ಯಾದಾ ಸರ್ವರಕ್ಷಾರ್ಥಂ ಕೃತಾ ವೇದೇಷು ಸರ್ವಶಃ ।**
**ಅನ್ಯಥಾ ಧರ್ಮನಾಶಃ ಸ್ಯಾತ್ಸಾಂಗತಾನಾಮಿವಾನಘ ॥೪೬॥**

ಆತ್ಮನು ಒಬ್ಬನೇ ಆದಮೇಲೆ, ಅವನಿಗೆ ಯಾವ ಸಂಬಂಧವೂ ಇಲ್ಲದ ಮೇಲೆ, ವರ್ಣಾಶ್ರಮವ್ಯವಸ್ಥೆ, ಪ್ರಾಯಶ್ಚಿತ್ತಾದಿಗಳೂ ಏಕೆ? ಎಂದರೆ, ಲೋಕವನ್ನು ಒಂದು ವ್ಯವಸ್ಥೆಯಲ್ಲಿಟ್ಟು ರಕ್ಷಿಸುವುದಕ್ಕಾಗಿಯೇ ಅವನ್ನು ಹೇಳಿರುವುದು. ಇಲ್ಲದೇ ಹೋದರೆ, ಬೌದ್ಧಚಾರ್ವಾಕಮತಗಳಂತೆ ವ್ಯವಸ್ಥೆಯಿಲ್ಲದೆ ಧರ್ಮವೆಲ್ಲವೂ ನಷ್ಟವಾಗುತ್ತಿತ್ತು.

**ಧರ್ಮನಾಶೇ ವಿನಷ್ಟಃ ಸ್ಯಾದ್ವರ್ಣಾಚಾರೋಽತಿವರ್ತಿತಃ ।**
**ಅತೋ ವೇದಪ್ರದಿಷ್ಟೇನ ಮಾರ್ಗೇಣ ಗಚ್ಛತಾಂ ಶುಭಂ ॥೪೭॥**

ವರ್ಣಗಳಿಗೂ ಆಶ್ರಮಗಳಿಗೂ ಉಕ್ತವಾಗಿರುವ ಕರ್ಮಗಳ ಆಚರಣೆಯೇ ಧರ್ಮವು. ಅದು ನಷ್ಟವಾದಲ್ಲಿ ವರ್ಣಾಶ್ರಮಗಳ ಆಚಾರಗಳೆಲ್ಲ ಕೆಡುವುವು. ಅದಲ್ಲದೆ ಸಾಮಾಜಿಕ ಮುಂತಾದ ವ್ಯವಹಾರಗಳೂ, ವ್ಯವಸ್ಥೆಗಳೂ ಈ ಧರ್ಮದ ಉಲ್ಲಂಘನೆಯಿಂದ ಹಾಳಾಗುವುವು. ಆದುದರಿಂದ ವೇದೋಕ್ತವಾದ ಮಾರ್ಗದಲ್ಲಿಯೇ ನಡೆಯುವುದರಿಂದ ಎಲ್ಲ ಜನರಿಗೂ ಒಳ್ಳೆಯದಾಗುವುದು.

॥ ಶ್ರೀಶುಕ ಉವಾಚ ॥

**ಸಂದೇಹೋ ವರ್ತತೇ ರಾಜನ್ನ ನಿವರ್ತತಿ ಮೇ ಕ್ವಚಿತ್ ।**
**ಭವತಾ ಕಥಿತಂ ಯತ್ತಚ್ಛೃಣ್ವತೋ ಮೇ ನರಾಧಿಪ ॥೪೮॥**

ಓ ಪ್ರಜೆಗಳಿಗೆ ಒಡೆಯನಾದ ರಾಜನೇ, ನೀನು ಹೇಳಿದುದನ್ನು ಕೇಳಿದರೂ ನನ್ನ ಸಂದೇಹವು ಇನ್ನೂ ಹೋಗಲೇ ಇಲ್ಲವು. ಅದು ಇದ್ದೇ ಇದೆ, ಎಂದು ಶುಕನು ಜನಕರಾಜನಿಗೆ ಹೇಳಿದನು.

**ವೇದಧರ್ಮೇಷು ಹಿಂಸಾ ಸ್ಯಾದಧರ್ಮಬಹುಲಾ ಹಿ ಸಾ ।**
**ಕಥಂ ಮುಕ್ತಿಪ್ರದೋ ಧರ್ಮೋ ವೇದೋಕ್ತೋ ಬತ ಭೂಪತೇ ॥**

ಯಜ್ಞಯಾಗಾದಿ ವೇದೋಕ್ತಕರ್ಮಗಳಲ್ಲಿ ಪಶುಹಿಂಸೆಯು ಆಗುತ್ತದೆ. ಆ ಹಿಂಸೆಯು ಅಧರ್ಮವಲ್ಲವೇ? ಅಂತಹ ವೇದಧರ್ಮವು ಹೇಗೆ ಮುಕ್ತಿಯನ್ನುಂಟು ಮಾಡೀತು? ನನಗೇಕೋ ಸಂಶಯವಾಗುತ್ತದೆ.

**ಪ್ರತ್ಯಕ್ಷೇಣ ತ್ವನಾಚಾರಃ ಸೋಮಪಾನಂ ನರಾಧಿಪ ।**
**ಪಶೂನಾಂ ಹಿಂಸನಂ ತದ್ವದ್ಭಕ್ಷಣಂ ಚಾಮಿಷಸ್ಯ ಚ ॥೫೦॥**

ಯಜ್ಞದಲ್ಲಿ ಆಚರಿಸುವ ಮದ್ಯಸದೃಶವಾದ ಸೋಮರಸದ ಪಾನವು ಪ್ರತ್ಯಕ್ಷವಾಗಿಯೇ ಇರುವ ಅನಾಚಾರವು. ಓ ರಾಜನೇ, ಅಂತೆಯೇ, ಪಶುಹಿಂಸೆಯೂ, ಮಾಂಸಭಕ್ಷಣವೂ ಇವೆಲ್ಲ ಅಧರ್ಮವೇ ಆಗುವುದಿಲ್ಲವೇ ?

**ಸೌತ್ರಾಮಣೌ ತಥಾ ಪ್ರೋಕ್ತಃ ಪ್ರತ್ಯಕ್ಷೇಣ ಸುರಾಗ್ರಹಃ ।**
**ದ್ಯೂತಕ್ರೀಡಾ ತಥಾ ಪ್ರೋಕ್ತಾ ವ್ರತಾನಿ ವಿವಿಧಾನಿ ಚ ॥೫೦॥**

ಅಲ್ಲದೆ, ಸೌತ್ರಾಮಣಿ ಎಂಬ ಯಜ್ಞದಲ್ಲೂ, ಸೋಮಯಾಗಾದಿಗಳಲ್ಲೂ ಪ್ರತ್ಯಕ್ಷವಾಗಿ ಶ್ರುತಿಯೇ ಸುರಾಪಾನವನ್ನು ವಿಧಿಸಿರುತ್ತದೆ. ರಾಜಸೂಯಾದಿಗಳಲ್ಲಿ ಜೂಜಾಟವೂ ಕೂಡ ಹೇಳಲ್ಪಟ್ಟಿದೆ. ಅಲ್ಲದೆ, ಬ್ರಹ್ಮಚಾರಿಪುಂಶ್ಚಲಿಯರ ಸಂಭೋಗ ಮುಂತಾದ ಕೆಲವುನಿಷಿದ್ಧವ್ರತಗಳೂ ಹೇಳಲ್ಪಟ್ಟಿವೆ. ಹೀಗಿರುವಾಗ ಇವೆಲ್ಲವೂ ಅಧರ್ಮವಲ್ಲವೇ ?

**ಶ್ರೂಯತೇ ಸ್ಮ ಪುರಾ ಹ್ಯಾಸೀಚ್ಛಶಬಿಂದುರ್ನೃಪೋತ್ತಮಃ ।**
**ಯಜ್ವಾ ಧರ್ಮಪರೋ ನಿತ್ಯಂ ವದಾನ್ಯಃ ಸತ್ಯಸಾಗರಃ ॥೫೨॥**

ಹಿಂದೆ ಶಶಬಿಂದುವೆಂಬ ರಾಜಶ್ರೇಷ್ಠನು ಇದ್ದನೆಂದು ತಿಳಿಯಬರುತ್ತದೆ. ಅವನು ಯಜನ ಮುಂತಾದ ಕರ್ಮಾನುಷ್ಠಾನವನ್ನು ಮಾಡುತ್ತಲೂ, ಯಾವಾಗಲೂ ಧರ್ಮಪರನಾಗಿಯೂ ಉದಾರನಾಗಿಯೂ ಸತ್ಯವಂತನಾಗಿಯೂ ಇದ್ದನು.

**ಗೋಪ್ತಾ ಚ ಧರ್ಮಸೇತೂನಾಂ ಶಾಸ್ತಾ ಚೋತ್ಪಥಗಾಮಿನಾಂ ।**
**ಯಜ್ಞಾಶ್ಚ ವಿಹಿತಾಸ್ತೇನ ಬಹವೋ ಭೂರಿದಕ್ಷಿಣಾಃ ॥೫೩॥**

ಅಲ್ಲದೆ ಅವನ ಆಳ್ವಿಕೆಯಲ್ಲಿ ವರ್ಣಾಶ್ರಮಗಳ ಧರ್ಮಪಾಲನೆಯ ವ್ಯವಸ್ಥೆಯು ಚೆನ್ನಾಗಿ ಕಾಪಾಡಲ್ಪಟ್ಟಿತ್ತು. ದುಷ್ಟರ ಶಿಕ್ಷಣ, ಶಿಷ್ಟರ ರಕ್ಷಣಕಾರ್ಯವೂ ಸರಿಯಾಗಿ ನೆರವೇರುವುದಾಗಿತ್ತು. ಅವನು ತುಂಬ ದಕ್ಷಿಣೆಯುಳ್ಳ ಅನೇಕ ಯಜ್ಞಗಳನ್ನೂ ಮಾಡುತ್ತಿದ್ದನು.

**ಚರ್ಮಣಾಂ ಪರ್ವತೋ ಜಾತೋ ವಿಂಧ್ಯಾಚಲಸಮಃ ಪುನಃ ।**
**ಮೇಘಾಂಬುಪ್ಲಾವನಾಜ್ಜಾತಾ ನದೀ ಚರ್ಮಣ್ವತೀ ಶುಭಾ ॥೫೪॥**

ಅವನ ಯಜ್ಞಗಳಲ್ಲಿ ಕೊಲ್ಲಲ್ಪಟ್ಟ ಪಶುಗಳ ಚರ್ಮಗಳ ರಾಶಿಯು ವಿಂಧ್ಯಾಚಲದಷ್ಟು ದೊಡ್ಡದಾಯಿತು. ಅದರ ಶಿಖರಕ್ಕೆ ಮೇಘಗಳು ತಾಗಿ ತಾಗಿ ನೀರು

ಸುರಿದು, ಆ ಚರ್ಮರಾಶಿಯಿಂದ ಮಂಗಳಕರವಾದ ಚರ್ಮಣ್ವತೀ ಎಂಬ ಹೆಸರಿನ ನದಿಯೊಂದು ಹುಟ್ಟಿತು.

**ಸೋಽಪಿ ರಾಜಾ ದಿವಂ ಯಾತಃ ಕೀರ್ತಿರಸ್ಯಾಚಲಾ ಭುವಿ ।**
**ಏವಂ ಧರ್ಮೇಷು ವೇದೇಷು ನ ಮೇ ಬುದ್ಧಿಃ ಪ್ರವರ್ತತೇ ॥೫೫॥**

ಆ ರಾಜನು ಅಷ್ಟೊಂದು ಪಶುಹಿಂಸೆಯನ್ನು ಮಾಡಿದರೂ ಸ್ವರ್ಗಕ್ಕೇ ಹೋದನು. ಅಷ್ಟೇ ಅಲ್ಲ, ಭೂಲೋಕದಲ್ಲಿ ಅವನ ಕೀರ್ತಿಯು ದಿಕ್ಕುದಿಕ್ಕುಗಳಿಗೂ ಹರಡಿತು. ಆದರೂ ಹೀಗೆ ಹಿಂಸೆಯಿಂದ ತುಂಬಿದ ವೇದೋಕ್ತಧರ್ಮವು ನನಗೆ ಸರಿಯಾಗಿ ಒಪ್ಪಿಗೆಯಾಗುವುದೇ ಇಲ್ಲವು.

**ಸ್ತ್ರೀಸಂಗೇನ ಸದಾ ಭೋಗೇ ಸುಖಮಾಪ್ನೋತಿ ಮಾನವಃ ।**
**ಅಲಾಭೇ ದುಃಖಮತ್ಯಂತಂ ಜೀವನ್ಮುಕ್ತಃ ಕಥಂ ಭವೇತ್ ॥೫೬॥**

ಸಂಸಾರದಲ್ಲಿದ್ದ ಮೇಲೆ ಸ್ತ್ರೀಸಂಗದಿಂದ ಯಾವಾಗಲೂ ಭೋಗವಾದರೆ ಗೃಹಸ್ಥನು ಸುಖಪಡುತ್ತಾನೆ. ಅದಾಗದಿದ್ದರೆ ಅವನು ತುಂಬ ದುಃಖಪಡುತ್ತಾನೆ. ಎಂದ ಮೇಲೆ ಸಂಸಾರದಲ್ಲಿದ್ದೂ ಮನುಷ್ಯನು ಜೀವನ್ಮುಕ್ತನಾಗಿರುವುದು ಹೇಗೆ?

॥ ಜನಕ ಉವಾಚ ॥

**ಹಿಂಸಾ ಯಜ್ಞೇಷು ಪ್ರತ್ಯಕ್ಷಾ ಸಾಽಹಿಂಸಾ ಪರಿಕೀರ್ತಿತಾ ।**
**ಉಪಾಧಿಯೋಗತೋ ಹಿಂಸಾ ನಾನ್ಯಥೇತಿ ವಿನಿರ್ಣಯಃ ॥೫೭॥**

ಜನಕರಾಜನು ಹೇಳಿದನು — ಓ ಶುಕುನೇ, ಶ್ರುತ್ಯುಕ್ತವಾದ, ಯಜ್ಞಕ್ಕೆ ಸಂಬಂಧಿಸಿದ, ಪಶುವಿನ ಹಿಂಸೆಯು ಹಿಂಸೆಯಲ್ಲವೆಂದು 'ಅಹಿಂಸನ್ಸರ್ವಭೂತಾನ್ಯನ್ಯತ್ರ ತೀರ್ಥೇಭ್ಯಃ' ಇತ್ಯಾದಿಯಾದ ಶ್ರುತಿಯಲ್ಲಿ ಹೇಳಿದೆ. ಅದಲ್ಲದೆ ರಾಗ ಮುಂತಾದ ಉಪಾಧಿಯಿಂದ ಮಾಡಿದ ಹಿಂಸೆಯೇ ಹಿಂಸೆಯು, ಶಾಸ್ತ್ರದಲ್ಲಿ ವಿಹಿತವಾಗಿದ್ದರೆ ಕ್ಷತ್ರಿಯರ ಧರ್ಮದಲ್ಲಿ ಹೇಗೋ ಹಾಗೆ, ಅದು ಹಿಂಸೆಯಲ್ಲವು ಎಂದು ಸಿದ್ಧಾಂತವು.

**ಯಥಾ ಚೇಂಧನಸಂಯೋಗಾದಗ್ನೌ ಧೂಮಃ ಪ್ರವರ್ತತೇ ।**
**ತದ್ವಿಯೋಗಾತ್ತಥಾ ತಸ್ಮಿನ್ನಿರ್ಧೂಮತ್ವಂ ವಿಭಾತಿ ವೈ ॥೫೮॥**

**ಅಹಿಂಸಾಂ ಚ ತಥಾ ವಿದ್ಧಿ ವೇದೋಕ್ತಾಂ ಮುನಿಸತ್ತಮ ।**
**ರಾಗಿಣಾಂ ಸಾಪಿ ಹಿಂಸೈವ ನಿಃಸ್ಪೃಹಾಣಾಂ ನ ಸಾ ಮತಾ ॥೫೯॥**

ಹೇಗೆ ಹಸಿಯಾದ ಕಟ್ಟಿಗೆಯ ಸಂಬಂಧದಿಂದ ಬೆಂಕಿಯಲ್ಲಿ ಹೊಗೆಯು ಏಳುವುದೋ ಹಾಗೆ ಹಸೀಕಟ್ಟಿಗೆಯ ಸಂಬಂಧವಿಲ್ಲದಿದ್ದರೆ ಹೊಗೆ ಏಳುವುದಿಲ್ಲವು. ಹೊಗೆಗೆ ಹಸೀಕಟ್ಟಿಗೆಯ ಸಂಬಂಧವೇ ಉಪಾಧಿಯು. ಹಾಗೆಯೇ ರಾಗದಿಂದ ರಹಿತವಾದ ಹಿಂಸೆಯು ಹಿಂಸೆಯಲ್ಲವು. ರಾಗಯುಕ್ತವಾದ ಹಿಂಸೆಯೇ ಹಿಂಸೆಯು. ಯಾವನು ನಿಷ್ಕಾಮನಾಗಿ ಕರ್ಮ ಮಾಡುವನೋ ಅವನು ಮಾಡುವ ಹಿಂಸೆಯು ಹಿಂಸೆಯಲ್ಲವು. ಹಿಂಸೆಗೆ ರಾಗವೇ ಉಪಾಧಿಯು.

**ಅರಾಗೇಣ ಚ ಯತ್ಕರ್ಮ ತಥಾಹಂಕಾರವರ್ಜಿತಂ ।**
**ಅಕೃತಂ ವೇದ ವಿದ್ವಾಂಸಃ ಪ್ರವದಂತಿ ಮನೀಷಿಣಃ ॥೬೦॥**

ರಾಗವಿಲ್ಲದೆಯೂ, ಅಹಂಕಾರವಿಲ್ಲದೆಯೂ, ಮಾಡಿದ ಕರ್ಮವು ಕರ್ಮವಲ್ಲವೆಂದೂ ಎಂದರೆ ಬಂಧಕವಾಗಲಾರದೆಂದೂ ವೇದಗಳನ್ನು ತಿಳಿದವರು ಹೇಳುತ್ತಾರೆ.

**ಗೃಹಸ್ಥಾನಾಂ ತು ಹಿಂಸೈವ ಯಾ ಯಜ್ಞೇ ದ್ವಿಜಸತ್ತಮ ।**
**ಅರಾಗೇಣ ಚ ಯತ್ಕರ್ಮ ತಥಾಹಂಕಾರವರ್ಜಿತಂ ॥೬೧॥**
**ಸಾಽಹಿಂಸೈವ ಮಹಾಭಾಗ ಮುಮುಕ್ಷೂಣಾಂ ಜಿತಾತ್ಮನಾಂ ॥**

ಓ ದ್ವಿಜಶ್ರೇಷ್ಠನಾದ ಶುಕನೇ, ರಾಗಿಗಳಾದ ಕರ್ಮಫಲದಲ್ಲಿ ಆಶೆಯುಳ್ಳ, ಗೃಹಸ್ಥರು ಯಜ್ಞಯಾಗಗಳಲ್ಲಿ ಮಾಡುವ ಹಿಂಸೆಯು ಹಿಂಸೆಯೇ ಹೌದು. ಮತ್ತು ಅದು ಬಂಧಕವೂ ಆಗುತ್ತದೆ. ಓ ಪುಣ್ಯಶಾಲಿಯಾದ ಶುಕನೇ, ಇಂದ್ರಿಯಗಳನ್ನು ಜಯಿಸಿರುವ ನಿಃಸ್ಪೃಹರಾದ ಮುಮುಕ್ಷುಗಳಿಂದ ಈಶ್ವರಾರ್ಪಣದೃಷ್ಟಿಯಿಂದ ಮಾಡಲ್ಪಟ್ಟ ವೇದಶಾಸ್ತ್ರವಿಹಿತವಾದ ಕರ್ಮದಲ್ಲಿನ ಹಿಂಸೆಯು ಹಿಂಸೆಯಲ್ಲವು. ಅದು ಬಂಧಕವೂ ಆಗುವುದಿಲ್ಲವು. ಅದರಲ್ಲಿ ರಾಗವೆಂಬ ಉಪಾಧಿಯು ಇಲ್ಲದಿರುವುದೇ ಕಾರಣವು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಅಷ್ಟಾದಶೋಽಧ್ಯಾಯಃ**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹದಿನೆಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ



## ಪ್ರಥಮಸ್ಕಂಧೇ

|| ಏಕೋನವಿಂಶೋಽಧ್ಯಾಯಃ ||

### ಹತ್ತೊಂಬತ್ತನೆಯ ಅಧ್ಯಾಯವು

|| ಓಂ ||

|| ಶ್ರೀಶುಕ ಉವಾಚ ||

**ಸಂದೇಹೋಽಯಂ ಮಹಾರಾಜ ವರ್ತತೇ ಹೃದಯೇ ಮಮ ।**
**ಮಾಯಾಮಧ್ಯೇ ವರ್ತಮಾನಃ ಸ ಕಥಂ ನಿಃಸ್ಪೃಹೋ ಭವೇತ್ ॥೧॥**

ಶುಕಮುನಿಯು ಜನಕಮಹಾರಾಜನನ್ನು ಪುನಃ ಪ್ರಶ್ನೆಮಾಡಿದನು—ಓ ಜನಕಮಹಾರಾಜನೇ, ನನ್ನ ಮನಸ್ಸಿನಲ್ಲಿ ಈ ಸಂಶಯವು ಇರುತ್ತದೆ. ಮಾಯಾಮಯವಾದ ಸಂಸಾರದ ವ್ಯವಹಾರಗಳ ಮಧ್ಯದಲ್ಲಿದ್ದೂ ಯಾವ ಸಂಬಂಧವೂ ಇಲ್ಲದೆ, ಆಶೆಯಿಲ್ಲದೆ ಇರುವುದು ಹೇಗೆ ? ಜಲದಲ್ಲಿದ್ದರೂ ಜಲಸಂಬಂಧವಿಲ್ಲವೆಂದು ಹೇಳುವಂತೆ ಅದು ಸಾಹಸದ ಮಾತಾಗುವುದಲ್ಲವೇ ?

**ಶಾಸ್ತ್ರಜ್ಞಾನಂ ಚ ಸಂಪ್ರಾಪ್ಯ ನಿತ್ಯಾನಿತ್ಯವಿಚಾರಣಂ ।**
**ತ್ಯಜತೇ ನ ಮನೋಮೋಹಂ ಸ ಕಥಂ ಮುಚ್ಯತೇ ನರಃ ॥೨॥**

ವೇದಾಂತಶ್ರವಣವನ್ನು ಮಾಡಿ ಜ್ಞಾನವನ್ನು ಪಡೆದು, ಇದು ನಿತ್ಯವಾದುದು, ಇದು ಅನಿತ್ಯವಾದುದು ಎಂಬ ವಿವೇಕವು ಬಂದರೂ, ಅಂತಹ ಜ್ಞಾನವು ಪರೋಕ್ಷವಾದುದರಿಂದ ಸಂಸಾರದಲ್ಲಿರುವ ಮನಸ್ಸಿನ ಮೋಹವು ಹೋಗುವುದಿಲ್ಲವು. ಅಂಥವನು ಹೇಗೆ ಮುಕ್ತನಾದಾನು ?

**ಅಂತರ್ಗತಂ ತಮಶ್ಛೇತ್ತುಂ ಶಾಸ್ತ್ರಾದ್ಬೋಧೋ ಹಿ ನ ಕ್ಷಮಃ ।**
**ಯಥಾ ನ ನಶ್ಯತಿ ತಮಃ ಕೃತಯಾ ದೀಪವಾರ್ತಯಾ ॥೩॥**

ಮನಸ್ಸಿನೊಳಗಿರತಕ್ಕ ಅಜ್ಞಾನವನ್ನು ಹೋಗಲಾಡಿಸಲು ಕೇವಲ ಶಾಸ್ತ್ರ ಜ್ಞಾನವು ಸಾಲದು. ಹೇಗೆ ಅಂಧಕಾರವು ದೀಪದ ಮಾತಿನ ಪ್ರಸ್ತಾಪಮಾತ್ರದಿಂದ ಹೋಗುವುದಿಲ್ಲವೋ ಅಂತೆಯೇ ಅಜ್ಞಾನವು ಶಾಬ್ದ ಜ್ಞಾನದಿಂದ ಹೋಗದು. ಅದಕ್ಕೆ ಸ್ವಾನುಭವವೇ ಬೇಕು.

**ಅದ್ರೋಹಃ ಸರ್ವಭೂತೇಷು ಕರ್ತವ್ಯಃ ಸರ್ವದಾ ಬುಧೈಃ ।**
**ಸ ಕಥಂ ರಾಜಶಾರ್ದೂಲ ಗೃಹಸ್ಥಸ್ಯ ಭವೇತ್ತಥಾ ॥೪॥**

ಪಂಡಿತರಾದವರು, ಮುಮುಕ್ಷುಗಳು, ಯಾವಾಗಲೂ ಸರ್ವಪ್ರಾಣಿಗಳಲ್ಲಿಯೂ ಕೆಟ್ಟದ್ದನ್ನೆಣಿಸಬಾರದು. ರಾಜೋತ್ತಮನಾದ ಓ ಜನಕನೇ, ಇದು ಗೃಹಸ್ಥನಿಗೆ ಹೇಗೆ ಸಾಧ್ಯವು ?

**ವಿತ್ತೈಷಣಾ ನ ತೇ ಶಾಂತಾ ತಥಾ ರಾಜಸುಖೈಷಣಾ ।**
**ಜಯೈಷಣಾ ಚ ಸಂಗ್ರಾಮೇ ಜೀವನ್ಮುಕ್ತಃ ಕಥಂ ಭವೇಃ ॥೫॥**

ಓ ದೊರೆಯೇ, ದಿನವೂ ಕಂದಾಯದಿಂದ ಬೊಕ್ಕಸವನ್ನು ತುಂಬಿಸುವ ನಿನಗೆ ದುಡ್ಡುಬೇಕೆಂಬ ಇಚ್ಛೆಯು ಶಾಂತವಾಗಿಲ್ಲವು. ಹಾಗೆಯೇ ನೀನು ರಾಜ್ಯವನ್ನಾಳುತ್ತಿರುವುದರಿಂದ ರಾಜ್ಯಾಧಿಕಾರಸುಖಾಭಿಲಾಷೆಯೂ ನಿವೃತ್ತವಾಗಿಲ್ಲವು. ಯುದ್ಧದಲ್ಲಿ ಜಯಿಸಬೇಕೆಂಬ ಇಚ್ಛೆಯೂ ಹೋಗಿಲ್ಲವು. ಇಂತಹ ನೀನು ಜೀವನ್ಮುಕ್ತನು ಹೇಗೆ ?

**ಚೋರೇಷು ಚೌರಬುದ್ಧಿಸ್ತೇ ಸಾಧುಬುದ್ಧಿಸ್ತು ತಾಪಸೇ ।**
**ಸ್ವಪರತ್ವಂ ತವಾಪ್ಯಸ್ತಿ ವಿದೇಹಸ್ತ್ವಂ ಕಥಂ ನೃಪ ॥೬॥**

ಓ ದೊರೆಯೇ, ನಿನಗೆ ಕಳ್ಳರಲ್ಲಿ ದುಷ್ಟರೆಂಬ ಬುದ್ಧಿಯೂ, ಮುನಿಗಳಲ್ಲಿ ಸಾಧುಗಳೆಂಬ ಬುದ್ಧಿಯೂ ಇರುತ್ತದೆ. ಇದು ಪರರದು, ಇವರು ನಮ್ಮವರು, ಇವರು ಪರಕೀಯರು ಎಂಬ ಭೇದಬುದ್ಧಿಯು ಹೋಗಿಲ್ಲವು. ಇಂತಹ ನೀನು ಜೀವನ್ಮುಕ್ತನು ಹೇಗಾಗಿರುವೆ ?

**ಕಟುತೀಕ್ಷ್ಣಕಷಾಯಾಮ್ಲರಸಾನ್ವೇತ್ಸಿ ಶುಭಾಶುಭಾನ್ ।**
**ಶುಭೇಷು ರಮತೇ ಚಿತ್ತಂ ನಾಶುಭೇಷು ತಥಾ ನೃಪ ॥೭॥**

ಓ ದೊರೆಯೇ, ಇದು ಕಹಿ, ಇದು ಕಾರ, ಇದು ಒಗರು, ಇದು ಹುಳಿ ಎಂದು ಒಳ್ಳೆಯದಾದ ಮತ್ತು ಕೆಟ್ಟದಾದ ಎಲ್ಲ ರಸಗಳನ್ನೂ ನೀನು ತಿಳಿದಿರುತ್ತೀಯೆ ;

ಅವುಗಳಲ್ಲಿ ಒಳ್ಳೆಯದಾದುದನ್ನು ನಿನ್ನ ಮನಸ್ಸು ಅಪೇಕ್ಷಿಸುತ್ತದೆ ಎಂದರೆ ಅವುಗಳ ಸೇವನೆಯಿಂದ ಉಂಟಾಗುವ ಸುಖವನ್ನು ಬಯಸುತ್ತದೆ. ಹಾಗೆಯೇ ಕೆಟ್ಟುದನ್ನು ಸೇವಿಸುವುದಿಲ್ಲ.

**ಜಾಗ್ರತ್ಸ್ವಪ್ನಸುಷುಪ್ತಿಶ್ಚ ತವ ರಾಜನ್ ಭವಂತಿ ಹಿ ।**
**ಅವಸ್ಥಾಸ್ತು ಯಥಾಕಾಲಂ ತುರೀಯಾ ತು ಕಥಂ ನೃಪ ॥೮॥**

ಓ ರಾಜನೇ, ಪ್ರತಿನಿತ್ಯವೂ ಆಯಾ ಕಾಲದಲ್ಲಿ ಒಂದಾದಮೇಲೊಂದರಂತೆ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಮೂರು ಅವಸ್ಥೆಗಳೂ ನಿನಗೆ ಬರುತ್ತಿರುತ್ತವೆ. ಹೀಗಿರುವಾಗ ನಿನಗೆ ಜೀವನ್ಮುಕ್ತಿರೂಪವಾದ ನಾಲ್ಕನೆಯದಾದ ಕೊನೆಯ ಅವಸ್ಥೆಯು ಬಂದಿರುವುದೆಂತು ?

**ಪದಾತ್ಯಶ್ಚ ರಥೇಭಾಶ್ಚ ಸರ್ವೇ ವೈ ವಶಗಾ ಮಮ ।**
**ಸ್ವಾಮ್ಯಹಂ ಚೈವ ಸರ್ವೇಷಾಂ ಮನ್ಯಸೇ ತ್ವಂ ನ ಮನ್ಯಸೇ ॥೯॥**

ಕಾಲಾಳು, ಕುದುರೆ, ರಥ, ಆನೆ ಮೊದಲಾದುವು ಎಲ್ಲವೂ ನನ್ನವು. ಇವುಗಳಿಗೆ ಎಲ್ಲಕ್ಕೂ ನಾನು ಒಡೆಯನು ಎಂದು ನೀನು ತಿಳಿಯುತ್ತೀಯೋ ಅಥವಾ ತಿಳಿಯುವುದಿಲ್ಲವೋ ?

**ಮಿಷ್ಟಮತ್ಸಿ ಸದಾ ರಾಜನ್ ಮುದಿತೋ ವಿಮನಾಸ್ತಥಾ ।**
**ಮಾಲಾಯಾಂ ಚ ತಥಾ ಸರ್ಪೇ ಸಮದೃಕ್ ಕ್ವ ನೃಪೋತ್ತಮ ॥೧೦॥**

ಓ ರಾಜಶ್ರೇಷ್ಠನೇ, ನೀನು ಯಾವಾಗಲೂ ರುಚಿಕರವಾದ ಮೃಷ್ಟಾನ್ನವನ್ನೇ ಸಂತೋಷದಿಂದ ಊಟಮಾಡುತ್ತೀಯೆ. ಪುಷ್ಪಹಾರವನ್ನು ನೋಡಿ ಸಂತೋಷಿಸುತ್ತೀಯೆ. ಹಾಗೂ ಸರ್ಪವನ್ನು ನೋಡಿ ವ್ಯಥೆಗೊಳ್ಳುವೆ. ಹೀಗೆ ಭೇದಬುದ್ಧಿಯಿರುವ ನಿನಗೆ ಎಲ್ಲದರಲ್ಲಿಯೂ ಒಂದೇ ತೆರನಾದ ದೃಷ್ಟಿಯು ಇದೆ ಎಂದು ಹೇಳುವುದು ಮತ್ತು ತಿಳಿಯುವುದು ಹೇಗೆ ?

**ವಿಮುಕ್ತಸ್ತು ಭವೇದ್ರಾಜನ್ ಸಮಲೋಷ್ಟಾಶ್ಮಕಾಂಚನಃ ।**
**ಏಕಾತ್ಮಬುದ್ಧಿಃ ಸರ್ವತ್ರ ಹಿತಕೃತ್ಸರ್ವಜಂತುಷು ॥೧೧॥**

ಜೀವನ್ಮುಕ್ತನಾದವನು ಕಲ್ಲು, ಮಣ್ಣು, ಸುವರ್ಣ ಇವೆಲ್ಲವೂ ಒಂದೇ ಬ್ರಹ್ಮಚೈತನ್ಯದಿಂದ ವ್ಯಾಪ್ತವಾದುವೆಂದೂ ಅನಿತ್ಯವಾದುವೆಂದೂ ತಿಳಿಯಬೇಕು.

ಎಲ್ಲೆಡೆಯಲ್ಲಿಯೂ ಆತ್ಮನೊಬ್ಬನೇ ಇರುವವನೆಂದು ತಿಳಿದು ಎಲ್ಲ ಪ್ರಾಣಿಗಳಿಗೂ ಹಿತವನ್ನು ಮಾಡುತ್ತಲಿರಬೇಕು.

**ನ ಮೇಽದ್ಯ ರಮತೇ ಚಿತ್ತಂ ಗೃಹದಾರಾದಿಷು ಕ್ವಚಿತ್ ।**
**ಏಕಾಕೀ ನಿಃಸ್ಪೃಹೋಽತ್ಯರ್ಥಂ ಚರೇಯಮಿತಿ ಮೇ ಮತಿಃ ॥೧೨॥**

ಓ ರಾಜನೇ, ಮನೆ, ಹೆಂಡತಿ ಮೊದಲಾದವುಗಳಲ್ಲಿ ಯಾವುದರಲ್ಲಿಯೂ ನನ್ನ ಮನಸ್ಸು ಸಂತೋಷಪಡುವುದೇ ಇಲ್ಲವು. ನಾನು ಒಬ್ಬಂಟಿಗನಾಗಿ ಯಾವ ಅಪೇಕ್ಷೆಯೂ ಇಲ್ಲದೆ ಬೇಕಾದಂತೆ ಪರ್ಯಟನಮಾಡುತ್ತಿರಬೇಕೆನ್ನಿಸುತ್ತದೆ.

**ನಿಸ್ಸಂಗೋ ನಿರ್ಮಮಃ ಶಾಂತಃ ಪತ್ರಮೂಲಫಲಾಶನಃ ।**
**ಮೃಗವದ್ವಿಚರಿಷ್ಯಾಮಿ ನಿರ್ದ್ವಂದ್ವೋ ನಿಷ್ಪರಿಗ್ರಹಃ ॥೧೩॥**

ನಾನಾದರೋ ಸರ್ವಸಂಗರಹಿತನಾಗಿಯೂ, ತನ್ನದು ನನ್ನದೆಂಬ ಭೇದಭಾವ ರಹಿತನಾಗಿಯೂ, ಶಾಂತನಾಗಿಯೂ, ಎಲೆ ಗೆಡ್ಡೆ ಗೆಣಸು, ಹಣ್ಣು ಮೊದಲಾದವುಗಳನ್ನು ತಿನ್ನುತ್ತಾ ಮೃಗಗಳಂತೆ ಆತಂಕವಿಲ್ಲದೆ ಇರುತ್ತೇನೆ. ನನಗೆ ಶೀತೋಷ್ಣ, ಸುಖದುಃಖ ಮೊದಲಾದ ದ್ವಂದ್ವಗಳ ಬಾಧೆಯೇ ಆಗಲಿ, ಯಾವ ವಸ್ತುವನ್ನೂ ಸ್ವೀಕರಿಸಿ ಶೇಖರಿಸಿಡಲು ಬಯಕೆಯಾಗಲಿ ಇರುವುದಿಲ್ಲವು.

**ಕಿಂ ಮೇ ಗೃಹೇಣ ವಿತ್ತೇನ ಭಾರ್ಯಯಾ ಚ ಸುರೂಪಯಾ ।**
**ವಿರಾಗಮನಸಃ ಕಾಮಂ ಗುಣಾತೀತಸ್ಯ ಪಾರ್ಥಿವ ॥೧೪॥**

ಓ ದೊರೆಯೇ, ತೀವ್ರವೈರಾಗ್ಯದಿಂದ ಕೂಡಿರುವ, ಸತ್ತ್ವರಜಸ್ತಮೋಗುಣಗಳಿಂದ ಬಿಡಲ್ಪಟ್ಟಿರುವ ನನಗೆ ಸುಖಸಾಧನಗಳಿಂದ ಕೂಡಿದ ಮನೆಯಿಂದಾಗಲೀ, ಧನದಿಂದಾಗಲೀ ಸುಂದರಿಯಾದ ಹೆಂಡತಿಯಿಂದಾಗಲೀ ಆಗಬೇಕಾದುದೇನು ?

**ಚಿಂತ್ಯಸೇ ವಿವಿಧಾಕಾರಂ ನಾನಾರಾಗಸಮಾಕುಲಂ ।**
**ದಂಭೋಽಯಂ ಕಿಲ ತೇ ಭಾತಿ ವಿಮುಕ್ತೋಽಸ್ಮೀತಿ ಭಾಷಸೇ ॥**

ಹೀಗಿರುವಲ್ಲಿ ನೀನಾದರೋ ರಾಗದಿಂದ ಕೂಡಿರುವ ಅನೇಕ ವಿಧವಾದ ಮನೋರಥಗಳನ್ನು ಕಲ್ಪಿಸಿಕೊಳ್ಳುತ್ತೀಯೆ. ವಿಷಯಗಳನ್ನನುಭವಿಸಲು ತವಕ

ಪಡುತ್ತೀಯೆ. ಆದರೂ ನಾನು ಜೀವನ್ಮುಕ್ತನೆಂದು ಹೇಳಿಕೊಳ್ಳುತ್ತೀಯೆ. ನಿನ್ನನ್ನು ನಂಬುವುದು ಹೇಗೆ ? ಇದು ಹೊರಗಿನ ನಟನೆಯೇ ಸರಿ.

**ಕದಾಚಿಚ್ಛತ್ರುಜಾ ಚಿಂತಾ ಧನಜಾ ಚ ಕದಾಚನ ।**
**ಕದಾಚಿತ್ಸೈನ್ಯಜಾ ಚಿಂತಾ ನಿಶ್ಚಿಂತೋಽಸಿ ಕದಾ ನೃಪ ॥೧೬॥**

ಓ ದೊರೆಯೇ, ರಾಜ್ಯವಾಳುತ್ತಿರುವ ನಿನಗೆ ಒಮ್ಮೆ ಶತ್ರುಗಳಿಂದ ಉಂಟಾಗುವ ಆತಂಕವೂ, ಒಮ್ಮೆ ಹಣವನ್ನು ಕೂಡಿಟ್ಟಿರಬೇಕೆಂದು ಚಿಂತೆಯೂ, ಮತ್ತೊಮ್ಮೆ ಸೈನ್ಯವನ್ನು ಸಿದ್ಧಗೊಳಿಸಬೇಕೆಂಬ ಆಲೋಚನೆಯೂ ಇರುತ್ತದೆ. ಹೀಗಿರುವಾಗ ನೀನು ನಿಶ್ಚಿಂತನಾಗಿರುವುದು ಯಾವಾಗ ?

**ವೈಖಾನಸಾ ಯೇ ಮುನಯೋ ಮಿತಾಹಾರಾ ಜಿತವ್ರತಾಃ ।**
**ತೇಽಪಿ ಮುಹ್ಯಂತಿ ಸಂಸಾರೇ ಜಾನಂತೋಽಪಿ ಹ್ಯಸತ್ಯತಾಂ ॥೧೭॥**

ಓ ರಾಜನೇ, ಆಹಾರನಿಯಮದಿಂದ ತುಂಬ ಕಟ್ಟುನಿಟ್ಟಾದ ರೀತಿಯಲ್ಲಿ ತಪಸ್ಸು ಮಾಡುತ್ತಿರುವ ವೈಖಾನಸರೆಂಬ ಮುನಿಗಳೂ ಸಹ ಈ ಸಂಸಾರವು ಅನಿತ್ಯವೆಂದು ತಿಳಿದಿದ್ದರೂ ಅದರಲ್ಲಿ ಮೋಹಗೊಳ್ಳುತ್ತಾರೆ. ಇನ್ನು ನಿನ್ನ ಪಾಡೇನು ?

**ತವ ವಂಶಸಮುತ್ಥಾನಾಂ ವಿದೇಹಾ ಇತಿ ಭೂಪತೇ ।**
**ಕುಟಿಲಂ ನಾಮ ಜಾನೀಹಿ ನಾನ್ಯಥೇತಿ ಕದಾಚನ ॥೧೮॥**

ಓ ಮಹಾರಾಜನೇ, ಹೀಗಿರುತ್ತಿರಲು ನಿನ್ನ ಕುಲದ ರಾಜರಿಗೆಲ್ಲಾ ವಿದೇಹ (ದೇಹವಿದ್ದರೂ ಇಲ್ಲದ ಜೀವನ್ಮುಕ್ತರೆಂದು) ಹೆಸರು ಇದೆ. ಇದು ಯಾವಾಗಲೂ ಮೋಸದ ಹೆಸರೇ ಹೊರತು ನಿಜವಾಗಿರುವುದಲ್ಲವು ಎಂದು ತಿಳಿ.

**ವಿದ್ಯಾಧರೋ ಯಥಾ ಮೂರ್ಖೋ ಜನ್ಮಾಂಧಸ್ತು ದಿವಾಕರಃ ।**
**ಲಕ್ಷ್ಮೀಧರೋ ದರಿದ್ರಶ್ಚ ನಾಮ ತೇಷಾಂ ನಿರರ್ಥಕಂ ॥೧೯॥**

ಲೋಕರೀತಿಯಾದರೋ ವಿಚಿತ್ರವಾಗಿದೆ. ಶುದ್ಧ ದಡ್ಡನನ್ನು ವಿದ್ಯಾಧರನೆಂದು ಕರೆಯುವರು. ಹುಟ್ಟುಕುರುಡನ ಹೆಸರು ದಿವಾಕರ (ಸೂರ್ಯ) ನೆಂದು ಇರುವುದು. ಹುಟ್ಟುದರಿದ್ರನನ್ನು ಲಕ್ಷ್ಮೀಧರ (ಧನವಂತ) ನೆನ್ನುವರು. ಆ ಜನರ ಹೆಸರುಗಳಿಗೆ ಅರ್ಥವೇ ಇಲ್ಲವು. ಅದರಂತೆಯೇ ನಿನ್ನ ವಂಶದ ಹೆಸರೂ ಇದೆ.

**ತವ ವಂಶೋದ್ಭವಾ ಯೇ ಯೇ ಶ್ರುತಾಃ ಪೂರ್ವೇ ಮಯಾ ನೃಪಾಃ ।**
**ವಿದೇಹಾ ಇತಿ ವಿಖ್ಯಾತಾ ನಾಮತಃ ಕರ್ಮತೋ ನ ತೇ ॥೨೦॥**

ಓ ದೊರೆಯೇ, ನಾನು ನಿಮ್ಮ ವಂಶದಲ್ಲಿ ಹಿಂದೆ ಇದ್ದವರೆಲ್ಲರೂ ವಿದೇಹರೆಂದು ಕೇಳಿರುತ್ತೇನೆ. ಆದರೆ ಅವರು ಹೆಸರಿನಿಂದ ವಿದೇಹರೇ ಹೊರತು ಕರ್ಮದಿಂದ, ನಡವಳಿಕೆಯಿಂದ ವಿದೇಹರು, ದೇಹಾಭಿಮಾನವಿಲ್ಲದವರು, ಅಲ್ಲವು.

**ನಿಮಿನಾಮಾಽಭವದ್ರಾಜಾ ಪೂರ್ವಂ ತವ ಕುಲೇನೃಪ ।**
**ಯಜ್ಞಾರ್ಥಂ ಸ ತು ರಾಜರ್ಷಿರ್ವಸಿಷ್ಠಂ ಸ್ವಗುರುಂ ಮುನಿಂ ॥೨೧॥**

ಓ ರಾಜನೇ, ಹಿಂದೆ ನಿಮ್ಮ ವಂಶದಲ್ಲಿ ನಿಮಿಯೆಂಬ ರಾಜನಿದ್ದನು. ರಾಜನಾಗಿದ್ದರೂ ಧರ್ಮಾಚರಣೆಯಿಂದ ಋಷಿಯಂತಿದ್ದ ಅವನು ಯಜ್ಞಮಾಡಲಪೇಕ್ಷಿಸಿ ಅದನ್ನು ಮಾಡಿಸಲು ಪುರೋಹಿತನೂ ಮತ್ತು ತನ್ನ ಗುರುವೂ ಆದ ವಸಿಷ್ಠ ಮುನಿಯನ್ನು ಕರೆದನು.

**ನಿಮಂತ್ರಯಾಮಾಸ ತದಾ ತಮುವಾಚ ನೃಪಂ ಮುನಿಃ ।**
**ನಿಮಂತ್ರಿತೋಽಸ್ಮಿ ಯಜ್ಞಾರ್ಥಂ ದೇವೇಂದ್ರೇಣಾಧುನಾ ಕಿಲ ॥೨೨॥**

ಆಗ ವಸಿಷ್ಠಮುನಿಯು ಆ ನಿಮಿರಾಜನನ್ನು ಕುರಿತು, ದೇವೇಂದ್ರನು ನಿನಗೆ ಮೊದಲೇ ನನ್ನನ್ನು ಯಜ್ಞಕ್ಕಾಗಿ ಕರೆದಿರುವನು. ನಾನು ಅಲ್ಲಿಗೆ ಹೋಗಬೇಕಾಗಿದೆ ಎಂದು ಹೇಳಿದನು.

**ಕೃತ್ವಾ ತಸ್ಯ ಮಖಂ ಪೂರ್ಣಂ ಕರಿಷ್ಯಾಮಿ ತವಾಪಿ ವೈ ।**
**ತಾವತ್ಕುರುಷ್ವ ರಾಜೇಂದ್ರ ಸಂಭಾರಂ ತು ಶನೈಃ ಶನೈಃ ॥೨೩॥**

ಓ ರಾಜಶ್ರೇಷ್ಠನೇ, ಆ ಇಂದ್ರನ ಯಜ್ಞವನ್ನು ಸಂಪೂರ್ಣವಾಗಿ ಆಚರಿಸಿ ಮುಗಿಸಿ ಆಮೇಲೆ ನಿನ್ನ ಯಜ್ಞವನ್ನೂ ಮಾಡಿಸುತ್ತೇನೆ. ಅಲ್ಲಿಯವರಿಗೆ ಅದಕ್ಕೆ ಬೇಕಾದ ಸಲಕರಣೆಗಳನ್ನು ಮೆಲ್ಲಮೆಲ್ಲಗೆ ಸಿದ್ಧಪಡಿಸುತ್ತಿರು.

**ಇತ್ಯುಕ್ತ್ವಾ ನಿರ್ಯಯೌ ಸೋಽಥ ಮಹೇಂದ್ರಯಜನೇ ಮುನಿಃ ।**
**ನಿಮಿರನ್ಯಂ ಗುರುಂ ಕೃತ್ವಾ ಚಕಾರ ಮಖಮುತ್ತಮಂ ॥೨೪॥**

ಹೀಗೆ ಹೇಳಿ ವಸಿಷ್ಠಮುನಿಯು ದೇವೇಂದ್ರನ ಯಜ್ಞಕ್ಕೆ ಹೋದನು. ಇತ್ತಲಾಗಿ ನಿಮಿರಾಜನು ಬೇರೆ ಒಬ್ಬರನ್ನು ಪುರೋಹಿತರನ್ನಾಗಿ ನಿಯಮಿಸಿಕೊಂಡು ತಾನು ಶ್ರೇಷ್ಠವಾದ ಯಾಗವನ್ನು ನೆರವೇರಿಸಿದನು.

**ತಚ್ಛ್ರುತ್ವಾ ಕುಪಿತೋಽತ್ಯರ್ಥಂ ವಸಿಷ್ಠೋ ನೃಪತಿಂ ಪುನಃ ।**
**ಶಶಾಪ ಚ ಪತತ್ವದ್ಯ ದೇಹಸ್ತೇ ಗುರುಲೋಪಕ ॥೨೫॥**

ಸ್ವರ್ಗದಿಂದ ಇಂದ್ರನ ಯಾಗವನ್ನು ಮುಗಿಸಿ ಹಿಂತಿರುಗಿ ಬಂದ ವಸಿಷ್ಠ ಋಷಿಯು, ನಿಮಿರಾಜನು ಮಾಡಿದ ಯಜ್ಞವಿಚಾರವನ್ನು ಕೇಳಿ ಹೆಚ್ಚಾದ ಸಿಟ್ಟಿನಿಂದ, ಎಲೈ ಗುರುವಿಗೆ ಮೋಸಮಾಡಿದ ಮೂರ್ಖನೇ, ನಿನ್ನ ದೇಹವು ಬಿದ್ದು ಹೋಗಲಿ ಎಂದು ರಾಜನಿಗೆ ಶಾಪವನ್ನು ಕೊಟ್ಟನು.

**ರಾಜಾಪಿ ತಂ ಶಶಾಪಾಥ ತವಾಪಿ ಚ ಪತತ್ವಯಂ ।**
**ಅನ್ಯೋನ್ಯಶಾಪಾತ್ಪತಿತೌ ತಾವೇವ ಚ ಮಯಾ ಶ್ರುತಂ ॥೨೬॥**

ಆಮೇಲೆ ನಿಮಿರಾಜನೂ ವಸಿಷ್ಠನನ್ನು ಕುರಿತು ನಿನ್ನ ಶರೀರವೂ ಬಿದ್ದು ಹೋಗಲಿ ಎಂದು ತಿರುಗಿ, ಪ್ರತಿಯಾಗಿ ಶಪಿಸಿದನು. ಹೀಗೆ ಪರಸ್ಪರ ಶಾಪದಿಂದ ಅವರಿಬ್ಬರೂ ಕೀಳಾದ ಸ್ಥಿತಿಗೆ ಇಳಿದರೆಂದು ಕೇಳಿರುತ್ತೇನೆ.

**ವಿದೇಹೇನ ಚ ರಾಜೇಂದ್ರ ಕಥಂ ಶಪ್ತೋ ಗುರುಃ ಸ್ವಯಂ ।**
**ವಿನೋದ ಇವ ಮೇ ಚಿತ್ತೇ ವಿಭಾತಿ ನೃಪಸತ್ತಮ ॥೨೭॥**

ಓ ರಾಜಶ್ರೇಷ್ಠನೇ, ವಿದೇಹವಂಶದವನಾದ ಜೀವನ್ಮುಕ್ತನಾದ ನಿಮಿರಾಜನು ತನ್ನ ತಪ್ಪಿದ್ದರೂ ಹೇಗೆ ತನ್ನ ಗುರುವನ್ನೇ ಶಪಿಸಿದನು? ಓ ಶ್ರೇಷ್ಠನಾದ ದೊರೆಯೇ, ಇದೇನೋ ನನ್ನ ಮನಸ್ಸಿಗೆ ಹುಡುಗಾಟದ ಹಾಗೆ ಕಾಣಿಸುತ್ತದೆ. ಇಂತಹವನು ಜೀವನ್ಮುಕ್ತನೇ ?

॥ ಜನಕ ಉವಾಚ ॥

**ಸತ್ಯಮುಕ್ತಂ ತ್ವಯಾ ನಾತ್ರ ಮಿಥ್ಯಾ ಕಿಂಚಿದಿದಂ ಮತಂ ।**
**ತಥಾಪಿ ಶೃಣು ವಿಪ್ರೇಂದ್ರ ಗುರುರ್ಮಮ ಸುಪೂಜಿತಃ ॥೨೮॥**

ಜನಕರಾಜನು ಶುಕಮುನಿಗೆ ಈ ರೀತಿ ಸಮಾಧಾನವನ್ನು ಹೇಳಿದನು— ಓ ಬ್ರಾಹ್ಮಣಶ್ರೇಷ್ಠನೇ, ನೀನು ಹೇಳಿದುದೆಲ್ಲವೂ ನಿಜವು. ಇದರಲ್ಲಿ ಒಂದೂ

ಸುಳ್ಳಿಲ್ಲವು. ಆದರೂ ನಾನು ಹೇಳುವುದನ್ನು ಕೇಳು. ಗುರುಗಳಾದ ವ್ಯಾಸರು ನನಗೆ ಪೂಜ್ಯರು. ಅವರು ಹೇಳಿದುದೇ ಸತ್ಯವು. ಏಕೆಂದರೆ,

**ಪಿತುಃ ಸಂಗಂ ಪರಿತ್ಯಜ್ಯ ತ್ವಂ ವನಂ ಗಂತುಮಿಚ್ಛಸಿ ।**
**ಮೃಗೈಃ ಸಹ ಸುಸಂಬಂಧೋ ಭವಿತಾ ತೇ ನ ಸಂಶಯಃ ॥೨೯॥**

ಓ ಶುಕಮುನಿಯೇ, ಆದರೂ ನೀನು ನಿನ್ನ ತಂದೆಯ ಸಂಬಂಧವನ್ನು ಬಿಟ್ಟು ಕಾಡಿಗೆ ಹೋಗಲಿಚ್ಛಿಸುತ್ತಿರುವೆ. ಅಲ್ಲಾದರೂ ಮೃಗಗಳೊಂದಿಗೆ ನಿಕಟವಾದ ಸಂಬಂಧವು ನಿನಗೆ ಆಗಿಯೇ ಆಗುವುದು. ಇದರಲ್ಲಿ ಸಂದೇಹವಿಲ್ಲವು.

**ಮಹಾಭೂತಾನಿ ಸರ್ವತ್ರ ನಿಃಸಂಗಃ ಕ್ವ ಭವಿಷ್ಯಸಿ ।**
**ಆಹಾರಾರ್ಥಂ ಸದಾ ಚಿಂತಾ ನಿಶ್ಚಿಂತಃ ಸ್ಯಾಃ ಕದಾ ಮುನೇ ॥೩೦॥**

ಓ ಶುಕಮುನಿಯೇ, ಅಲ್ಲದೆ ಎಲ್ಲೆಡೆಯೂ ಪೃಥಿವ್ಯಾದಿಪಂಚಮಹಾಭೂತಗಳಿರುತ್ತವೆ. ಅವುಗಳ ಸಂಬಂಧವಿರದೇ ಇರುವಹಾಗಿಲ್ಲ. ಎಂದಮೇಲೆ ನೀನು ನಿಸ್ಸಂಗನಾಗಿರುವುದೆಂತು ? ಅದಕ್ಕೋಸ್ಕರ ಸರ್ವಕಾಲದಲ್ಲಿಯೂ ಚಿಂತೆಯು ಬಿಡುವಂತಿಲ್ಲ. ಕಾಡಿನಲ್ಲಿ ಸರಿಯಾಗಿ ಆಹಾರ ಸಿಕ್ಕುವುದಿಲ್ಲ. ಆದುದರಿಂದ ಯಾವಾಗಲೂ ಚಿಂತೆಯಿಲ್ಲದೆ ಇರುವುದು ಹೇಗೆ ?

**ದಂಡಾಜಿನಕೃತಾ ಚಿಂತಾ ಯಥಾ ತವ ವನೇಽಪಿ ಚ ।**
**ತಥೈವ ರಾಜ್ಯಚಿಂತಾ ಮೇ ಚಿಂತಯಾನಸ್ಯ ವಾ ನವಾ ॥೩೧॥**

ಕಾಡಿನಲ್ಲಿದ್ದರೂ ನಿನಗೆ ಸನ್ಯಾಸಾಶ್ರಮದ ದಂಡ ಮತ್ತು ಕೃಷ್ಣಾಜಿನಗಳ ಚಿಂತೆಯು ಹೇಗೆ ಇರುವುದೋ ಹಾಗೆಯೇ ರಾಜ್ಯದಲ್ಲಿರುವ ನನಗೂ ಚಿಂತೆಯು (ಆಸಕ್ತಿಯು) ಇರುವುದೋ ಇಲ್ಲವೋ ?

**ವಿಕಲ್ಪೋಽಪಹತಸ್ತ್ವಂ ವೈ ದೂರದೇಶಮುಪಾಗತಃ ।**
**ನ ಮೇ ವಿಕಲ್ಪಸಂದೇಹೋ ನಿರ್ವಿಕಲ್ಪೋಽಸ್ಮಿ ಸರ್ವಥಾ ॥೩೨॥**

ಓ ಶುಕನೇ, ನಿನ್ನ ಮನಸ್ಸಿನಲ್ಲಿ, ಹೀಗೋ ಹಾಗೋ, ಉಂಟೋ ಇಲ್ಲವೋ ಎಂದು ಮುಂತಾದ ನಾನಾಬಗೆಯ ವಿಕಲ್ಪ ಮತ್ತು ಸಂದೇಹಗಳನ್ನಿಟ್ಟುಕೊಂಡು ಕ್ಲೇಶಪಡುತ್ತಾ ಇಷ್ಟು ದೂರ ನನ್ನಲ್ಲಿಯವರಿಗೆ ಬಂದಿರುತ್ತೀಯೆ. ನನಗಾದರೋ

ಇಂತಹ ಯಾವ ಸಂದೇಹವೂ ಯಾವ ಸಂವೇಹವೂ ಯಾವಾಗಲೂ ಇರುವುದಿಲ್ಲ. ಆದುದರಿಂದ ನಾನು ಯಾವ ವಿಕಲ್ಪವೂ ಇಲ್ಲದವನಾಗಿರುತ್ತೇನೆ.

**ಸುಖಂ ಸ್ವಪಿಮಿ ವಿಪ್ರಾಹಂ ಸುಖಂ ಭುಂಜಾಮಿ ಸರ್ವದಾ ।**
**ನ ಬದ್ಧೋಽಸ್ಮೀತಿ ಬುಧ್ಯಾಹಂ ಸರ್ವದೈವ ಸುಖೀ ಮುನೇ ॥೩೩॥**

ಓ ಬ್ರಾಹ್ಮಣನೇ, ನಾನು ಸುಖವಾಗಿ ನಿದ್ರಿಸುತ್ತೇನೆ. ಓ ಮನನಶೀಲನಾದ ಶುಕನೇ ಯಾವಾಗಲೂ ನಾನು ಮೃಷ್ಟಾನ್ನವನ್ನು ಉಣ್ಣುತ್ತೇನೆ. ಆದರೂ ನಾನು ರಾಗದ್ವೇಷಗಳ ಬಲೆಗೆ ಕಟ್ಟುಬಿದ್ದವನಲ್ಲ ಎಂಬ ಅಪರೋಕ್ಷಾನುಭವರೂಪವಾದ ಜ್ಞಾನದಿಂದ, ವಿಷಯಸುಖಾನುಭವದಿಂದ ಅಲ್ಲವು, ನಾನು ಯಾವಾಗಲೂ ಸುಖಿಯಾಗಿರುತ್ತೇನೆ.

**ತ್ವಂ ತು ದುಃಖೀ ಸದೈವಾಸಿ ಬದ್ಧೋಽಹಮಿತಿ ಶಂಕಯಾ ।**
**ಇತಿ ಶಂಕಾಂ ಪರಿತ್ಯಜ್ಯ ಸುಖೀ ಭವ ಸಮಾಹಿತಃ ॥೩೪॥**

ಓ ಮುನಿಯೇ, ನೀನಾದರೋ ' ನಾನು ಬದ್ಧನಾಗಿರುತ್ತೇನೆ ' ಎಂಬ ಬುದ್ಧಿಯಿಂದ ಯಾವಾಗಲೂ ದುಃಖಿಯಾಗಿಯೇ ಇರುತ್ತೀಯೆ. ಆದುದರಿಂದ ಆ ಬುದ್ಧಿಯನ್ನು ಬಿಟ್ಟು ಮನಸ್ಸಮಾಧಾನವನ್ನು ಹೊಂದಿ ಸುಖಿಯಾಗು.

**ದೇಹೋಽಯಂ ಮಮ ಬಂಧೋಽಯಂ ನ ಮಮೇತಿ ಚ ಮುಕ್ತತಾ ।**
**ತಥಾ ಧನಂ ಗೃಹಂ ರಾಜ್ಯಂ ನ ಮಮೇತಿ ಚ ನಿಶ್ಚಯಃ ॥೩೫॥**

ಓ ಶುಕನೇ, ಈ ದೇಹ ಮುಂತಾದವು, ನನ್ನದು ಎಂಬ ಅಭಿಮಾನವನ್ನಿಟ್ಟುಕೊಂಡಿರುವುದೇ ಬಂಧವೂ ಸಂಸಾರದುಃಖವೂ ಆಗಿರುತ್ತದೆ. ಹಾಗೆಯೇ, ಈ ದೇಹ, ಹಣ, ಮನೆ, ರಾಜ್ಯ ಇವೆಲ್ಲವೂ ನನ್ನವಲ್ಲವು. ಇವುಗಳಲ್ಲಿ ನಾನು ನನ್ನದು ಎಂದು ತೋರುವ ಸಂಬಂಧವು ಅಜ್ಞಾನದಿಂದ, ಅಭಿಮಾನದಿಂದ ಉಂಟಾದುದೇ ಹೊರತು ವಾಸ್ತವವಾದುದಲ್ಲವೆಂದು ಶಾಸ್ತ್ರವ್ಯಾಸಂಗ, ಗುರೂಪದೇಶ ಇವುಗಳಿಂದ ತಿಳಿದು, ವೇದಾಂತವಾಕ್ಯಮನನದಿಂದ ಅಪರೋಕ್ಷಾನುಭವವಾಗಲು ಅಭಿಮಾನವು ತಪ್ಪುತ್ತದೆ. ಆಗ ಈ ಸಂಸಾರವೂ, ವ್ಯವಹಾರವೂ ದಗ್ಧಪಟದಂತೆ ಎಂದರೆ, ಸುಟ್ಟಬಟ್ಟೆಯಂತೆ ಇರುತ್ತಾ, ಕಾರ್ಯಕಾರಿಯಾಗದೆ, ಸುಖದುಃಖಗಳನ್ನುಂಟುಮಾಡಲಾರದೆ, ಹೋಗುತ್ತವೆ. ಇದೇ ಜೀವನ್ಮುಕ್ತಿಭಾವವೆಂದು ನನ್ನ ನಿಶ್ಚಯವು.

ತಚ್ಛ್ರುತ್ವಾ ವಚನಂ ತಸ್ಯ ಶುಕಃ ಪ್ರೀತಮನಾ ಭವತ್ ।
ಆಪೃಚ್ಛ್ಯ ತಂ ಜಗಾಮಾಶು ವ್ಯಾಸಸ್ಯಾಶ್ರಮಮುತ್ತಮಂ ॥೩೬॥

ಸೂತಮುನಿಯು ಹೇಳಿದನು—ಜನಕರಾಜನು ಹೇಳಿದ ಆ ಮಾತುಗಳನ್ನು ಕೇಳಿ ಶುಕಮುನಿಯು ಮನಸ್ಸಿಗೆ ತಕ್ಕ ಸಮಾಧಾನವನ್ನು ಪಡೆದು ಸಂಶಯವಿಲ್ಲದ ಸಂತುಷ್ಟನಾದನು. ಮತ್ತು ಜನಕರಾಜನಿಂದ ಬೀಳ್ಕೊಂಡು ತಂದೆಯ ಶ್ರೇಷ್ಠವಾದ ಆಶ್ರಮವನ್ನು ಕುರಿತು ಹೊರಟನು.

ಆಗಚ್ಛಂತಂ ಸುತಂ ದೃಷ್ಟ್ವಾ ವ್ಯಾಸೋಽಪಿ ಸುಖಮಾಪ್ತವಾನ್ ।
ಆಲಿಂಗ್ಯಾಘ್ರಾಯ ಮೂರ್ಧಾನಂ ಪಪ್ರಚ್ಛ ಕುಶಲಂ ಪುನಃ ॥೩೭॥

ತನ್ನ ಕುಮಾರನಾದ ಶುಕನು ಬರುತ್ತಿರುವುದನ್ನು ನೋಡಿ ವ್ಯಾಸಮುನಿಯು ಸಂತೋಷಗೊಂಡನು. ಅವನನ್ನು ಅಪ್ಪಿಕೊಂಡು ಮುಂದಲೆಯನ್ನು ಮೂಸಿ ನೋಡುತ್ತಾ ಕುಶಲಪ್ರಶ್ನೆಯನ್ನು ಮಾಡಿದನು.

ಸ್ಥಿತಸ್ತತ್ರಾಶ್ರಮೇ ರಮ್ಯೇ ಪಿತುಃ ಪಾರ್ಶ್ವೇ ಸಮಾಹಿತಃ ।
ವೇದಾಧ್ಯಯನಸಂಪನ್ನಃ ಸರ್ವಶಾಸ್ತ್ರವಿಶಾರದಃ ॥೩೮॥

ಆ ಮನೋಹರವಾದ ಆಶ್ರಮದಲ್ಲಿ ಆ ಶುಕಮುನಿಯು ವೇದಾಂತವನ್ನು ಚೆನ್ನಾಗಿ ಮನನಮಾಡುತ್ತಾ, ಹಾಗೂ ಎಲ್ಲ ಶಾಸ್ತ್ರಗಳ ಸಿದ್ಧಾಂತಗಳನ್ನು ವಿಮರ್ಶಿಸಿ ಮನಗಾಣುತ್ತಾ, ತಂದೆಯ ಸಮೀಪದಲ್ಲಿಯೇ ಚಿತ್ತಸಮಾಧಾನದಿಂದ ಇರುತ್ತಿದ್ದನು.

ಜನಕಸ್ಯ ದಶಾಂ ದೃಷ್ಟ್ವಾ ರಾಜ್ಯಸ್ಥಸ್ಯ ಮಹಾತ್ಮನಃ ।
ಸ ನಿರ್ವೃತಿಂ ಪರಾಂ ಪ್ರಾಪ್ಯ ಪಿತುರಾಶ್ರಮಸಂಸ್ಥಿತಃ ॥೩೯॥

ರಾಜ್ಯಭಾರನಿರ್ವಾಹದಲ್ಲಿ ತೊಡಗಿದವನಾಗಿದ್ದರೂ, ಜೀವನ್ಮುಕ್ತಸ್ಥಿತಿಯಲ್ಲಿರುವ ಮಹಾತ್ಮನಾದ ಜನಕರಾಜನ ರೀತಿಯನ್ನು ಆ ಶುಕಮುನಿಯು ನೋಡಿ ಅವನಂತೆ ತಾನೂ ಯಾವ ಸಂಬಂಧವೂ ಇಲ್ಲದೆ ಅತ್ಯುತ್ತಮವೂ ನಿತ್ಯವೂ ಆದ ಆನಂದಾನುಭವದಲ್ಲಿರುತ್ತಾ ತನ್ನ ತಂದೆಯ ಆಶ್ರಮದಲ್ಲಿಯೇ ಇದ್ದನು.

ಪಿತ್ರ್ಯಾಣಾಂ ಸುಭಗಾ ಕನ್ಯಾ ಪೀವರೀ ನಾಮ ಸುಂದರೀ ।
ಶುಕಶ್ಚಕಾರ ಪತ್ನೀಂ ತಾಂ ಯೋಗಮಾರ್ಗಸ್ಥಿತೋಽಪಿ ಹಿ ॥೪೦॥

ಆ ಶುಕನು ತಂದೆತಾಯಿಗಳಿಗೆ ಒಪ್ಪಿಗೆಯಾದ ಪೀವರೀ ಎಂಬ ಸುಂದರಿಯಾದ ಕನ್ಯೆಯನ್ನು ವಿರಕ್ತಿಮಾರ್ಗದಲ್ಲಿದ್ದುಕೊಂಡೇ ಮದುವೆಯಾದನು.

**ಸ ತಸ್ಯಾಂ ಜನಯಾಮಾಸ ಪುತ್ರಾಂಶ್ಚತ್ವಾರ ಏವ ಹಿ ।**
**ಕೃಷ್ಣಂ ಗೌರಪ್ರಭಂ ಚೈವ ಭೂರಿಂ ದೇವಶ್ರುತಂ ತಥಾ** ॥೪೧॥

ಆ ಪತ್ನಿಯಲ್ಲಿ ಅವನು ಕೃಷ್ಣ, ಗೌರಪ್ರಭ, ಭೂರಿ, ದೇವಶ್ರುತರೆಂಬ ನಾಲ್ಕು ಜನ ಮಕ್ಕಳನ್ನು ಪಡೆದನು.

**ಕನ್ಯಾಂ ಕೀರ್ತಿಂ ಸಮುತ್ಪಾದ್ಯ ವ್ಯಾಸಪುತ್ರಃ ಪ್ರತಾಪವಾನ್ ।**
**ದದೌ ವಿಭ್ರಾಜಪುತ್ರಾಯ ತ್ವಣುಹಾಯ ಮಹಾತ್ಮನೇ** ॥೪೨॥

ಹಾಗೆಯೇ ವ್ಯಾಸನ ಮಗನಾದ ಆ ಶುಕನು ಬ್ರಹ್ಮತೇಜಸ್ಸಿನಿಂದ ಪ್ರಭಾವಶಾಲಿಯಾಗಿ ತನ್ನ ಹೆಂಡತಿಯಲ್ಲಿ ಕೀರ್ತಿಯೆಂಬ ಕನ್ಯೆಯನ್ನೂ ಪಡೆದು ಅವಳನ್ನು ವಿಭ್ರಾಜಮುನಿಯ ಮಗನಾದ ಮತ್ತು ದೊಡ್ಡ ಸ್ವಭಾವವುಳ್ಳ ಅಣುಹನೆಂಬ ದೊಡ್ಡ ಮುನಿಗೆ ಮದುವೆಮಾಡಿಕೊಟ್ಟನು.

**ಅಣುಹಸ್ಯ ಸುತಃ ಶ್ರೀಮಾನ್ ಬ್ರಹ್ಮದತ್ತಃ ಪ್ರತಾಪವಾನ್ ।**
**ಬ್ರಹ್ಮಜ್ಞಃ ಪೃಥಿವೀಪಾಲಃ ಶುಕಕನ್ಯಾಸಮುದ್ಭವಃ** ॥೪೩॥

ಆ ಅಣುಹಮುನಿಯ ಪುತ್ರನೂ, ಶುಕಮುನಿಯ ಮೊಮ್ಮಗನೂ (ಮಗಳ ಮಗ) ಆದ ತೇಜಸ್ವಿಯಾದ ಬ್ರಹ್ಮದತ್ತನು ಒಳ್ಳೇ ಬ್ರಹ್ಮಜ್ಞಾನಿಯಾಗಿದ್ದು ರಾಜನಾಗಿದ್ದನು.

**ಕಾಲೇನ ಕಿಯತಾ ತತ್ರ ನಾರದಸ್ಯೋಪದೇಶತಃ ।**
**ಜ್ಞಾನಂ ಪರಮಕಂ ಪ್ರಾಪ್ಯ ಯೋಗಮಾರ್ಗಮನುತ್ತಮಂ** ॥೪೪॥

ಕೆಲವು ಕಾಲದ ಮೇಲೆ ಆ ಬ್ರಹ್ಮದತ್ತಮುನಿಯು ನಾರದಮುನಿಯ ಉಪದೇಶದಿಂದ ಸರ್ವೋತ್ತಮವಾದ ಬ್ರಹ್ಮಜ್ಞಾನವನ್ನು ಪಡೆದು ಶ್ರೇಷ್ಠವಾದ ಯೋಗಮಾರ್ಗದಲ್ಲಿರಲು ಅನುವಾದನು.

**ಪುತ್ರೇ ರಾಜ್ಯಂ ನಿಧಾಯಾಥ ಗತೋ ಬದರಿಕಾಶ್ರಮಂ ।**
**ಮಾಯಾಬೀಜೋಪದೇಶೇನ ತಸ್ಯ ಜ್ಞಾನಂ ನಿರರ್ಗಲಂ** ॥೪೫॥

ಆಮೇಲೆ ರಾಜ್ಯದಲ್ಲಿ ಪುತ್ರನನ್ನು ನಿಯೋಜಿಸಿ ಬದರಿಕಾಶ್ರಮವನ್ನು ಕುರಿತು ತೆರಳಿದನು. ಅಲ್ಲಿ ಅವನಿಗೆ ನಾರದೋಪದಿಷ್ಟವಾದ ಭುವನೇಶ್ವರೀ ಮಂತ್ರದ ಪ್ರಭಾವದಿಂದ ಶ್ರೇಷ್ಠವಾದ ಜ್ಞಾನವು ಅಡ್ಡಿ ಆತಂಕಗಳಿಲ್ಲದೆ ಉಂಟಾಯಿತು.

**ನಾರದಸ್ಯ ಪ್ರಸಾದೇನ ಜಾತಂ ಸದ್ಯೋ ವಿಮುಕ್ತಿದಂ ।**
**ಕೈಲಾಸಶಿಖರೇ ರಮ್ಯೇ ತ್ಯಕ್ತ್ವಾ ಸಂಗಂ ಪಿತುಃ ಶುಕಃ ॥೪೬॥**

ಆ ಜ್ಞಾನವು ನಾರದನ ಪ್ರಸಾದದಿಂದ ಕೂಡಲೇ ಮುಕ್ತಿಯನ್ನು ಕೊಟ್ಟಿತು. ಆಮೇಲೆ ಶುಕಮುನಿಯಾದರೋ ತಂದೆಯ ಸಂಬಂಧವನ್ನು ಬಿಟ್ಟು ಮನೋಹರವಾದ ಕೈಲಾಸಶಿಖರದಲ್ಲಿರುತ್ತಾ,

**ಧ್ಯಾನಮಾಸ್ಥಾಯ ವಿಪುಲಂ ಸ್ಥಿತಃ ಸಂಗಪರಾಙ್ಮುಖಃ ।**
**ಉತ್ಪಪಾತ ಗಿರೇಃ ಶೃಂಗಾತ್ಸಿದ್ಧಿಂ ಚ ಪರಮಾಂ ಗತಃ ॥೪೭॥**

ಹೆಚ್ಚಾಗಿ ಮೇಲಾದ ಧ್ಯಾನವನ್ನು ಮಾಡುತ್ತಾ ನಿಸ್ಸಂಗನಾಗಿ ಇರುತ್ತಿದ್ದನು. ಹೀಗಿರಲು ಒಂದು ದಿನ ವಿದೇಹಮುಕ್ತಿಗಾಗಿ ಕೈಲಾಸಗಿರಿಯ ಶಿಖರದಿಂದ ಹಾರಿ ಗೃಹಸ್ಥಾಶ್ರಮದ ಕರ್ಮ ಮತ್ತು ಉಪಾಸನೆಗಳು ಪಕ್ವವಾಗಿರಲು ಅಣಿಮಾದ್ಯಷ್ಟ ಸಿದ್ಧಿಯನ್ನೂ ಪಡೆದನು.

**ಆಕಾಶಗೋ ಮಹಾತೇಜಾ ವಿರರಾಜ ಯಥಾ ರವಿಃ ।**
**ಗಿರೇಃ ಶೃಂಗಂ ದ್ವಿಧಾ ಜಾತಂ ಶುಕಸ್ಯೋತ್ಪತನೇ ತದಾ ॥೪೮॥**

ಆ ಸಿದ್ಧಿಯ ಮಹಿಮೆಯಿಂದ ಅವನು ಆಕಾಶದಲ್ಲಿ ಸೂರ್ಯನಂತೆ ಪ್ರಕಾಶಿಸಿದನು. ಅವನು ಶಿಖರದಿಂದ ಹಾರುವಾಗ ಶಿಖರವು ಎರಡು ಭಾಗವಾಯಿತು.

**ಉತ್ಪಾತಾ ಬಹವೋ ಜಾತಾಃ ಶುಕಶ್ಚಾಕಾಶಗೋಽಭವತ್ ।**
**ಅಂತರಿಕ್ಷೇ ಯಥಾ ವಾಯುಃ ಸ್ತೂಯಮಾನಃ ಸುರರ್ಷಿಭಿಃ ॥೪೯॥**

ಆಗ ಅನೇಕ ಉತ್ಪಾತಗಳಾದುವು. ಶುಕನು ಸಶರೀರವಾಗಿ ಆಕಾಶದಲ್ಲಿ ಹೋಗುತ್ತಾ ದೇವತೆಗಳಿಂದಲೂ ಋಷಿಗಳಿಂದಲೂ ಸ್ತೋತ್ರಮಾಡಲ್ಪಡುತ್ತಾ ಸೂತ್ರಾತ್ಮನಾದ ವಾಯುವಿನಂತೆ ವಿರಾಜಿಸಿದನು.

**ತೇಜಸಾತಿವಿರಾಜನ್ವೈ ದ್ವಿತೀಯ ಇವ ಭಾಸ್ಕರಃ ।**
**ವ್ಯಾಸಸ್ತು ವಿರಹಾಕ್ರಾಂತಃ ಕ್ರಂದನ್ ಪುತ್ರೇತಿ ಚಾಸಕೃತ್ ॥೫೦॥**

ಅಲ್ಲದೆ ಅವನು ಆಗ ವಿಧಿಯ ಮಹಿಮೆಯಿಂದ ಆಕಾಶದಲ್ಲಿ ತುಂಬ ತೇಜಸ್ಸಿನಿಂದ ಕೂಡಿದವನಾಗಿ ಎರಡನೆಯ ಸೂರ್ಯನಂತೆ ಪ್ರಕಾಶಿಸಿದನು. ವ್ಯಾಸಮುನಿಯು ಪುತ್ರವಿಯೋಗದಿಂದ ಬಹಳ ದುಃಖಿತನಾಗಿ ಮಗನೇ, ಮಗನೇ, ಎಂದು ಬಾರಿಬಾರಿಗೂ ಕೂಗುತ್ತಾ,

**ಗಿರೇಃ ಶೃಂಗೇ ಗತಸ್ತತ್ರ ಶುಕೋ ಯತ್ರ ಸ್ಥಿತೋಽಭವತ್ ।**
**ಕ್ರಂದಮಾನಂ ತದಾ ದೀನಂ ವ್ಯಾಸಂ ಮತ್ವಾ ಶ್ರಮಾಕುಲಂ ॥೫೧॥**

ಶುಕನು ಹಿಂದೆ ಯಾವ ಗಿರಿಶಿಖರದಲ್ಲಿ ತಪಸ್ಸುಮಾಡುತ್ತಲಿದ್ದನೋ ಅಲ್ಲಿಗೆ ವ್ಯಾಸನೂ ಹೋದನು. ಆಗ ಅಲ್ಲಿ ಕೂಗುತ್ತಲಿರುವ ಮತ್ತು ಪುತ್ರಶೋಕಾತುರನಾದ ವ್ಯಾಸಮುನಿಯು ತುಂಬ ಆಯಾಸಗೊಂಡಿರುವುದನ್ನು ನೋಡಿ,

**ಸರ್ವಭೂತಗತಃ ಸಾಕ್ಷೀ ಪ್ರತಿಶಬ್ದಮುದಾತ್ತದಾ ।**
**ತತ್ರಾದ್ಯಾಪಿ ಗಿರೇಃ ಶೃಂಗೇ ಪ್ರತಿಶಬ್ದಃ ಸ್ಫುಟೋಽಭವತ್ ॥೫೨॥**

ವ್ಯಷ್ಟಿದೇಹವನ್ನು ಸಮಷ್ಟಿದೇಹದಲ್ಲಿ ಲಯಮಾಡಿ ಸೇರಿಸಿ, ವ್ಯಾಪಕನಾಗಿಯೂ, ಸಾಕ್ಷಿರೂಪನಾಗಿಯೂ ಆದ ಶುಕಮುನಿಯು ಆಗ ನನಗೂ ನಿನಗೂ ಯಾವ ಆತ್ಮಭೇದವೂ ಇಲ್ಲ. ಸುಮ್ಮನೆ ಕ್ರಂದಿಸುವೆಯೇಕೆ ? ಎಂಬರ್ಥದ ಪ್ರತಿಶಬ್ದದ ಧ್ವನಿಯನ್ನು ಮಾಡಿದನು. ಆ ಕಾರಣದಿಂದ ಈಗಲೂ ಆ ಗಿರಿಶಿಖರದಲ್ಲಿ ಪ್ರತಿಶಬ್ದವು ಹಾಗೆ ಕೇಳಿಸುತ್ತದೆ ಎಂದು ಪ್ರತೀತಿ ಇರುತ್ತದೆ.

**ರುದಂತಂ ತಂ ಸಮಾಲಕ್ಷ್ಯ ವ್ಯಾಸಂ ಶೋಕಸಮನ್ವಿತಂ ।**
**ಪುತ್ರ ಪುತ್ರೇತಿ ಭಾಷಂತಂ ವಿರಹೇಣ ಪರಿಪ್ಲುತಂ ॥೫೩॥**

ಆದರೂ, ಪುತ್ರವಿಯೋಗದಿಂದ ಬಹಳವಾಗಿ ಅಳುತ್ತಲಿರುವ, ಪುನಃ ಪುನಃ ಮಗನೇ, ಮಗನೇ ಎಂದು ಕೂಗುತ್ತಲಿರುವ ಪುತ್ರವಿರಹಾತುರನಾದ ವ್ಯಾಸಮುನಿಯನ್ನು ನೋಡಿ,

**ಶಿವಸ್ತತ್ರ ಸಮಾಗತ್ಯ ಪಾರಾಶರ್ಯಮಬೋಧಯತ್ ।**
**ವ್ಯಾಸ ಶೋಕಂ ಮಾ ಕುರು ತ್ವಂ ಪುತ್ರಸ್ತೇ ಯೋಗವಿತ್ತಮಃ ॥೫೪॥**

ಅವನನ್ನು ಸಮಾಧಾನಪಡಿಸುವುದಕ್ಕಾಗಿ ಭಗವಾನ್ ಪರಮೇಶ್ವರನು ಪರಾಶರಮುನಿಯ ಮಗನಾದ ವ್ಯಾಸಮುನಿಯ ಹತ್ತಿರಕ್ಕೆ ಬಂದು, ಎಲೈ ವ್ಯಾಸಮುನಿಯೇ, ಶೋಕವನ್ನೇಕೆ ಮಾಡುತ್ತೀಯೆ ? ನಿನ್ನ ಮಗನು ಶ್ರೇಷ್ಠನಾದ ಯೋಗಿಯು ಎಂದು ತಿಳಿಯಹೇಳಿದನು.

**ಪರಮಾಂ ಗತಿಮಾಪನ್ನೋ ದುರ್ಲಭಾಂ ಚಾಕೃತಾತ್ಮಭಿಃ ।**
**ತಸ್ಯ ಶೋಕೋ ನ ಕರ್ತವ್ಯಸ್ತ್ವಯಾಽಶೋಕಂ ವಿಜಾನತಾ ॥೫೫॥**

ಆ ನಿನ್ನ ಮಗನಾದ ಶುಕನು, ಇಂದ್ರಿಯಗಳನ್ನೂ, ಮನಸ್ಸನ್ನೂ ಹತೋಟಿಯಲ್ಲಿಟ್ಟುಕೊಳ್ಳಲಾರದ ಸಾಮಾನ್ಯಜನರಿಂದ ಪಡೆಯಲಸಾಧ್ಯವಾದ ಉತ್ತಮಗತಿಯನ್ನು ಪಡೆದಿರುವನು. ಶೋಕಮೋಹಗಳಿಲ್ಲದ ಬ್ರಹ್ಮರೂಪನಾಗಿರುವ ಅಂಥವನಿಗಾಗಿ ನೀನು ದುಃಖಪಡಬಾರದು. ಮೇಲಾಗಿ ನೀನು ಬ್ರಹ್ಮಸ್ವರೂಪವನ್ನು ತಿಳಿದಿರುವೆ. ಇಂತಹ ನೀನು, ಮಗನು ಬೇರೆ ಎಂದಾಗಲೀ, ಅವನ ವಿಯೋಗವುಂಟಾಯಿತೆಂದಾಗಲೀ, ಅವನು ಹೋದನೆಂದಾಗಲೀ, ನಷ್ಟನಾದನೆಂದಾಗಲೀ, ದುಃಖಿಸಬಾರದು ಎಂದು ತಿಳಿಯಹೇಳಿದನು.

**ಕೀರ್ತಿಸ್ತೇ ವಿಪುಲಾ ಜಾತಾ ತೇನ ಪುತ್ರೇಣ ಚಾನಘ ।**

ಎಲೈ ಶ್ರೇಷ್ಠನೇ, ಇಂತಹ ಮಗನಿಂದ ಪಾಪಸಂಬಂಧವಿಲ್ಲದ ನಿನಗೆ ಬಹಳ ಕೀರ್ತಿಯೇ ಬಂದಿರುತ್ತದೆ. ಹೀಗಿರಲು ನೀನು ಅಂತಹ ಮಗನಿಗಾಗಿ ದುಃಖಿಸುವುದು ಉಚಿತವಲ್ಲವು.

॥ ವ್ಯಾಸ ಉವಾಚ ॥

**ನ ಶೋಕೋ ಯಾತಿ ದೇವೇಶ ಕಿಂ ಕರೋಮಿ ಜಗತ್ಪತೇ ॥೫೬॥**
**ಅತೃಪ್ತೇ ಲೋಚನೇ ಮೇಽದ್ಯ ಪುತ್ರದರ್ಶನಲಾಲಸೇ ॥**

ವ್ಯಾಸಮುನಿಯು ಪರಮೇಶ್ವರನಿಗೆ ವಿಜ್ಞಾಪಿಸಿದನು—ಓ ದೇವತೆಗಳಿಗೆಲ್ಲ ಒಡೆಯನಾದ ಪರಮೇಶ್ವರನೇ, ಮತ್ತು ಜಗದೊಡೆಯನೇ, ಏನಾದರೂ ಪುತ್ರಶೋಕವು ಹೋಗಲೊಲ್ಲದು. ನಾನು ಏನನ್ನು ಮಾಡಲಿ ? ನನ್ನ ಕಣ್ಣುಗಳು ಇನ್ನೂ ತೃಪ್ತಿಯನ್ನು ಹೊಂದಲಿಲ್ಲ. ಪುತ್ರನನ್ನು ಒಮ್ಮೆ ನೋಡಬೇಕೆಂದು ಆ ನನ್ನ ಕಣ್ಣುಗಳು ಇಷ್ಟಪಡುತ್ತವೆ.

|| ಮಹಾದೇವ ಉವಾಚ ||

**ಛಾಯಾಂ ದ್ರಕ್ಷ್ಯಸಿ ಪುತ್ರಸ್ಯ ಪಾರ್ಶ್ವಸ್ಥಾಂ ಸುಮನೋಹರಾಂ ।**
**ತಾಂ ವೀಕ್ಷ್ಯ ಮುನಿಶಾರ್ದೂಲ ಶೋಕಂ ಜಹಿ ಪರಂತಪ ॥**

ಈಶ್ವರನು ಹೇಳಿದನು--ಎಲೈ ಮುನಿಶ್ರೇಷ್ಠನಾದ ಮತ್ತು ಇತರರ ಅಜ್ಞಾನವನ್ನು ನಾಶಮಾಡುವ ವ್ಯಾಸನೇ, ನನ್ನ ಅನುಗ್ರಹದಿಂದ ನಿನ್ನ ಸಮೀಪದಲ್ಲಿಯೇ ಶುಕನಿಗೆ ಸಮಾನವಾದ ಆಕಾರವುಳ್ಳ ಮನೋಹರವಾದ ಪ್ರತಿಬಿಂಬದಂತೆ ಇರುವ ನೆರಳು ಒಂದನ್ನು ನೋಡುವೆ. ಅದನ್ನು ನೋಡಿಕೊಂಡು ದುಃಖವನ್ನು ಬಿಡು.

|| ಸೂತ ಉವಾಚ ||

**ತದಾ ದದರ್ಶ ವ್ಯಾಸಸ್ತು ಛಾಯಾಂ ಪುತ್ರಸ್ಯ ಸುಪ್ರಭಾಂ** ॥೫೮॥

**ದತ್ವಾ ವರಂ ಹರಸ್ತಸ್ಮೈ ತತ್ರೈವಾಂತರಧೀಯತ ।**
**ಅಂತರ್ಹಿತೇ ಮಹಾದೇವೇ ವ್ಯಾಸಃ ಸ್ವಾಶ್ರಮಮಭ್ಯಗಾತ್** ॥೫೯॥

**ಶುಕಸ್ಯ ವಿರಹೇಣಾಪಿ ತಪ್ತಃ ಪರಮದುಃಖಿತಃ ॥**

ಸೂತನು ಹೇಳಿದನು—ಆ ಕೂಡಲೇ ವ್ಯಾಸಮುನಿಯು ತನ್ನ ಪಕ್ಕದಲ್ಲಿಯೇ ಒಳ್ಳೇ ಕಾಂತಿಯುಳ್ಳ ಶುಕನ ನೆರಳನ್ನು ನೋಡಿದನು. ಈ ರೀತಿಯಾದ ವರವನ್ನು ಕೊಟ್ಟು ಪರಮೇಶ್ವರನು ಅಂತರ್ಧಾನವನ್ನು ಹೊಂದಿದನು. ಪರಮೇಶ್ವರನು ಅಂತರ್ಧಾನವಾದ ಮೇಲೆ ಪುತ್ರವಿಯೋಗದಿಂದ ಸಂಕಟಪಡುತ್ತಾ ಹೆಚ್ಚಾಗಿ ದುಃಖಿತನಾದ ವ್ಯಾಸಮುನಿಯು ತನ್ನ ಆಶ್ರಮವನ್ನು ಕುರಿತು ತೆರಳಿದನು.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ**
**ಏಕೋನವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತಮಹಾಪುರಾಣದ ಪ್ರಥಮಸ್ಕಂಧದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

# ಅಥ ಶ್ರೀದೇವೀಭಾಗವತೇ ಮಹಾಪುರಾಣೇ

## ಪ್ರಥಮಸ್ಕಂಧೇ

### || ವಿಂಶೋಽಧ್ಯಾಯಃ ||

### ಇಪ್ಪತ್ತನೆಯ ಅಧ್ಯಾಯವು

|| ಓಂ ||

|| ಋಷಯ ಊಚುಃ ||

**ಶುಕಸ್ತು ಪರಮಾಂ ಸಿದ್ಧಿಮಾಪ್ತವಾನ್ ದೇವಸತ್ತಮಃ ।**
**ಕಿಂ ಚಕಾರ ತತೋ ವ್ಯಾಸಸ್ತನ್ನೋ ಬ್ರೂಹಿ ಸವಿಸ್ತರಂ ॥೧॥**

ಋಷಿಗಳು ಸೂತಮುನಿಯನ್ನು ಕೇಳಿದರು — ಓ ಸೂತಮುನಿಯೇ, ಶುಕ ಮುನಿಯು ಉತ್ತಮವಾದ ಬ್ರಹ್ಮಸಾಯುಜ್ಯದ ಸಿದ್ಧಿಯನ್ನು ಪಡೆದು ದೇವತೆಗಳಲ್ಲೂ ಉತ್ತಮನಾದನು. ಮುಂದೆ ವ್ಯಾಸಮಹರ್ಷಿಯು ಏನನ್ನು ಮಾಡಿದನು ಎಂಬುದನ್ನು ವಿಸ್ತಾರವಾಗಿ ನಮಗೆ ತಿಳಿಸು.

|| ಸೂತ ಉವಾಚ ||

**ಶಿಷ್ಯಾ ವ್ಯಾಸಸ್ಯ ಯೇಽಪ್ಯಾಸನ್ವೇದಾಭ್ಯಾಸಪರಾಯಣಾಃ ।**
**ಆಜ್ಞಾಮಾದಾಯ ತೇ ಸರ್ವೇ ಗತಾಃ ಪೂರ್ವಂ ಮಹೀತಲೇ ॥೨॥**

ಸೂತನು ಹೇಳಿದನು—ವ್ಯಾಸಮುನಿಯಲ್ಲಿ ಯಾರು ಯಾರು ವೇದಾಧ್ಯಯನ ಮಾಡುತ್ತಾ ಶಿಷ್ಯರಾಗಿದ್ದರೋ ಅವರೆಲ್ಲರೂ ಶುಕನು ಮುಕ್ತನಾಗುವುದಕ್ಕೆ ಮುಂಚೆಯೇ ತಮ್ಮ ಅಧ್ಯಯನವನ್ನು ಮುಗಿಸಿ ಗುರುವಿನ ಅನುಮತಿಯನ್ನು ಪಡೆದುಕೊಂಡು ಹೋಗಿದ್ದರು.

**ಅಸಿತೋ ದೇವಲಶ್ಚೈವ ವೈಶಂಪಾಯನ ಏವ ಚ ।**
**ಜೈಮಿನಿಶ್ಚ ಸುಮಂತುಶ್ಚ ಗತಾಃ ಸರ್ವೇ ತಪೋಧನಾಃ ॥೩॥**

ಅಸಿತಮುನಿಯು, ದೇವಲನು, ವೈಶಂಪಾಯನನು ಜೈಮಿನಿಯು, ಸುಮಂತುವು ಇವರೆಲ್ಲರೂ ವ್ಯಾಸಮುನಿಯ ಶಿಷ್ಯರು. ವ್ಯಾಸಂಗವಾದ ಮೇಲೆ ಇವರೆಲ್ಲರೂ ಗುರು ಕುಲವಾಸವನ್ನು ಬಿಟ್ಟು ತಮ್ಮ ಮನೆಗಳಿಗೆ ಹೋದರು.

**ತಾನೇತಾನ್ವೀಕ್ಷ್ಯ ಪುತ್ರಂ ಚ ಲೋಕಾಂತರಿತಮಪ್ಯುತ ।**
**ವ್ಯಾಸಃ ಶೋಕಸಮಾಕ್ರಾಂತೋ ಗಮನಾಯಾಕರೋನ್ಮತಿಂ ॥೪॥**

ಆ ಶಿಷ್ಯರೆಲ್ಲರೂ ಬಿಟ್ಟು ಹೊರಟುಹೋದುದನ್ನೂ, ಕುಮಾರನಾದ ಶುಕನೂ ಲೋಕಾಂತರವನ್ನು ಪಡೆದುದನ್ನೂ ನೋಡಿ, ಈ ವಿಯೋಗದಿಂದ ವ್ಯಾಸಋಷಿಯು ಬಹಳದುಃಖಿತನಾಗಿ ಆಶ್ರಮವನ್ನು ಬಿಟ್ಟು ತಾನೂ ಹೊರಡಲು ಮನಸ್ಸುಳ್ಳವನಾದನು.

**ಸಸ್ಮಾರ ಮನಸಾ ವ್ಯಾಸಸ್ತಾಂ ನಿಷಾದಸುತಾಂ ಶುಭಾಂ ।**
**ಮಾತರಂ ಜಾಹ್ನವೀತೀರೇ ಮುಕ್ತ್ವಾಂ ಶೋಕಸಮನ್ವಿತಾಂ ॥೫॥**

ಹಿಂದೆ ಗಂಗಾನದಿಯ ದಡದಲ್ಲಿ ಹುಟ್ಟಿದೊಡನೆಯೇ ತಾನು ಬಿಟ್ಟು ಬಂದ ತಾಯಿಯಾದ ಬೇಡನ ಪುತ್ರಿಯಾದ ಯೋಜನಗಂಧಿಯನ್ನು ವ್ಯಾಸನು ಮನಸ್ಸಿನಲ್ಲಿ ಸ್ಮರಿಸಿದನು.

**ಸ್ಮೃತ್ವಾ ಸತ್ಯವತೀಂ ವ್ಯಾಸಸ್ತ್ಯಕ್ತ್ವಾ ತಂ ಪರ್ವತೋತ್ತಮಂ ।**
**ಆಜಗಾಮ ಮಹಾತೇಜಾ ಜನ್ಮಸ್ಥಾನಂ ಸ್ವಕಂ ಮುನಿಃ ॥೬॥**

ಹೀಗೆ ತಾಯಿಯನ್ನು ಜ್ಞಾಪಿಸಿಕೊಂಡು, ಆ ಉತ್ತಮವಾದ ಪರ್ವತವನ್ನು ಬಿಟ್ಟು ತನ್ನ ಜನ್ಮಸ್ಥಳವಾದ ನಿಷಾದನಿರುವ ದ್ವೀಪಕ್ಕೆ ಬಂದನು.

**ದ್ವೀಪಂ ಪ್ರಾಪ್ಯಾಥ ಪಪ್ರಚ್ಛ ಕ್ವ ಗತಾ ಸಾ ವರಾನನಾ ।**
**ನಿಷಾದಾಸ್ತಂ ಸಮಾಚಖ್ಯುರ್ದತ್ತಾ ರಾಜ್ಞೇ ತು ಕನ್ಯಕಾ ॥೭॥**

ವ್ಯಾಸನು ಆ ದ್ವೀಪಕ್ಕೆ ಬಂದು ಅಲ್ಲಿರತಕ್ಕ ಬೇಡರನ್ನು ಕುರಿತು—ಸುಂದರ ಮುಖಿಯಾದ, ನನ್ನ ತಾಯಿಯಾದ ಸತ್ಯವತಿಯು ಎಲ್ಲಿ ಎಂದು ಕೇಳಿದನು. ಅವರು ಅವಳನ್ನು ರಾಜನಾದ ಶಂತನುವಿಗೆ ಮದುವೆಮಾಡಿಕೊಡಲಾಯಿತೆಂದು ಹೇಳಿದರು.

**ದಾಶರಾಜೋಽಪಿ ಸಂಪೂಜ್ಯ ವ್ಯಾಸಂ ಪ್ರೀತಿಪುರಸ್ಸರಂ ।**
**ಸ್ವಾಗತೇನಾಭಿಸತ್ಕೃತ್ಯ ಪ್ರೋವಾಚ ವಿಹಿತಾಂಜಲಿಃ ॥೮॥**

ಸತ್ಯವತಿಯ ತಂದೆಯೂ, ಬೇಡರ ನಾಯಕನೂ ಆದ ದಾಶರಾಜನು ವ್ಯಾಸನನ್ನು ಪ್ರೇಮಪೂರ್ವಕವಾದ ಸ್ವಾಗತ ವಚನದಿಂದ ಸತ್ಕರಿಸಿ ಅಂಜಲಿಯುಕ್ತನಾಗಿ ಈ ರೀತಿ ಹೇಳಿದನು.

|| ದಾಶರಾಜ ಉವಾಚ ||

**ಅದ್ಯ ಮೇ ಸಫಲಂ ಜನ್ಮ ಪಾವಿತಂ ನಃ ಕುಲಂ ಮುನೇ ।**
**ದೇವಾನಾಮಪಿ ದುರ್ದರ್ಶಂ ಯಜ್ಜಾತಂ ತವ ದರ್ಶನಂ ॥೯॥**

ದಾಶರಾಜನು ಹೇಳಿದನು— ಓ ಮುನಿಯೇ, ದೇವತೆಗಳಿಗೂ ದೂರೆಯದಿರುವ ನಿನ್ನ ದರ್ಶನವು ಈಗ ನಮಗೆ ಲಭಿಸಿತು. ಇದರಿಂದ ನನ್ನ ಜನ್ಮವು ಸಾರ್ಥಕವಾಯಿತು, ನಮ್ಮ ಕುಲವು ಪವಿತ್ರವಾಯಿತು.

**ಯದರ್ಥಮಾಗತೋಽಸಿ ತ್ವಂ ತದ್ಬ್ರೂಹಿ ದ್ವಿಜಸತ್ತಮ ।**
**ಅಪಿ ದಾರಾ ಧನಂ ಪುತ್ರಾಸ್ತ್ವದಾಯತ್ತಮಿದಂ ವಿಭೋ ॥೧೦॥**

ಓ ಬ್ರಾಹ್ಮಣಶ್ರೇಷ್ಠನೇ, ನೀನು ಇಲ್ಲಿಗೆ ಬಂದಿರುವ ಕಾರಣವೇನು ? ನಿನ್ನ ಕೆಲಸಕ್ಕಾಗಿ ನನ್ನ ಹೆಂಡತಿ, ಮಕ್ಕಳು, ಧನ ಇವೆಲ್ಲವೂ ನಿನ್ನ ಅಧೀನವಾಗಿ ಸಿದ್ಧವಾಗಿರುವುವು.

**ಸರಸ್ವತ್ಯಾಸ್ತಟೇ ರಮ್ಯೇ ಚಕಾರಾಶ್ರಮಮಂಡಲಂ ।**
**ವ್ಯಾಸಸ್ತಪಃ ಸಮಾಯುಕ್ತಸ್ತತ್ರೈವಾಸ ಸಮಾಹಿತಃ ॥೧೧॥**

ಆಮೇಲೆ ಅವನಿಗೆ ವ್ಯಾಸನು ಯಥಾಯೋಗ್ಯವಾಗಿ ಉತ್ತರವನ್ನು ಕೊಟ್ಟು ಅಲ್ಲಿಯೇ, ಸರಸ್ವತೀನದೀದಡದಲ್ಲಿ ಮನೋಹರವಾದ ಪ್ರದೇಶದಲ್ಲಿ ಆಶ್ರಮವನ್ನು ಮಾಡಿಕೊಂಡು ಅಲ್ಲಿಯೇ ವಾಸಮಾಡುತ್ತಾ ಚಿತ್ತವನ್ನು ಸಮಾಧಾನಕ್ಕೆ ತಂದುಕೊಂಡು ತಪೋಯುಕ್ತನಾಗಿದ್ದನು.

**ಸತ್ಯವತ್ಯಾಃ ಸುತೌ ಜಾತೌ ಶಂತನೋರಮಿತದ್ಯುತೇಃ ।**
**ಮತ್ವಾ ತೌ ಭ್ರಾತರೌ ವ್ಯಾಸಃ ಸುಖಮಾಪ ವನೇ ಸ್ಥಿತಃ ॥೧೨॥**

ಸತ್ಯವತಿಯನ್ನು ಮದುವೆಯಾದ ಮೇಲೆ ಶಂತನುರಾಜನಿಗೆ ಅವಳಲ್ಲಿ ಇಬ್ಬರು ಮಕ್ಕಳಾದರು ಎಂದು ವನದಲ್ಲಿ ವ್ಯಾಸಮುನಿಯು ಕೇಳಿ ಅವರು ತನಗೆ ಸಹೋದರರೆಂದು ತಿಳಿದು ಸಂತೋಷಿಸಿದನು.

**ಚಿತ್ರಾಂಗದಃ ಪ್ರಥಮಜೋ ರೂಪವಾನ್ ಶತ್ರುತಾಪನಃ ।**
**ಬಭೂವ ನೃಪತೇಃ ಪುತ್ರಃ ಸರ್ವಲಕ್ಷಣಸಂಯುತಃ ॥೧೩॥**

ಚಿತ್ರಾಂಗದನೆಂಬುವವನು ಶಂತನುಸತ್ಯವತಿಯರ ಮೊದಲನೆಯ ಮಗನು. ಅವನು ರೂಪವಂತನಾಗಿಯೂ, ಶತ್ರುಗಳನ್ನು ನಿಗ್ರಹಿಸುವಷ್ಟು ಪರಾಕ್ರಮಿಯಾಗಿಯೂ, ಎಲ್ಲ ಬಗೆಯ ರಾಜಲಕ್ಷಣಗಳಿಂದ ಕೂಡಿದವನಾಗಿಯೂ ಇದ್ದನು.

**ವಿಚಿತ್ರವೀರ್ಯನಾಮಾಸೌ ದ್ವಿತೀಯಃ ಸಮಜಾಯತ ।**
**ಸೋಽಪಿ ಸರ್ವಗುಣೋಪೇತಃ ಶಂತನೋಃ ಸುಖವರ್ಧನಃ ॥೧೪॥**

ಎರಡನೆಯವನು ವಿಚಿತ್ರವೀರ್ಯನೆಂಬ ಮಗನು ಹುಟ್ಟಿದನು. ಅವನೂ ಶೌರ್ಯೌದಾರ್ಯ ಮುಂತಾದ ಎಲ್ಲವಿಧವಾದ ರಾಜಗುಣಗಳಿಂದ ಕೂಡಿದವನಾಗಿ ಶಂತನುರಾಜನಿಗೆ ಸುಖವನ್ನು ಹೆಚ್ಚಿಸುತ್ತಲಿದ್ದನು.

**ಗಾಂಗೇಯಃ ಪ್ರಥಮಸ್ತಸ್ಯ ಮಹಾವೀರೋ ಬಲಾಧಿಪಃ ।**
**ತಥೈವ ತೌ ಸುತೌ ಜಾತೌ ಸತ್ಯವತ್ಯಾ ಮಹಾಬಲೌ ॥೧೫॥**

ಗಂಗೆಯಲ್ಲಿ ಹುಟ್ಟಿದ ಭೀಷ್ಮನು ಶಂತನುವಿಗೆ ಮೊದಲನೆಯ ಮಗನು. ಅವನು ಮಹಾಪರಾಕ್ರಮಿಯಾಗಿದ್ದನಲ್ಲದೆ ಸೈನ್ಯಾಧಿಪತಿಯೂ ಆಗಿದ್ದನು. ಅವನಂತೆ ಸತ್ಯವತಿಯಲ್ಲಿ ಹುಟ್ಟಿದ ಚಿತ್ರಾಂಗದವಿಚಿತ್ರವೀರ್ಯರೂ ಶೂರರಾಗಿದ್ದರು.

**ಶಂತನುಸ್ತಾನ್ ಸುತಾನ್ವೀಕ್ಷ್ಯ ಸರ್ವಲಕ್ಷಣಸಂಯುತಾನ್ ।**
**ಅಮಂಸ್ತಾಜಯ್ಯಮಾತ್ಮಾನಂ ದೇವಾದೀನಾಂ ಮಹಾಮನಾಃ ॥೧೬॥**

ಎಲ್ಲ ಬಗೆಯ ಒಳ್ಳೆಯ ಲಕ್ಷಣಗಳುಳ್ಳವರಾದ, ಪರಾಕ್ರಮಶಾಲಿಗಳಾದ ಆ ಮಕ್ಕಳನ್ನು ನೋಡಿ, ದೊಡ್ಡಮನಸ್ಸಿನವನಾದ ಆ ಶಂತನುವು ತಾನು ದೇವತೆಗಳಿಗೂ ಅಜೇಯನೆಂದು ಹೆಮ್ಮೆಗೊಂಡನು.

**ಅಥ ಕಾಲೇನ ಕಿಯತಾ ಶಂತನುಃ ಕಾಲಪರ್ಯಯಾತ್ ।**
**ತತ್ಯಾಜ ದೇಹಂ ಧರ್ಮಾತ್ಮಾ ದೇಹೀ ಜೀರ್ಣಮಿವಾಂಬರಂ ॥೧೭॥**

ಕೆಲವು ವರ್ಷಗಳ ಮೇಲೆ ಶಂತನುರಾಜನು ಕಾಲವಿಪರ್ಯಯದಿಂದ ಮನುಷ್ಯನು ಹಳೆಯ ಬಟ್ಟೆಯನ್ನು ಬಿಡುವಂತೆ ತನ್ನ ಮುಪ್ಪಿನ ಶರೀರವನ್ನು ಬಿಟ್ಟು ದಿವಂಗತನಾದನು.

**ಕಾಲಧರ್ಮಂ ಗತೇ ರಾಜ್ಞಿ ಭೀಷ್ಮಶ್ಚಕ್ರೇ ವಿಧಾನತಃ ।**
**ಪ್ರೇತಕಾರ್ಯಾಣಿ ಸರ್ವಾಣಿ ದಾನಾನಿ ವಿವಿಧಾನಿ ಚ ॥೧೮॥**

ಶಂತನು ರಾಜನು ಮೃತನಾಗಲು ಭೀಷ್ಮನೇ ಪ್ರೇತಸಂಸ್ಕಾರವನ್ನೂ, ಎಲ್ಲ ಪ್ರಕಾರವಾದ ಷೋಡಶಮಹಾದಾನ ಮುಂತಾದ ಉತ್ತರಕರ್ಮಗಳನ್ನೂ ಮಾಡಿದನು.

**ಚಿತ್ರಾಂಗದಂ ತತೋ ರಾಜ್ಯೇ ಸ್ಥಾಪಯಾಮಾಸ ವೀರ್ಯವಾನ್ ।**
**ಸ್ವಯಂ ನ ಕೃತವಾನ್ ರಾಜ್ಯಂ ತಸ್ಮಾದ್ದೇವವ್ರತೋಽಭವತ್ ॥೧೯॥**

ಪರಾಕ್ರಮಿಯಾದ ಭೀಷ್ಮನು ತನ್ನ ಪ್ರತಿಜ್ಞೆಯಂತೆ ಸತ್ಯವತೀಸುತನಾದ ಚಿತ್ರಾಂಗದನನ್ನೇ ರಾಜ್ಯದಲ್ಲಿ ದೊರೆಯಾಗಿ ಸ್ಥಾಪಿಸಿದನು. ತಾನು ಹಿರಿಯಮಗನಾದಾಗ್ಯೂ ರಾಜ್ಯವನ್ನು ಸ್ವೀಕರಿಸಲಿಲ್ಲ. ಆ ಕಾರಣದಿಂದ ದೇವತೆಗಳಂತೆ ಸತ್ಯಪ್ರತಿಜ್ಞೆಯುಳ್ಳವನಾದುದರಿಂದ ದೇವವ್ರತನೆಂದು ಪ್ರಸಿದ್ಧಿಯನ್ನು ಪಡೆದವನಾದನು.

**ಚಿತ್ರಾಂಗದಸ್ತು ವೀರ್ಯೇಣ ಪ್ರಮತ್ತಃ ಪರದುಃಖದಃ ।**
**ಬಭೂವ ಬಲವಾನ್ ವೀರಃ ಸತ್ಯವತ್ಯಾತ್ಮಜಃ ಶುಚಿಃ ॥೨೦॥**

ಚಿತ್ರಾಂಗದನಾದರೋ, ಹೆಚ್ಚಾದ ಪರಾಕ್ರಮದಿಂದ ಕೊಬ್ಬಿದವನಾಗಿ ಶತ್ರುಗಳಿಗೆ ದುಃಖಪ್ರದನಾಗಿಯೂ, ಬಾಹುಬಲವುಳ್ಳವನಾಗಿಯೂ, ಮಹಾಪರಾಕ್ರಮಿಯಾಗಿಯೂ, ನಿರ್ಮಲವಾದ ನಡತೆಯುಳ್ಳವನಾಗಿಯೂ ರಾಜ್ಯವಾಳುತ್ತಿದ್ದನು.

**ಅಥೈಕದಾ ಮಹಾಬಾಹುಃ ಸೈನ್ಯೇನ ಮಹತಾ ವೃತಃ ।**
**ಪ್ರಚಚಾರ ವನೋದ್ದೇಶಾನ್ಪಶ್ಯನ್ವಧ್ಯಾನ್ಮೃಗಾನ್ ರುರೂನ್ ॥೨೧॥**

ಒಂದು ದಿವಸ ಹೆಚ್ಚಾದ ಬಾಹುಬಲವುಳ್ಳ ಆ ರಾಜನು ದೊಡ್ಡದಾದ ಸೈನ್ಯದೊಡನೆ ಕೂಡಿದವನಾಗಿ ಕೊಲ್ಲಲು ಯೋಗ್ಯವಾದ ಹುಲ್ಲೆ ಮುಂತಾದ ಮೃಗಗಳನ್ನು ಹುಡುಕಾಡುತ್ತಾ ಕಾಡಿನಲ್ಲಿ ಬೇಟೆಗಾಗಿ ಸಂಚರಿಸುತ್ತಿದ್ದನು.

**ಚಿತ್ರಾಂಗದಸ್ತು ಗಂಧರ್ವೋ ದೃಷ್ಟ್ವಾ ತಂ ಮಾರ್ಗಗಂ ನೃಪಂ ।**
**ಉತ್ತತಾರಾಂತಿಕಂ ಭೂಮೇರ್ವಿಮಾನವರಮಾಸ್ಥಿತಃ ॥೨೨॥**

ಆಗ ಚಿತ್ರಾಂಗದನೆಂಬ ಗಂಧರ್ವನು ಆಕಾಶದಲ್ಲಿ ವಿಮಾನದಿಂದ ಸಂಚರಿಸುತ್ತಾ ಕೆಳಗೆ ದಾರಿಯಲ್ಲಿರತಕ್ಕ ರಾಜನನ್ನು ನೋಡಿ ವಿಮಾನದಿಂದ ಭೂಮಿಯ ಸಮೀಪಕ್ಕೆ ಇಳಿದು ಬಂದನು.

**ತತ್ರಾಭೂಚ್ಚ ಮಹದ್ಯುದ್ಧಂ ತಯೋಃ ಸದೃಶವೀರ್ಯಯೋಃ ।**
**ಕುರುಕ್ಷೇತ್ರೇ ಮಹಾಸ್ಥಾನೇ ತ್ರೀಣಿ ವರ್ಷಾಣಿ ತಾಪಸಾಃ ॥೨೩॥**

ಓ ಶೌನಕಾದಿಋಷಿಗಳೇ, ಅಲ್ಲಿ ಸಮಾನವಾದ ಪರಾಕ್ರಮಿಗಳಾದ ಅವರೀರ್ವರಿಗೆ ಕುರುಕ್ಷೇತ್ರವೆಂಬ ಆ ದೊಡ್ಡಯುದ್ಧದ ಸ್ಥಾನದಲ್ಲಿ ಮೂರುವರುಷಗಳ ಪರ್ಯಂತವಾಗಿ ಯುದ್ಧವಾಯಿತು.

**ಇಂದ್ರಲೋಕಮವಾಪಾಶು ಗಂಧರ್ವೇಣ ಹತೋ ರಣೇ ।**
**ಭೀಷ್ಮಃ ಶ್ರುತ್ವಾ ಚಕಾರಾಶು ತಸ್ಯೌರ್ಧ್ವದೈಹಿಕಂ ತದಾ ॥೨೪॥**

ಚಿತ್ರಾಂಗದನು ಯುದ್ಧದಲ್ಲಿ ಗರ್ವದಿಂದ ಕೊಲ್ಲಲ್ಪಟ್ಟವನಾಗಿ ದಿವಂಗತನಾದನು. ಭೀಷ್ಮನು ಅವನ ಮರಣವಾರ್ತೆಯನ್ನು ಕೇಳಿ ದುಃಖಿಸಿ, ಸತ್ತಮೇಲೆ ಬರುವ ದೇಹಕ್ಕೆ ಸಂಬಂಧಿಸಿದ ಅಂತ್ಯಕ್ರಿಯೆಗಳನ್ನು ಜಾಗ್ರತೆಯಾಗಿ ಮಾಡಿದನು.

**ಗಾಂಗೇಯಃ ಕೃತಶೋಕಸ್ತು ಮಂತ್ರಿಭಿಃ ಪರಿವಾರಿತಃ ।**
**ವಿಚಿತ್ರವೀರ್ಯನಾಮಾನಂ ರಾಜ್ಯೇಶಂ ಚ ಚಕಾರ ಹ ॥೨೫॥**

ಭೀಷ್ಮನು ಚಿತ್ರಾಂಗದನ ಸಾವಿಗಾಗಿ ದುಃಖಿಸಿ, ಅನಂತರದಲ್ಲಿ ಮಂತ್ರಿಗಳೊಂದಿಗೆ ಕೂಡಿದವನಾಗಿ ವಿಚಿತ್ರವೀರ್ಯನನ್ನು ರಾಜ್ಯಾಧಿಪತಿಯನ್ನು ಮಾಡಿದನು.

**ಮಂತ್ರಿಭಿರ್ಬೋಧಿತಾ ಪಶ್ಚಾದ್ಗುರುಭಿಶ್ಚ ಮಹಾತ್ಮಭಿಃ ।**
**ಸ್ವಪುತ್ರಂ ರಾಜ್ಯಗಂ ದೃಷ್ಟ್ವಾ ಪುತ್ರಶೋಕಹತಾಪಿ ಚ ॥೨೬॥**
**ಸತ್ಯವತ್ಯತಿಸಂತುಷ್ಟಾ ಬಭೂವ ವರವರ್ಣಿನೀ ।**

ಆಮೇಲೆ ಒಳ್ಳೆಯ ದೇಹಕಾಂತಿಯಿಂದ ಶೋಭಿಸುವ ಸತ್ಯವತಿಯು ಹಿರಿಯ ಮಗನ ಸಾವಿನ ದುಃಖದಿಂದ ಸಂಕಟಪಡುತ್ತಿದ್ದರೂ ಮಂತ್ರಿಗಳಿಂದಲೂ, ತಿಳಿವಳಿಕೆ

ಯಲ್ಲಿ ದೊಡ್ಡವರಾದ ಗುರುಗಳಿಂದಲೂ ಸಮಾಧಾನಗೊಳಿಸಲ್ಪಟ್ಟವಳಾಗಿ ತನ್ನ ಎರಡನೆಯ ಮಗನಾದ ವಿಚಿತ್ರವೀರ್ಯನು ರಾಜನಾದುದನ್ನು ನೋಡಿ ತುಂಬ ಸಂತೋಷಗೊಂಡಳು..

**ವ್ಯಾಸೋಽಪಿ ಭ್ರಾತರಂ ಶ್ರುತ್ವಾ ರಾಜಾನಂ ಮುದಿತೋಽಭವತ್॥೨೭॥**

**ಯೌವನಂ ಪರಮಂ ಪ್ರಾಪ್ತಃ ಸತ್ಯವತ್ಯಾಃ ಸುತಃ ಶುಭಃ ।**
**ಚಕಾರ ಚಿಂತಾಂ ಭೀಷ್ಮೋಽಪಿ ವಿವಾಹಾರ್ಥಂ ಕನೀಯಸಃ ॥೨೮॥**

ವ್ಯಾಸನೂ ತನ್ನ ತಮ್ಮನು ರಾಜನಾದುದನ್ನು ಕೇಳಿ ಸಂತುಷ್ಟನಾದನು. ವಿಚಿತ್ರವೀರ್ಯನೂ ಕ್ರಮೇಣ ಯೌವನಶಾಲಿಯಾದನು. ಭೀಷ್ಮನು ತಮ್ಮನ ಮದುವೆಗಾಗಿ ಯೋಚಿಸಲಾರಂಭಿಸಿದನು.

**ಕಾಶೀರಾಜಸುತಾಸ್ತಿಸ್ರಃ ಸರ್ವಲಕ್ಷಣಸಂಯುತಾಃ ।**
**ತೇನ ರಾಜ್ಞಾ ವಿವಾಹಾರ್ಥಂ ಸ್ಥಾಪಿತಾಶ್ಚ ಸ್ವಯಂವರೇ ॥೨೯॥**

ಆಗ ಕಾಶೀರಾಜನಿಗೆ ಸುಂದರಿಯರಾದ, ಎಲ್ಲ ಬಗೆಯ ರಾಜಲಕ್ಷಣಗಳಿಂದ ಕೂಡಿದ ಮೂರುಮಂದಿ ಪುತ್ರಿಯರಿದ್ದರು. ಕಾಶೀರಾಜನು ಅವರ ಮದುವೆಗಾಗಿ ಸ್ವಯಂವರವನ್ನೇರ್ಪಡಿಸಿದನು.

**ರಾಜಾನೋ ರಾಜಪುತ್ರಾಶ್ಚ ಸಮಾಹೂತಾಃ ಸಹಸ್ರಶಃ ।**
**ಇಚ್ಛಾಸ್ವಯಂವರಾರ್ಥಂ ವೈ ಪೂಜ್ಯಮಾನಾಃ ಸಮಾಗತಾಃ ॥೩೦॥**

ಕಾಶೀರಾಜನ ಆಹ್ವಾನದಂತೆ ಅನೇಕಮಂದಿ ರಾಜರೂ ರಾಜಕುಮಾರರೂ ಸ್ವಯಂವರಕ್ಕೆ ಬಂದು ತಕ್ಕಂತೆ ಸತ್ಕಾರವನ್ನೂ ಪಡೆದರು.

**ತತ್ರ ಭೀಷ್ಮೋ ಮಹಾತೇಜಾಸ್ತಾ ಜಹಾರ ಬಲೇನ ವೈ ।**
**ನಿರ್ಮಥ್ಯ ರಾಜಕಂ ಸರ್ವಂ ರಥೇನೈಕೇನ ವೀರ್ಯವಾನ್ ॥೩೧॥**

ಅಲ್ಲಿ ಹೆಚ್ಚಾದ ಕ್ಷತ್ರಿಯ ತೇಜಸ್ಸುಳ್ಳ, ಮಹಾಪರಾಕ್ರಮಿಯಾದ ಭೀಷ್ಮನು ತನ್ನದೊಂದು ರಥದಿಂದಲೇ ಕಾಶೀರಾಜನ ಆ ಮೂವರು ಪುತ್ರಿಯರನ್ನು ಬಲಾತ್ಕಾರದಿಂದ ಕೊಂಡೊಯ್ದನು. ಆಗ ತನ್ನಮೇಲೆ ಎದುರಿಸಿ ಬಿದ್ದ ರಾಜರನ್ನೆಲ್ಲಾ ಸೋಲಿಸಿದನು.

**ಸ ಜಿತ್ವಾ ಪಾರ್ಥಿವಾನ್ ಸರ್ವಾಂಸ್ತ್ರಾಶ್ಚಾದಾಯ ಮಹಾರಥಃ ।**
**ಬಾಹುವೀರ್ಯೇಣ ತೇಜಸ್ವೀ ಹ್ಯಾಸಸಾದ ಗಜಾಹ್ವಯಂ ॥೩೨॥**

ಯುದ್ಧದಲ್ಲಿ ಗಟ್ಟಿಗನಾದ ಮಹಾರಥನಾದ ತೇಜೋವಂತನಾದ ಭೀಷ್ಮನು ಆ ರಾಜರನ್ನೆಲ್ಲ ಜಯಿಸಿ, ನೂರವರು ರಾಜಕನ್ಯೆಯರನ್ನು ತೆಗೆದುಕೊಂಡು ಹಸ್ತಿನಾವತೀ ಎಂಬ ತನ್ನ ರಾಜಧಾನಿಗೆ ಬಂದನು.

**ಮಾತೃವದ್ಭಗಿನೀವಚ್ಚ ಪುತ್ರೀವಚ್ಚಿಂತಯನ್ ಕಿಲ ।**
**ತಿಸ್ರಃ ಸಮಾನಯಾಮಾಸ ಕನ್ಯಕಾ ವಾಮಲೋಚನಾಃ ॥೩೩॥**

ಭೀಷ್ಮನು ಆ ಮೂರುಜನ ಕನ್ಯೆಯರಾದ ಸುಂದರಿಯರನ್ನೂ ತನ್ನ ತಾಯಿಯಂತೆಯೂ, ಪುತ್ರಿಯರಂತೆಯೂ, ತಂಗಿಯರಂತೆಯೂ ಭಾವಿಸಿ ಅವರನ್ನು ಕರೆದುಕೊಂಡುಬಂದನು.

**ಸತ್ಯವತ್ಯೈ ನಿವೇದ್ಯಾಶು ದ್ವಿಜಾನಾಹೂಯ ಸತ್ವರಃ ।**
**ದೈವಜ್ಞಾನ್ವೇದವಿದುಷಃ ಪರ್ಯಪೃಚ್ಛಚ್ಛುಭಂ ದಿನಂ ॥೩೪॥**

ಆ ಕನ್ಯೆಯರನ್ನು ಸತ್ಯವತಿಯ ವಶಕ್ಕೊಪ್ಪಿಸಿ, ಕೂಡಲೇ ಮದುವೆಗಾಗಿ ಜ್ಯೋತಿಷಶಾಸ್ತ್ರವನ್ನು ತಿಳಿದ, ವೇದಪಂಡಿತರಾದ ಬ್ರಾಹ್ಮಣರನ್ನು ಕರೆಸಿ ಲಗ್ನಕ್ಕೆ ಶುಭಮುಹೂರ್ತವನ್ನು ಕೇಳಿದನು.

**ಕೃತ್ವಾ ವಿವಾಹಸಂಭಾರಂ ಯದಾ ವೈ ಭ್ರಾತರಂ ನಿಜಂ ।**
**ವಿಚಿತ್ರವೀರ್ಯಂ ಧರ್ಮಿಷ್ಠಂ ವಿವಾಹಯತಿ ತಾ ಯದಾ ॥೩೫॥**

ಮದುವೆಗೆ ಸಾಮಗ್ರಿಗಳನ್ನು ಅಣಿಮಾಡಿಕೊಂಡು ಆ ಮೂವರು ಕನ್ಯೆಯರನ್ನೂ ಧರ್ಮಿಷ್ಠನಾದ ವಿಚಿತ್ರವೀರ್ಯನಿಗೆ ಮದುವೆಮಾಡಬೇಕೆಂದು ಯಾವಾಗ ಭೀಷ್ಮನು ಅನುವಾದನೋ,

**ತದಾ ಜ್ಯೇಷ್ಠಾಪ್ಯುವಾಚೇದಂ ಕನ್ಯಕಾ ಜಾಹ್ನವೀಸುತಂ ।**
**ಲಜ್ಜಮಾನಾಸಿತಾಪಾಂಗೀ ತಿಸೃಣಾಂ ಚಾರುಲೋಚನಾ ॥೩೬॥**

ಆಗ ಆ ಮೂವರಲ್ಲಿ ಜ್ಯೇಷ್ಠಳಾದ ಕನ್ಯೆಯು ನಾಚುತ್ತಾ, ಗಂಗಾದೇವಿಯ ಮಗನಾದ ಭೀಷ್ಮನನ್ನು ಕುರಿತು ಈ ಮಾತನ್ನು ಹೇಳಿದಳು.

**ಗಂಗಾಪುತ್ರ ಕುರುಶ್ರೇಷ್ಠ ಧರ್ಮಜ್ಞ ಕುಲದೀಪಕ ।**
**ಮಯಾ ಸ್ವಯಂವರೇ ಶಾಲ್ವೋ ವೃತೋಽಸ್ತಿ ಮನಸಾ ನೃಪಃ ॥೩೭॥**

ಕುರುವಂಶದ ರಾಜರಲ್ಲಿ ಶ್ರೇಷ್ಠನೂ, ಧರ್ಮಜ್ಞಾನಿಯೂ, ವಂಶವನ್ನು ಕೀರ್ತಿಯಿಂದ ಬೆಳಗಿಸಿದವನೂ ಆದ ಎಲೈ ಭೀಷ್ಮನೇ, ನಾನು ಸ್ವಯಂವರದ ಕಾಲದಲ್ಲಿ ಶಾಲ್ವನೆಂಬ ರಾಜನನ್ನು ಮನಸ್ಸಿನಿಂದಲೇ ವರಿಸಿರುತ್ತೇನೆ.

**ವೃತಾಹಂ ತೇನ ರಾಜ್ಞಾಂ ವೈ ಚಿತ್ತೇ ಪ್ರೇಮಸಮಾಕುಲೇ ।**
**ಯಥಾಯೋಗ್ಯಂ ಕುರುಷ್ವಾದ್ಯ ಕುಲಸ್ಯಾಸ್ಯ ಪರಂತಪ ॥೩೮॥**

ಎಲೈ ಶತ್ರುಗಳನ್ನು ಸೋಲಿಸಬಲ್ಲ ಭೀಷ್ಮನೇ, ಆ ಶಾಲ್ವರಾಜನೂ ಪ್ರೇಮದಿಂದ ತುಂಬಿದ ತನ್ನ ಮನಸ್ಸಿನಲ್ಲಿ ನನ್ನನ್ನೇ ವರಿಸಿರುತ್ತಾನೆ. ಇನ್ನು ನಿಮ್ಮ ವಂಶಕ್ಕೆ ಯೋಗ್ಯವಾಗಿರುವ ರೀತಿಯಲ್ಲಿ ನಿನಗೆ ತಿಳಿದಂತೆ ಮಾಡು.

**ತೇನಾಹಂ ವೃತಪೂರ್ವಾಽಸ್ಮಿ ತ್ವಂ ಚ ಧರ್ಮಭೃತಾಂ ವರಃ ।**
**ಬಲವಾನಸಿ ಗಾಂಗೇಯ ಯಥೇಚ್ಛಸಿ ತಥಾ ಕುರು ॥೩೯॥**

ಓ ಗಂಗಾಪುತ್ರನಾದ ಭೀಷ್ಮನೇ, ಪೂರ್ವದಿಂದಲೂ ನಾನು ಆ ರಾಜನಿಂದ ವರಿಸಲ್ಪಟ್ಟಿದ್ದೇನೆ. ನೀನು ಧರ್ಮವನ್ನು ಕಾಪಾಡುವವರಲ್ಲಿ ಉತ್ತಮನಾದವನೂ, ಪರಾಕ್ರಮಶಾಲಿಯೂ ಆಗಿರುವುದರಿಂದ ನಿನ್ನ ಹೃದಯದಲ್ಲಿ ಯಾವುದು ಧರ್ಮವೆಂದು ತಿಳಿದುಬರುವುದೋ ಅದರಂತೆ ನೆರವೇರಿಸು.

॥ ಸೂತ ಉವಾಚ ॥

**ಏವಮುಕ್ತಸ್ತಯಾ ತತ್ರ ಕನ್ಯಯಾ ಕುರುನಂದನಃ ।**
**ಅಪೃಚ್ಛದ್ಬ್ರಾಹ್ಮಣಾನ್ವೃದ್ಧಾನ್ ಮಾತರಂ ಸಚಿವಾಂಸ್ತಥಾ ॥೪೦॥**

ಸೂತನು ಹೇಳಿದನು—ಆ ಕನ್ಯೆಯು ಹೇಳಿದ ಈ ಮಾತನ್ನು ಕೇಳಿ ಕುರುವಂಶಕ್ಕೆ ಸಂತೋಷಕರನಾದ ಭೀಷ್ಮನು, ವಯೋವೃದ್ಧರೂ, ಜ್ಞಾನವೃದ್ಧರೂ ಆದ ಬ್ರಾಹ್ಮಣರನ್ನೂ, ತಾಯಿಯಾದ ಸತ್ಯವತಿಯನ್ನೂ, ಮಂತ್ರಿಗಳನ್ನೂ ಕುರಿತು ಈ ವಿಷಯವಾಗಿ ಅವರ ಅಭಿಪ್ರಾಯಗಳನ್ನು ಕೇಳಿದನು.

**ಸರ್ವೇಷಾಂ ಮತಮಾಜ್ಞಾಯ ಗಾಂಗೇಯೋ ಧರ್ಮವಿತ್ತಮಃ ।**
**ಗಚ್ಛೇತಿ ಕನ್ಯಕಾಂ ಪ್ರಾಹ ಯಥಾರುಚಿ ವರಾನನೇ ॥೪೧॥**

ಎಲ್ಲರ ಅಭಿಪ್ರಾಯವನ್ನೂ ತಿಳಿದು ಭೀಷ್ಮನು ಅವಳನ್ನು ಕುರಿತು, ಎಲೌ ಸುಮುಖಿಯೇ, ನೀನೆಲ್ಲಿಗೆ ಹೋಗಬೇಕೆಂದು ಇಚ್ಛಿಸುತ್ತೀಯೋ ಅಲ್ಲಿಗೆ ಹೋಗ ಬಹುದು ಎಂದನು.

**ವಿಸರ್ಜಿತಾಥ ಸಾ ತೇನ ಗತಾ ಶಾಲ್ವನಿಕೇತನಂ ।**
**ಉವಾಚ ತಂ ವರಾರೋಹಾ ರಾಜಾನಂ ಮನಸೇಪ್ಸಿತಂ ॥೪೨॥**

ಹೀಗೆ ಭೀಷ್ಮನಿಂದ ಅನುಮತಿಯನ್ನು ಪಡೆದು ಹೊರಟುಬಂದ ಸುಂದರಿ ಯಾದ ಆ ಜ್ಯೇಷ್ಠಕನ್ಯೆಯು ಶಾಲ್ವರಾಜನ ಮನೆಗೆ ಹೋಗಿ, ಮನಸಾ ತನ್ನಿಂದ ವರಿಸಲ್ಪಟ್ಟಿದ್ದ ಅವನನ್ನು ಕುರಿತು ಹೀಗೆ ಹೇಳಿದಳು.

**ವಿನಿರ್ಮುಕ್ತಾಸ್ಮಿ ಭೀಷ್ಮೇಣ ತ್ವನ್ಮನಸ್ಕೇತಿ ಧರ್ಮತಃ ।**
**ಆಗತಾಸ್ಮಿ ಮಹಾರಾಜ ಗೃಹಾಣಾದ್ಯ ಕರಂ ಮಮ ॥೪೩॥**

ಎಲೈ ಶಾಲ್ವರಾಜನೇ, ಭೀಷ್ಮನು ನನ್ನನ್ನು ನಿನ್ನಲ್ಲಿ ಅನುರಕ್ತಳೆಂದು ತಿಳಿದು, ಧರ್ಮವನ್ನು ಗಮನಿಸಿ, ನನ್ನನ್ನು ಬಿಡುಗಡೆಮಾಡಿರುವನು. ಆದುದರಿಂದ ಎಲೈ ಮಹಾರಾಜನೇ, ನಾನು ನಿನ್ನಲ್ಲಿಗೆ ಬಂದಿರುತ್ತೇನೆ. ಈಗ ನನ್ನನ್ನು ಪಾಣಿಗ್ರಹಣ ಪೂರ್ವಕವಾಗಿ ಮದುವೆಯಾಗು.

**ಧರ್ಮಪತ್ನೀ ತವಾತ್ಯಂತಂ ಭವಾಮಿ ನೃಪಸತ್ತಮ ।**
**ಚಿಂತಿತೋಽಸಿ ಮಯಾ ಪೂರ್ವಂ ತ್ವಯಾಹಂ ನಾತ್ರ ಸಂಶಯಃ ॥೪೪॥**

ನಾನು ನಿನಗೆ ಅತ್ಯಂತಪ್ರಿಯಳಾದ ಧರ್ಮಪತ್ನಿಯಾಗಿರುತ್ತೇನೆ. ಸ್ವಯಂ ವರಕ್ಕೆ ಮೊದಲು ನೀನು ನನ್ನನ್ನು ಪ್ರೀತಿಸಿರುತ್ತೀಯೆ. ನಾನೂ ನಿನ್ನನ್ನು ಪ್ರೀತಿಸಿ ರುತ್ತೇನೆ. ಈ ಅನ್ಯೋನ್ಯಪ್ರೇಮವಿಚಾರದಲ್ಲಿ ಸಂದೇಹವಿಲ್ಲವು

॥ ಶಾಲ್ವ ಉವಾಚ ॥

**ಗೃಹೀತಾ ತ್ವಂ ವರಾರೋಹೇ ಭೀಷ್ಮೇಣ ಪಶ್ಯತೋ ಮಮ ।**
**ರಥಸಂಸ್ಥಾಪಿತಾ ತೇನ ನ ಗೃಹೀಷ್ಯೇ ಕರಂ ತವ ॥೪೫॥**

ಶಾಲ್ವರಾಜನು ಆ ಕನ್ಯೆಗೆ ಈ ರೀತಿ ಉತ್ತರವನ್ನು ಹೇಳಿದನು - ಎಲೌ ಸುಂದರಿಯೇ, ಅಂದು ಸ್ವಯಂವರ ಕಾಲದಲ್ಲಿ ಭೀಷ್ಮನು ನನ್ನೆದುರಿಗೇ ನಿನ್ನ ಕೈಯ್ಯನ್ನು ಹಿಡಿದು ರಥದಲ್ಲಿ ಕೂರಿಸಿರುತ್ತಾನೆ. ಇಂತಹ ನಿನ್ನನ್ನು ಎಂದರೆ, ಪರಪುರುಷನ ಕರಸ್ಪರ್ಶವಾಗಿರುವ ನಿನ್ನನ್ನು ನಾನು ಮದುವೆಯಾಗುವುದಿಲ್ಲ.

**ಪರೋಚ್ಛಿಷ್ಟಾಂ ಚ ಕಃ ಕನ್ಯಾಂ ಗೃಹ್ಣಾತಿ ಮತಿಮಾನ್ನರಃ ।**
**ಅತೋಽಹಂ ನ ಗ್ರಹೀಷ್ಯಾಮಿ ತ್ಯಕ್ತಾಂ ಭೀಷ್ಮೇಣ ಮಾತೃವತ್ ॥**

ತಿಳಿವಳಿಕೆಯುಳ್ಳ ಯಾವನು ತಾನೇ ಇನ್ನೊಬ್ಬರಿಂದ ಹಿಡಿದು ಬಿಡಲ್ಪಟ್ಟ ಕನ್ಯೆಯನ್ನು ಸ್ವೀಕರಿಸಿಯಾನು ? ಆದುದರಿಂದ ಭೀಷ್ಮನಿಂದ ಪರಿತ್ಯಕ್ತಳಾದ ನಿನ್ನನ್ನು ನಾನು ಸ್ವೀಕರಿಸುವುದಿಲ್ಲ. ನೀನು ನನಗೆ ತಾಯಿಯ ಸಮಾನಳು.

**ರುದತೀ ವಿಲಪಂತೀ ಸಾ ತ್ಯಕ್ತಾ ತೇನ ಮಹಾತ್ಮನಾ ।**
**ಪುನರ್ಭೀಷ್ಮಂ ಸಮಾಗತ್ಯ ರುದತೀ ಚೇದಮಬ್ರವೀತ್ ॥೪೭॥**

ಹೀಗೆ ಆ ಕನ್ಯೆಯು ಮಹಾಶಯನಾದ ಶಾಲ್ವರಾಜನಿಂದ ತಿರಸ್ಕೃತಳಾಗಿ ಅಳುತ್ತಾ, ದುಃಖದಿಂದ ಗೋಳಿಡುತ್ತಾ ಪುನಃ ಭೀಷ್ಮನ ಹತ್ತಿರಕ್ಕೇ ಬಂದು ಅಳುತ್ತಲೇ ಈರೀತಿ ಹೇಳಿದಳು.

**ಶಾಲ್ವೋ ಮುಕ್ತಾಂ ತ್ವಯಾ ವೀರ ನ ಗೃಹ್ಣಾತಿ ಗೃಹಾಣ ಮಾಂ ।**
**ಧರ್ಮಜ್ಞೋಽಸಿ ಮಹಾಭಾಗ ಮರಿಷ್ಯಾಮ್ಯನ್ಯಥಾ ಹ್ಯಹಂ ॥೪೮॥**

ಎಲೈ ವೀರನೇ, ನಿನ್ನಿಂದ ತ್ಯಕ್ತಳಾದಕಾರಣದಿಂದ ನನ್ನನ್ನು ಶಾಲ್ವನು ಸ್ವೀಕರಿಸಲಿಲ್ಲ. ಆದುದರಿಂದ ಧರ್ಮಸೂಕ್ಷ್ಮವನ್ನು ನೀನು ತಿಳಿದಿರುವುದರಿಂದ ನೀನೇ ನನ್ನನ್ನು ಸ್ವೀಕರಿಸು. ಹಾಗೆ ನೀನು ಸ್ವೀಕರಿಸದಿದ್ದರೆ ನಾನು ಪ್ರಾಣವನ್ನು ಕಳೆದುಕೊಳ್ಳುವೆನು.

॥ ಭೀಷ್ಮ ಉವಾಚ ॥

**ಅನ್ಯಚಿತ್ತಾಂ ಕಥಂ ತ್ವಾ ವೈ ಗೃಹ್ಣಾಮಿ ವರವರ್ಣಿನಿ ।**
**ಪಿತರಂ ಸ್ವಂ ವರಾರೋಹೇ ವ್ರಜ ಶೀಘ್ರಂ ನಿರಾಕುಲಾ ॥೪೯॥**

ಭೀಷ್ಮನು ಹೇಳಿದನು—ಓ ಸುಂದರಿಯೇ, ಇತರ ಪುರುಷರಲ್ಲಿ ಮನಸ್ಸಿಟ್ಟಿದ್ದ ನಿನ್ನನ್ನು ನಾನು ಹೇಗೆ ಪರಿಗ್ರಹಿಸಲಿ? ಆ ಕಾರಣದಿಂದ ನೀನು ಯಾವ ಯೋಚನೆಯನ್ನೂ ಮಾಡದ ಸ್ವಸ್ಥಚಿತ್ತಳಾಗಿ ಬೇಗ ನಿನ್ನ ತಂದೆಯ ಮನೆಗೆ ಹೋಗು.

**ತಥೋಕ್ತ್ವಾ ಸಾ ತು ಭೀಷ್ಮೇಣ ಜಗಾಮ ವನಮೇವ ಹಿ ।**
**ತಪಶ್ಚಕಾರ ವಿಜನೇ ತೀರ್ಥೇ ಪರಮಪಾವನೇ ॥೫೦॥**

ಭೀಷ್ಮನು ಹೀಗೆ ಹೇಳಲಾಗಿ, ಕಾಶೀರಾಜನ ಜ್ಯೇಷ್ಠಕನ್ಯೆಯು ನೆಟ್ಟಗೆ ಕಾಡಿಗೆ ಹೋದಳು. ಅಲ್ಲಿ ಅತಿ ಪವಿತ್ರವಾದ ಒಂದು ತೀರ್ಥಪ್ರದೇಶದಲ್ಲಿ, ನಿರ್ಜನವಾದ ಸ್ಥಳದಲ್ಲಿ ತಪಸ್ಸನ್ನು ಮಾಡಲುಪಕ್ರಮಿಸಿದಳು.

**ದ್ವೇ ಭಾರ್ಯೇ ಚಾತಿರೂಪಾಢ್ಯೇ ತಸ್ಯ ರಾಜ್ಞೋ ಬಭೂವತುಃ ।**
**ಅಂಬಾಲಿಕಾ ಚಾಂಬಿಕಾ ಚ ಕಾಶೀರಾಜಸುತೇ ಶುಭೇ ॥೫೧॥**

ಸತ್ಕುಲಪ್ರಸೂತೆಯರೂ ಸೌಂದರ್ಯವುಳ್ಳವರೂ ಆದ, ಉಳಿದ, ಕಾಶೀರಾಜನ ಇನ್ನಿಬ್ಬರು ಪುತ್ರಿಯರು, ಅಂಬಾಲಿಕೆ ಮತ್ತು ಅಂಬಿಕೆ ಎಂಬುವರು ಆ ವಿಚಿತ್ರವೀರ್ಯ ರಾಜನಿಗೆ ರಾಣಿಯರಾದರು.

**ರಾಜಾ ವಿಚಿತ್ರವೀರ್ಯೋಽಸೌ ತಾಭ್ಯಾಂ ಸಹ ಮಹಾಬಲಃ ।**
**ರೇಮೇ ನಾನಾವಿಹಾರೈಶ್ಚ ಗೃಹೇ ಚೋಪವನೇ ತಥಾ ॥೫೨॥**

ದೊರೆಯಾದ ಈ ವಿಚಿತ್ರವೀರ್ಯನು ತನ್ನ ಇಬ್ಬರು ಪತ್ನಿಯರೊಡಗೂಡಿ ತನ್ನ ಅರಮನೆಯಲ್ಲಿಯೂ, ಉದ್ಯಾನವನದಲ್ಲಿಯೂ, ಅನೇಕವಿಧವಾದ ವಿಹಾರಾದಿಗಳಿಂದ ಕ್ರೀಡಿಸಿದನು.

**ವರ್ಷಾಣಿ ನವ ರಾಜೇಂದ್ರಃ ಕುರ್ವನ್ ಕ್ರೀಡಾಂ ಮನೋರಮಾಂ ।**
**ಪ್ರಾಪಾಸೌ ಮರಣಂ ಭೂಯೋ ಗೃಹೀತೋ ರಾಜಯಕ್ಷ್ಮಣಾ ॥೫೩॥**

ರಾಜಶ್ರೇಷ್ಠನಾದ ವಿಚಿತ್ರವೀರ್ಯನು ಹೀಗೆ ಒಂಬತ್ತು ವರ್ಷಗಳಪರ್ಯಂತವಾಗಿ ಆ ಸುಂದರಿಯರೊಡನೆ ಕ್ರೀಡಿಸುತ್ತಾ ಬಲವಾದ ಕ್ಷಯರೋಗಕ್ಕೆ ಸಿಕ್ಕಿ ಮೃತನಾದನು.

**ಮೃತೇ ಪುತ್ರೇಽತಿದುಃಖಾರ್ತಾ ಜಾತಾ ಸತ್ಯವತೀ ತಥಾ ।**
**ಕಾರಯಾಮಾಸ ಪುತ್ರಸ್ಯ ಪ್ರೇತಕಾರ್ಯಾಣಿ ಮಂತ್ರಿಭಿಃ ॥೫೪॥**

ಹೀಗೆ ಪುತ್ರನಾದ ವಿಚಿತ್ರವೀರ್ಯನು ಮೃತನಾಗಲು, ಸತ್ಯವತಿಯು ಬಹಳ ದುಃಖಗೊಂಡು ಮಂತ್ರಿಗಳಿಂದ ಅವನ ಅಂತ್ಯಕ್ರಿಯೆಗಳನ್ನು ಮಾಡಿಸಿದಳು.

**ಭೀಷ್ಮಮಾಹ ತದೈಕಾಂತೇ ವಚನಂ ಚಾತಿದುಃಖಿತಾ ।**
**ರಾಜ್ಯಂ ಕುರು ಮಹಾಭಾಗ ಪಿತುಸ್ತೇ ಶಂತನೋಃ ಸುತ ॥೫೫॥**

ಅಲ್ಲದೆ ಆ ಸತ್ಯವತಿಯು ಭೀಷ್ಮನನ್ನು ಕರೆದು ಏಕಾಂತದಲ್ಲಿ ಹೀಗೆ ಹೇಳಿದಳು. ಎಲೈ ಮಹಾಭಾಗ್ಯಶಾಲಿಯೂ, ಶಂತನುರಾಜನ ಮಗನೂ ಆದ ಭೀಷ್ಮನೇ, ನಿನ್ನ ತಂದೆಯ ರಾಜ್ಯವು ಅನಾಯಕವಾಗಿರುವುದು. ಆದುದರಿಂದ ಅದನ್ನು ನೀನಾದರೂ ಆಳು.

**ಭ್ರಾತುರ್ಭಾರ್ಯಾಂ ಗೃಹಾಣ ತ್ವಂ ವಂಶಂ ಚ ಪರಿರಕ್ಷಯ ।**
**ಯಥಾ ನ ನಾಶಮಾಯಾತಿ ಯಯಾತೇರ್ವಂಶ ಇತ್ಯುತ ॥೫೬॥**

ಅಲ್ಲದೆ, ನೀನು ನಿನ್ನ ತಮ್ಮನ ಹೆಂಡಿರನ್ನು ಸ್ವೀಕರಿಸಿ ನಮ್ಮ ಯಯಾತಿ ರಾಜನ ಕುಲವನ್ನು ನಿಂತುಹೋಗಿ ನಾಶವಾಗದಂತೆ ಕಾಪಾಡು.

॥ ಭೀಷ್ಮ ಉವಾಚ ॥

**ಪ್ರತಿಜ್ಞಾ ಮೇ ಶ್ರುತಾ ಮಾತಃ ಪಿತ್ರರ್ಥೇ ಯಾ ಮಯಾ ಕೃತಾ ।**
**ನಾಹಂ ರಾಜ್ಯಂ ಕರಿಷ್ಯಾಮಿ ನ ಚಾಹಂ ದಾರಸಂಗ್ರಹಂ ॥೫೭॥**

ಭೀಷ್ಮನು ಹೇಳಿದನು—ಎಲೌ ತಾಯಿಯೇ, ನಾನು ನಮ್ಮ ತಂದೆಯ ಇಚ್ಛೆಯನ್ನು ಪೂರ್ಣಗೊಳಿಸುವುದಕ್ಕಾಗಿ ಹಿಂದೆ ಮಾಡಿರತಕ್ಕ ಪ್ರತಿಜ್ಞೆಯನ್ನು ನೀನು ಕೇಳಿ ತಿಳಿದೇ ಇದ್ದೀಯೆ. ಆ ಪ್ರತಿಜ್ಞೆಯಂತೆ ನಾನು ರಾಜ್ಯವನ್ನೂ ಆಳುವುದಿಲ್ಲ. ಹೆಂಡಿರನ್ನೂ ಮಾಡಿಕೊಳ್ಳುವುದಿಲ್ಲ.

॥ ಸೂತ ಉವಾಚ ॥

**ತದಾ ಚಿಂತಾತುರಾ ಜಾತಾ ಕಥಂ ವಂಶೋ ಭವೇದಿತಿ ।**
**ನಾಲಸಾದ್ಧಿ ಸುಖಂ ಮಹ್ಯಂ ಸಮುತ್ಪನ್ನೇಹ್ಯರಾಜಕೇ ॥೫೮॥**

ಸೂತನು ಹೇಳಿದನು—ಆಗ ಸತ್ಯವತಿಯು, ವಂಶದ ಉದ್ಧಾರವು ಆಗುವುದು ಹೇಗೆ ? ಈಗ ರಾಜ್ಯವು ಅನಾಯಕವಾಗಿರುವಾಗ ಆಲಸ್ಯಮಾಡುವ ಹಾಗಿಲ್ಲವು ಎಂದು ನಾನಾಪರಿಯಾಗಿ ಚಿಂತಿಸಿದಳು.

**ಗಾಂಗೇಯಸ್ತಾಮುವಾಚೇದಂ ಮಾ ಚಿಂತಾಂ ಕುರು ಭಾಮಿನಿ ।**
**ಪುತ್ರಂ ವಿಚಿತ್ರವೀರ್ಯಸ್ಯ ಕ್ಷೇತ್ರಜಂ ಚೋಪಪಾದಯ ॥೫೯॥**

ಆಗ ಭೀಷ್ಮನು ಅವಳನ್ನು ಕುರಿತು ಈರೀತಿ ಹೇಳಿದನು—ಎಲೌ ತಾಯಿಯೇ, ಚಿಂತೆಯನ್ನು ಮಾಡಬೇಡ. ವಿಚಿತ್ರವೀರ್ಯನ ಪತ್ನಿಯಲ್ಲಿ ಅನ್ಯಪುರುಷನಿಂದ ಕ್ಷೇತ್ರಜನಾದ ಪುತ್ರನನ್ನು ಪಡೆಯುವಂತೆ ಏರ್ಪಡಿಸು.

**ಕುಲೀನಂ ದ್ವಿಜಮಾಹೂಯ ವಧ್ವಾ ಸಹ ನಿಯೋಜಯ ।**
**ನಾತ್ರ ದೋಷೋಽಸ್ತಿ ವೇದೇಽಪಿ ಕುಲರಕ್ಷಾವಿಧೌ ಕಿಲ ॥೬೦॥**

ಸತ್ಕುಲಪ್ರಸೂತನಾದ ಬ್ರಾಹ್ಮಣನನ್ನು ಕರೆಯಿಸಿ ನಿನ್ನ ಸೊಸೆಯೊಂದಿಗೆ ಸೇರಿಸು. ಕುಲನಾಶವು ಒದಗುವ ಸಂದರ್ಭದಲ್ಲಿ ಹೀಗೆ ವಂಶವನ್ನು ಕಾಪಾಡಿಕೊಳ್ಳುವುದರಲ್ಲಿ ದೋಷವೇನೂ ಇಲ್ಲವೆಂದು ವೇದದಲ್ಲಿಯೂ ಹೇಳಿದೆಯಲ್ಲವೇ?

**ಪೌತ್ರಂ ಚೈವಂ ಸಮುತ್ಪಾದ್ಯ ರಾಜ್ಯಂ ದೇಹಿ ಶುಚಿಸ್ಮಿತೇ ।**
**ಅಹಂ ಚ ಪಾಲಯಿಷ್ಯಾಮಿ ತಸ್ಯ ಶಾಸನಮೇವ ಹಿ ॥೬೧॥**

ಹೀಗೆ ಮೊಮ್ಮಗನನ್ನು ಪಡೆದು ಅವನಿಗೆ ಪಟ್ಟವನ್ನು ಕಟ್ಟು. ನಾನೂ ಅವನ ಆಜ್ಞೆಯಂತೆ ನಡೆಯುತ್ತೇನೆ.

**ತಚ್ಛ್ರುತ್ವಾ ವಚನಂ ತಸ್ಯ ಕಾನೀನಂ ಸ್ವಸುತಂ ಮುನಿಂ ।**
**ಜಗಾಮ ಮನಸಾ ವ್ಯಾಸಂ ದ್ವೈಪಾಯನಮಕಲ್ಮಷಂ ॥೬೨॥**

ಭೀಷ್ಮನ ಈ ಮಾತನ್ನು ಕೇಳಿ ಸತ್ಯವತಿಯು ತನ್ನ ಕನ್ಯಕಾವಸ್ಥೆಯಲ್ಲಿ ಹುಟ್ಟಿದ ಪರಮಪವಿತ್ರನಾದ ವ್ಯಾಸಮುನಿಯನ್ನು ಸ್ಮರಿಸಿದಳು.

**ಸ್ಮೃತಮಾತ್ರಸ್ತತೋ ವ್ಯಾಸ ಆಜಗಾಮ ಸ ತಾಪಸಃ ।**
**ಕೃತ್ವಾ ಪ್ರಣಾಮಂ ಮಾತ್ರೇಽಥ ಸಂಸ್ಥಿತೋ ದೀಪ್ತಿಮಾನ್ ಮುನಿಃ ॥೬೩॥**

ಸ್ಮರಣೆಮಾಡಿದ ಕೂಡಲೇ ತೇಜಸ್ವಿಯಾದ ವ್ಯಾಸಮುನಿಯು ಪ್ರತ್ಯಕ್ಷನಾಗಿ ಬಂದು ತಾಯಿಗೆ ನಮಸ್ಕಾರಮಾಡಿ ಸಮೀಪದಲ್ಲಿ ನಿಂತುಕೊಂಡನು.

**ಭೀಷ್ಮೇಣ ಪೂಜಿತಃ ಕಾಮಂ ಸತ್ಯವತ್ಯಾ ಚ ಮಾನಿತಃ ।**
**ತಸ್ಥೌ ತತ್ರ ಮಹಾತೇಜಾ ವಿಧೂಮೋಽಗ್ನಿರಿವಾಪರಃ ॥೬೪॥**

ಅಲ್ಲಿ ಭೀಷ್ಮನಿಂದಲೂ, ಸತ್ಯವತಿಯಿಂದಲೂ ಚನ್ನಾಗಿ ಪೂಜಿಸಲ್ಪಟ್ಟು, ದಿವ್ಯ ತೇಜಸ್ಸಿನಿಂದ ಕೂಡಿದ್ದ ಆ ವ್ಯಾಸಮುನಿಯು ಅವರೆದುರಿನಲ್ಲಿ ಹೊಗೆಯಿಲ್ಲದ ಎರಡನೆಯ ಅಗ್ನಿಯಂತೆ ಪ್ರಕಾಶಿಸಿದನು.

**ತಮುವಾಚ ಮುನಿಂ ಮಾತಾ ಪುತ್ರಮುತ್ಪಾದಯಾಧುನಾ ।**
**ಕ್ಷೇತ್ರೇ ವಿಚಿತ್ರವೀರ್ಯಸ್ಯ ಸುಂದರಂ ತವ ವೀರ್ಯಜಂ ॥೬೫॥**

ತಾಯಿಯಾದ ಸತ್ಯವತಿಯು ವ್ಯಾಸನನ್ನು ಕುರಿತು, ಈಗ ವಂಶವು ಕ್ಷಯಿಸುತ್ತಲಿದೆ. ವಿಚಿತ್ರವೀರ್ಯನ ಪತ್ನಿಯರಲ್ಲಿ ಸುಂದರನಾದ ಪುತ್ರನನ್ನು ಉತ್ಪಾದನೆ ಮಾಡು, ಎಂದು ಹೇಳಿದಳು.

**ವ್ಯಾಸಃ ಶ್ರುತ್ವಾ ವಚೋ ಮಾತುರಾಪ್ತವಾಕ್ಯಮಮನ್ಯತ ।**
**ಓಮಿತ್ಯುಕ್ತ್ವಾ ಸ್ಥಿತಸ್ತತ್ರ ಋತುಕಾಲಮಚಿಂತಯತ್ ॥೬೬॥**

ತಾಯಿಯ ಮಾತನ್ನು ಆಪ್ತವಾಕ್ಯವೆಂದು ಪರಿಗ್ರಹಿಸಿ ವ್ಯಾಸಮುನಿಯು ಹಾಗೆಯೇ ಆಗಲೆಂದು ಒಪ್ಪಿ ಅಲ್ಲಿಯೇ ಋತುಕಾಲವನ್ನು ನಿರೀಕ್ಷಿಸುತ್ತಿದ್ದನು.

**ಅಂಬಿಕಾ ಚ ಯದಾ ಸ್ನಾತಾ ನಾರೀ ಋತುಮತೀ ತದಾ ।**
**ಸಂಗಂ ಪ್ರಾಪ್ಯ ಮುನೇಃ ಪುತ್ರಮಸೂತಾಂಧಂ ಮಹಾಬಲಂ ॥೬೭॥**

ಅಂಬಿಕೆಯು ಋತುವನ್ನು ಪಡೆದು ಸ್ನಾನವನ್ನು ಮಾಡಿದವಳಾಗಿ ಬಂದು ಆ ವ್ಯಾಸಮುನಿಯೊಡನೆ ಸಮಾಗಮವನ್ನು ಪಡೆದು ಅವನ ತೇಜಸ್ಸನ್ನು ನೋಡಲಾರದೆ ಕಣ್ಣನ್ನು ಮುಚ್ಚಿಕೊಂಡಿದ್ದುದರಿಂದ ಮಹಾಬಲಶಾಲಿಯಾದರೂ ಕುರುಡನಾದ ಮಗನನ್ನು ಪಡೆದಳು.

**ಜನ್ಮಾಂಧಂ ಚ ಸುತಂ ವೀಕ್ಷ್ಯ ದುಃಖಿತಾ ಸತ್ಯವತ್ಯತಿ ।**
**ದ್ವಿತೀಯಾಂ ಚ ವಧೂಮಾಹ ಪುತ್ರಮುತ್ಪಾದಯಾಶು ವೈ ॥೬೮॥**

ಮಗುವು ಹುಟ್ಟುಕುರುಡನಾದುದನ್ನು ನೋಡಿ ಸತ್ಯವತಿಯು ದುಃಖಿಸಿ, ಎರಡನೆಯ ಸೊಸೆಯನ್ನು ಕರೆದು ವ್ಯಾಸಮುನಿಯೊಂದಿಗೆ ಸೇರಿ ಮಕ್ಕಳನ್ನು ಪಡೆಯುವವಳಾಗು ಎಂದು ಹೇಳಿದಳು.

**ಋತುಕಾಲೇಽಥ ಸಂಪ್ರಾಪ್ತೇ ವ್ಯಾಸೇನ ಸಹ ಸಂಗತಾ ।**
**ತಥಾ ಚಾಂಬಾಲಿಕಾ ರಾತ್ರೌ ಗರ್ಭಂ ನಾರೀ ದಧಾರ ಸಾ ॥೬೯॥**

ಆನಂತರ ಋತುಕಾಲವು ಬರಲಾಗಿ, ಅಂಬಾಲಿಕೆಯು ರಾತ್ರಿಯಲ್ಲಿ ಮುನಿಯೊಡನೆ ಸೇರಿ ಗರ್ಭವತಿಯಾದಳು.

**ಸೋಽಪಿ ಪಾಂಡುಃ ಸುತೋ ಜಾತೋ ರಾಜ್ಯಯೋಗ್ಯೋ ನ ಸಂಮತಃ ।**
**ಪುತ್ರಾರ್ಥೇ ಪ್ರೇರಯಾಮಾಸ ವರ್ಷಾಂತೇ ಚ ಪುನರ್ವಧೂಂ ॥೭೦॥**

ಆ ಹುಟ್ಟಿದ ಮಗುವೂ ಕುಷ್ಠರೋಗಿಯಾಗಿ ರಾಜ್ಯಕ್ಕೆ ಅನರ್ಹವಾಯಿತು. ಅದನ್ನು ಕಂಡು ಒಂದು ವರ್ಷವಾದ ಮೇಲೆ ಪುನಃ ಸತ್ಯವತಿಯು ಸೊಸೆಯನ್ನು ಪುತ್ರೋತ್ಪಾದನೆಗಾಗಿ ಪ್ರೇರಿಸಿದಳು.

**ಆಹೂಯ ಚ ತತೋ ವ್ಯಾಸಂ ಸಂಪ್ರಾರ್ಥ್ಯ ಮುನಿಸತ್ತಮಂ ।**
**ಪ್ರೇಷಯಾಮಾಸ ರಾತ್ರೌ ಸಾ ಶಯನಾಗಾರಮುತ್ತಮಂ ॥೭೧॥**

ತಿರುಗಿ ಮುನಿಶ್ರೇಷ್ಠನಾದ ವ್ಯಾಸನನ್ನು ಕರೆಯಿಸಿ, ಪ್ರಾರ್ಥಿಸಿಕೊಂಡು, ಸತ್ಯವತಿಯು ಅವನನ್ನು ಶಯ್ಯಾಗೃಹಕ್ಕೆ ರಾತ್ರಿ ಕಳುಹಿಸಿದಳು.

**ನ ಗತಾ ಚ ವಧೂಸ್ತತ್ರ ಪ್ರೇಷ್ಯಾ ಸಂಪ್ರೇಷಿತಾ ತಯಾ ।**
**ತಸ್ಯಾಂ ಚ ವಿದುರೋ ಜಾತೋ ದಾಸ್ಯಾಂ ಧರ್ಮಾಂಶತಃ ಶುಭಃ ॥**

ಆಗ ವಿಚಿತ್ರವೀರ್ಯನ ಹೆಂಡತಿಯಾದ ಸತ್ಯವತಿಯ ಸೊಸೆಯು ಆ ವ್ಯಾಸನಲ್ಲಿಗೆ ಹೋಗಲೇ ಇಲ್ಲವು. ಅವಳು ದಾಸಿಯೋರ್ವಳನ್ನು ಅಲಂಕರಿಸಿ ಕಳುಹಿಸಿದಳು. ಆ ದಾಸಿಯಲ್ಲಿ ದಿಕ್ಪಾಲಕನಾದ ಯಮಧರ್ಮನ ಅಂಶದಿಂದ ವಿದುರನು ಜನಿಸಿದನು.

**ಏವಂ ವ್ಯಾಸೇನ ತೇ ಪುತ್ರಾ ಧೃತರಾಷ್ಟ್ರಾದಯಸ್ತ್ರಯಃ ।**
**ಉತ್ಪಾದಿತಾ ಮಹಾವೀರಾ ವಂಶರಕ್ಷಣಹೇತವೇ ॥೭೩॥**

ಹೀಗೆ ವ್ಯಾಸಮುನಿಯು ಕುರುವಂಶವನ್ನು ರಕ್ಷಿಸುವುದಕ್ಕಾಗಿ ಧೃತರಾಷ್ಟ್ರನೇ ಮೊದಲಾದ ಮಹಾಪ್ರಭಾವಶಾಲಿಗಳಾದ ಆ ಮೂರುಜನ ಮಕ್ಕಳನ್ನು ಹುಟ್ಟಿಸಿದನು.

**ಏತದ್ವಃ ಸರ್ವಮಾಖ್ಯಾತಂ ತಸ್ಯ ವಂಶಸಮುದ್ಭವಂ ।**
**ವ್ಯಾಸೇನ ರಕ್ಷಿತೋ ವಂಶೋ ಭ್ರಾತೃಧರ್ಮವಿದಾಽನಘಾಃ ॥೭೪॥**

ಎಲೈ ಪಾಪರಹಿತರಾದ ಋಷಿಗಳೇ, ಈ ರೀತಿಯಾಗಿ ಆಪತ್ಕಾಲದಲ್ಲಿ ಮಾತ್ರ ಅವಲಂಬಿಸಬಹುದಾದ ಧರ್ಮವನ್ನು ತಿಳಿದವನಾದ ವ್ಯಾಸಮುನಿಯಿಂದ ಕುರುವಂಶವು ರಕ್ಷಿಸಲ್ಪಟ್ಟಿತು. ಇಂತು ನಿಮಗೆ ವ್ಯಾಸಮುನಿಯ ವಂಶಚರಿತ್ರೆಯು ಸಂಪೂರ್ಣವಾಗಿ ನನ್ನಿಂದ ಹೇಳಲ್ಪಟ್ಟಿದೆ.

**ಇತಿ ಶ್ರೀದೇವೀಭಾಗವತೇ ಮಹಾಪುರಾಣೇ ಪ್ರಥಮಸ್ಕಂಧೇ ವಿಂಶೋಽಧ್ಯಾಯಃ.**

ಇಲ್ಲಿಗೆ ಶ್ರೀದೇವೀಭಾಗವತವೆಂಬ ಮಹಾಪುರಾಣದ ಪ್ರಥಮಸ್ಕಂಧದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಇತಿ ಪ್ರಥಮಸ್ಕಂಧಃ ಸಮಾಪ್ತಃ ॥

**ಮೊದಲನೆಯ ಸ್ಕಂಧವು ಮುಗಿದುದು.**

**ಆರ್ಯಾಣಾಂ ಸಂಸ್ಕೃತಿಂ ತಾಮೃಷಿಕವಿಸುಮನೋಲಾಲಿತಾಂ ಧರ್ಮಮೂಲಾಂ**
**ರಕ್ಷಂತೀ ವರ್ಧಯಂತೀ ವಿಗತಮೃತಿಜರಾ ರಾಜತೇ ವೇದಭಾಷಾ ।**
**ಸೈಷಾ ಗೀರ್ವಾಣವಾಣೀ ಜಗದಿದಮವತಾನ್ನಾಶನೇ ಸ್ಪರ್ಧಮಾನಂ**
**ದತ್ವಾ ಶಾಂತಿಂ ವಿವೇಕಂ ಸುಖಯುತು ಜನತಾಂ ಧಾರ್ಮಿಕತ್ವಾಭಿವೃದ್ಧ್ಯಾ ॥**

**ಮಹೀಶೂರಾಧಿಪಶ್ರೀಮಜ್ಜಯಚಾಮೇಂದ್ರಶಾಸನಾತ್ ।**
**ದೇವೀಭಾಗವತಸ್ಯಾನುವಾದಂ ಕನ್ನಡಭಾಷಯಾ ॥**
**ಸುಬ್ಬಮಾಂಬಾದೇವಯಜ್ವತನಯಶ್ಚಂದ್ರಶೇಖರಃ ।**
**ಜನಾನಾಮುಪಕಾರಾಯ ರಚಯಾಮಾಸ ಸಾದರಂ ॥**
**ಸೇವಿತಾಽವತು ಸಾ ದೇವೀ ಸರ್ವಶಕ್ತಿಸ್ವರೂಪಿಣೀ ।**
**ಪ್ರಾಣಿಕರ್ಮವಶಾದ್ಬ್ರಹ್ಮಣೇಚ್ಛಾಜ್ಞಾನಕ್ರಿಯಾತ್ಮಿಕಾ ॥**

**॥ ಶ್ರೀರಸ್ತು ॥**

